# ಶ್ರೇಯಸ

ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ (ರಿ) ಬೆಂಗಳೂರು



ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ (ರಿ)
ಬೆಂಗಳೂರು




ಕಟ್ಟಡದ ಉದ್ಘಾಟನಾ ಸಮಾರಂಭದ

# ಸ್ಮರಣ ಸಂಚಿಕೆ

ತಾ. 7.2.1988

ಶ್ರೀ ಪೂಜಾರಿ ಮೊಣ್ಣಪ್ಪನವರ
ಸಂಪಾದಕತ್ವದಲ್ಲಿ

# ಶ್ರೇಯಸ್

## ಸ್ಮರಣ ಸಂಚಿಕೆ

ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಮೂಲಕ
ಪ್ರಕಟಿಸಲ್ಪಟ್ಟಿತು

ಬಿಡುಗಡೆ
7ನೇ ಫೆಬ್ರವರಿ 1988



ಮುಖ ಪುಟ
ಶ್ರೀ ದೇಶ ಪಾಂಡೆ

ಬೆಲೆ :
[redacted] ರೂಪಾಯಿ Rs. 15-00

ಮುದ್ರಣ :
ಇಂಪ್ರೆಷನ್ಸ್
ಸಂಪಿಗೆ ರಸ್ತೆ
8ನೇ ಅಡ್ಡರಸ್ತೆ
ಮಲ್ಲೇಶ್ವರಂ
ಬೆಂಗಳೂರು–560 003




—ಹೊದ್ದಟಿ ಭವಾನಿ ಶಂಕರ್
ಬಿ. ಇ. ಎಲ್. ಬೆಂಗಳೂರು

ಸ್ವಾಗತವು ನಿಮಗೆಲ್ಲ ಸುಸ್ವಾಗತ
ಸ್ವಾಗತವು ಈ ಸಭೆಗೆ ಸುಸ್ವಾಗತ

ಇಂದಿನ ಈ ಸಂತಸದ ಸಂಭ್ರಮದ ಸಮಯದಲಿ
ಸೇರಿರುವ ಸಭಿಕರಿಗೆ ಸಂಘದವರೆಲ್ಲರೂ,
ಸಂತೃಪ್ತಿಯಲಿ ಸಾರುವೆವು ಸುಸ್ವಾಗತ ॥

ಅತಿಥಿಗಳಾಗಿಂದು ಅತೀ ದೂರದಿಂಬಂದು
ಆತ್ಮೈಕ್ಯ ಭಾವದಲಿ ಕೂತಿರುವ ಮಹಾಶಯರೆ ।
ನಿಮಗೆಲ್ಲ ಬಯಸುವೆವು ಸುಸ್ವಾಗತ ।

ನಮ್ಮ ಸಂಘದ ಯತ್ನದಿಂದಲೇ ತೋರುವೀ
ಕಟ್ಟಡುಧ್ಘಾಟನೆಯ ಮಾಡುವ ಸನ್ಮಾನ್ಯ
ಸಚಿವ ಜೆವಿಜಯರಿಗೆ ಸುಸ್ವಾಗತ ॥

ಈ ಸಂಘ ನೀಡಿದ ಶುಭ ವಾರ್ತೆ ಕೇಳಿನೀವ್
ಬಂದಂತ ಸಣ್ಣ ಕೈಗಾರಿಕೆಯ ಮಂತ್ರಿಗಳೆ
ನಿಮಗಿಹುದು ಸಂಘದಿಂ ಸುಸ್ವಾಗತ

ಇಂದಿನ ಈ ಶುಭದಿನದಿ ಸ್ಮರಣ ಸಂಚಿಕೆಯನ್ನು
ಹೊರತರುವ ಕುರುಂಜಿ ಶ್ರೀ ವೆಂಕಟ್ರಮಣ ಗೌಡ್ರೆ
ನಿಮಗೀಗ ಸಂಘದಿಂ ಸುಸ್ವಾಗತ ।

ಎಂದೆಂದಿಗೂ ನಿಮ್ಮ ಸಹಕಾರನೆನಪಿಟ್ಟು
ಸಂಘವಿದು ಸಲ್ಲಿಸುವ ಕೃತಜ್ಞತೆಯು ನಿಮಗುಂಟು
ನಿಮಗೆ ನಾವ್ ಬಯಸುವೆವು ಸುಸ್ವಾಗತ ॥

ನಿಮ್ಮ ಕಾರ್ಯವ ತ್ಯಜಿಸಿ ನಮ್ಮ ಸಂಘವ ಬಯಸಿ
ಬಂದಂಥ ಮುಖ್ಯಅತಿಥಿ ಮರಿಗೌಡರವರೆ ।
ನಿಮಗಿಹುದು ಸಂಘದಿಂ ಸುಸ್ವಾಗತ ॥

ಒಕ್ಕಲಿಗ ಸಂಘದಾ ಅಧ್ಯಕ್ಷ ನೀವಿಂದು
ನಿಮ್ಮ ಪರಿಚಯವೇನು ಹೊಸತಲ್ಲ ನಮಗೆಂದೂ
ನಿಮಗೆ ನಾವ್ ಬಯಸುವೆವು ಸುಸ್ವಾಗತ ॥

ನಮ್ಮ ಸಂಘದಿ ಹಿಂದೆ ದುಡಿದು ಜನ ಪ್ರಿಯರಾದ
ಪಿ. ವೆಂಕಟ್ರಮಣ ಗೌಡ್ರೆ ನಿಮಗಿಂದು ನಾವೆಲ್ಲ
ಆದರದಿ ಬಯಸುವೆವು ಸುಸ್ವಾಗತ ॥

ನಮ್ಮ ಗೌಡರಲಿಂದು ಹೆಸರಾಂತರಾಗಿರುವ
ಪೇರಿಯನ ಪೂವಯ್ಯ ದಂಬೆ ಕೋಡಿ ಸುಬ್ರಾಯ
ನಿಮಗಿಬ್ಬರಿಗೂ ಬಯಸುವೆವು ಸುಸ್ವಾಗತ ॥

ಎಲೆ ಮರೆಯ ಕಾಯಂತೆ ಇರುವ ಅಚ್ಯುತರವರೆ।
ನಿಮ್ಮ ಸಲಹೆಯಲಿಂದು ಕಟ್ಟಡವೂ ಶೋಭಿಪುದು
ನಿಮಗೀಗ ಸಂತಸದ ಸುಸ್ವಾಗತ ॥

ಈ ಸಂಘ ಮರೆಯಲಾಗದ ನಿಮ್ಮ ಸೇವೆಯನು
ಮುಕ್ತ ಕಂಠದಿ ಇಂದು ಹೊಗಳುತಲೀ ಸಂಘವಿದು
ನಿಮಗಿದೋ ಆದರದ ಸುಸ್ವಾಗತ ॥

ಇಂದಿಹರು ಅಧ್ಯಕ್ಷರಾಗಿಂದು ಸಭೆಯಲ್ಲಿ
ಸಂಘದಲಿ ಹಿರಿಯ ಜನ ವೀರಪ್ಪ ಗೌಡರೆ ।
ನಿಮಗೀಗ ಮಮತೆಯ ಸುಸ್ವಾಗತ ॥

ನಮ್ಮ ಸಂಘದ ದಾರಿ ದೀಪಕರೆ ನೀವಮಗೆ,
ನಿಮ್ಮ ಹುರುಪನು ನೋಡಿ ಬಂದಿಹುದು ಹುರುಪೆಮಗೆ,
ನಿಮಗೀಗ ನಲ್ಮೆಯ ಸುಸ್ವಾಗತ ॥

ಇಂದಿನ ಸಭೆಗಿಲ್ಲಿ ಓಗೊಟ್ಟು ಬಂದಂತ
ಮಹಿಳೆಯರೊಡಗೂಡಿ ಮಕ್ಕಳಿಗೂ ನಾವಿಂದು
ಬಯಸುವೆವು ನಲ್ಮೆಯಲಿ ಸುಸ್ವಾಗತ ॥

# ಸಂಚಿಕೆಯ ಸಂಪಾದಕ ಮಂಡಳಿ

ಪ್ರಧಾನ ಸಂಪಾದಕರು

**ಶ್ರೀ ಪೂಜಾರಿ ಮೊಣ್ಣಪ್ಪ**

ಸಹಾಯಕ ಸಂಪಾದಕರು

**ಶ್ರೀ ಹೊದ್ದೆಟ್ಟಿ ಭವಾನಿಶಂಕರ್**

**ಶ್ರೀ ತಳೂರು ಮೊಣ್ಣಪ್ಪ**

**ಸ ಲ ಹಾ ಮಂ ಡ ಳಿ**

ಡಾ॥ ಕಾಯರಮಾರ್ ವೀರಪ್ಪ ಗೌಡರು

ಶ್ರೀ ಕೊಕ್ಕಡ ಲಕ್ಷ್ಮಣಗೌಡರು

ಡಾ॥ ಪಡ್ಡಂಬೈಲು ಮುದ್ದಪ್ಪಗೌಡರು

ಶ್ರೀ ಕಾಯರಮಾರ್ ರವೀಂದ್ರನಾಥ್

ಶ್ರೀ ಅಮೆರಾಮಣ್ಣಗೌಡರು

ಶ್ರೀ ಪೂಂಬಾಡಿ ತಮ್ಮಪ್ಪ

ಶ್ರೀ ಪೂಜಾರಿ ಪೂವಯ್ಯ

ಶ್ರೀ ನಂಗಾರು ನಾಣಯ್ಯ

# ಸಂಪಾದಕೀಯ

ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ ಬೆಂಗಳೂರು ಇದರ ಮೂಲಕ ಪ್ರಕಟಿಸಿ ಹೊರಬೀಳುತ್ತಿರುವ "ಶ್ರೇಯಸ್" ಮೂರನೆ ಸಂಕಲನ, ಆದರೆ ಇದೇರಂತೆ ಇನ್ನೆರಡು ಸಂಚಿಕೆಗಳ ಬಿಡುಗಡೆಗೆ ಯಾವ ಸಂದರ್ಭ ಸನ್ನಿವೇಶಗಳೂ ಇರಲಿಲ್ಲ, ಆ ಎರಡು ಸಂಚಿಕೆಗಳು ಈ ಸಮಾಜದ ಆಕಾಂಕ್ಷೆಗಳಲ್ಲೊಂದಾದ ನಮ್ಮ ಸಮಾಜದ ಜನರ ಸಂಸ್ಕೃತಿ ಚರಿತ್ರೆಯನ್ನು ಜನರಿಗ ಪ್ರಚಾರಗೊಳಿಸಿ ಅವರಿಗೆ ಅವರ ಸಂಸ್ಕೃತಿ ಮತ್ತು ಚರಿತ್ರೆಯ ಅರಿವು ಮಾಡಿಸುವ ಉದ್ದೇಶವಾಗಿತ್ತು. ಇದರಿಂದಾಗಿ ಗೌಡ ಜನಾಂಗದ ವಿದ್ವಾಂಸರಲ್ಲಿ, ಹಿರಿಯರಲ್ಲಿ, ಯುವಕ ಯುವತಿಯರಲ್ಲಿ ಈ ವಿಷಯದಲ್ಲಿ ಹೆಚ್ಚಿನ ರೀತಿಯಲ್ಲಿ ಅರೆ ಭಾಷೆಯ ಕವನ, ಬರವಣಿಗೆ ಸಂಸ್ಕೃತಿಯ ವಿಷಯದಲ್ಲಿ ಸಂಶೋದನೆ ಪ್ರಾರಂಭಿಸಲು ಉತ್ತೇಜನ ಕೊಟ್ಟಂತಾಗಿದೆ. ಅರೆ ಭಾಷೆಯ ಕವನ ರಚನೆ ಈ ಸಮಾಜದ ಮೂಲಕ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಯುವಕ ಯುವತಿಯರಿಗೆ ದಾರಿ ತೋರಿಸಿಕೊಟ್ಟಿದೆ. ಮನೆಯಿಂದ ಹೊರಗೆ ಹೊರಟರೆ ಅರೆಭಾಷೆಯನ್ನು ಮಾತನಾಡಲು ಹಿಂಜರಿಯುತ್ತಿದ್ದ ಯುವಕ. ಯುವತಿಯರು ತನ್ನ ಮಾತೃ ಭಾಷೆಯಾದ ಅರೆಗನ್ನಡವನ್ನು ಹೋಡ ಕಡೆಯೂ ನಿರ್ಭೀತಿಯಿಂದ ಮಾತಾಡುವ ಧೈರ್ಯ ಲೇಖನಗಳನ್ನು ಹಾಡುಗಳನ್ನು ಬರೆದು ಪ್ರಕಟಿಸುವ ಹುರುಪು ಬಂದಿದೆ. ಡಾ॥ ಕೋಡಿ ಕುಶಾಲಪ್ಪ ಗೌಡರು ಹೇಳುವಂತೆ ಈ ಅರೆ ಭಾಷೆ ಅಥವಾ ಅರೆಗನ್ನಡ ಅತಿ ಪುರಾತನ ಭಾಷೆಗಳಲ್ಲಿ ಎರಡನೇ ಸ್ಥಾನವನ್ನು ಗಳಿಸಿದೆ ಎಂಬುದು ಹೆಮ್ಮೆಯ ವಿಷಯವಾಗಿದೆ. ಗೌಡರಲ್ಲಿ ತುಳು ಭಾಷೆಯನ್ನಾಡುವ ಜನರಿದ್ದಾರೆ, ಅವರು ನೆಲೆಸಿದ ಪ್ರದೇಶದ ಪರಿಸರ ಕ್ಕಮಾನುಣಗುವಾಗಿದೆ ಎಂದು ಹೇಳಬಹುದು.

ಈ ಸ್ಮರಣ ಸಂಚಿಕೆಯು ಹಿಂದಿನ ಎರಡು ಸಂಚಿಕೆಗಳಿಗಿಂತ ಹೆಚ್ಚಿನ ಭಿನ್ನ ರೀತಿಯಲ್ಲಿ ಹೊರಬಂದಿದೆ. ಕಾರಣವೇನಂದರೆ. ಈ ಸಂಚಿಕೆಯಲ್ಲಿ ಸಮಾಜದಲ್ಲಿ ಕಾಣಿಸಿಕೊಳ್ಳುತ್ತಿರುವ ವರದಕ್ಷಿಣೆಯ ಪಿಡುಗು ಭೌತಿಕ ಜ್ಞಾನಗಳಿಸುವುದರೊಡನೆ ಆತ್ಮ ಜ್ಞಾನಾರ್ಜನಯ ವಿಷಯ ಸಮಾಜದ ಒಗ್ಗಟ್ಟು ಸಮಾಜದ ಜನರ ಆರ್ಥಿಕ ಮತ್ತು ವಿದ್ಯಾಭ್ಯಾಸ ಹಿಂದುಳಿದಿರುವಿಕಗೆ ಕಾರಣವೇನೆಂಬಂದನ್ನು ಲೇಖನಗಳಲ್ಲಿ ವಿವರಿಸಿದ್ದಾರೆ, ಈ ರೀತಿಯ ಲೇಖನಗಳು ಸಮಾಜದ ಸಮಸ್ಯೆಗೆಳತ್ತ ಗಮನ ಹರಿಸುವಂತೆ ಮಾಡಿದೆ.

1960ರಂದ 1968ರೆ ಮೂರು ದಶಕಗಳು ಗೌಡರ ಚರಿತ್ರೆಯಲ್ಲಿ "ಶ್ವರ್ಣಯುಗ"ವೆಂದರೆ ತಪ್ಪಾಗಲಾರದು, ಕಾರಣವೇನೆಂದರೆ. 1960ರಂದೀಚಿಗೆ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ವಿದ್ಯಾ ಸಂಘಗಳ ಅಭಿವೃದ್ಧಿಗೆ ಜಿಲ್ಲೆಗಳ ವಿವಧ ಕಡೆಗಳಲ್ಲಿ ಗೌಡರ ಸಮಾಜಗಳು ತಲೆಎತ್ತಿ ಗೌಡರ ಸಂಸ್ಕೃತಿ ಚರಿತ್ರೆ ಸಮಾಜದ ಅಭಿವೃದ್ರಿ ವಿಷಯ ಹಲವಾರು ಸಂಚಿಕೆಗಳು ಪ್ರಕಟಗೊಂಡು ಜನರಲ್ಲಿ ಸಾಮಾಜಿಕ ಅಭಿವೃದ್ಧಿ ಬಗ್ಗೆ ಪ್ರಜ್ಞೆ ಮೂಡುವಂತೆ ಮಾಡಿವೆ.

ಈ ಸ್ಮರಣ ಸಂಚಿಕೆಯು ಕೊಡಗು ಮತ್ತು ಡ. ಕ, ಗೌಡ ಮುಖಂಡರ ಹಿರಿಯರ ವಿದ್ವಾಂಸರ ಲೇಖನಗಳಲ್ಲದೆ ಪ್ರತಿಯೊಬ್ಬರೂ ಕಳುಹಿಸಿ ಲೇಖನಗಳನ್ನು ಲೇಖಕನ ಭಾಷೆ ಅಭಿಪ್ರಾಯುಗಳದ್ನು ಅವರದ್ದೇ ಆವ ರೀತಿಯಲ್ಲಿ ಬರೆದಿದ್ದರೂ ಅಲ್ಲಲ್ಲಿ ಅಲ್ಪ ಸ್ವಲ್ಪ ಬದಲಾವಣೆಗಳೊಡನೆ ಪ್ರಕಟಿಸಿ ತಮ್ಮ ಅಭಿಪ್ರಾಯುಗಳನ್ನು ವ್ಯಕ್ತ ಪಡಿಸಲು ಅವಕಾಶ ಮಾಡಿಕೊಡಲಾಗಿವೆ. ಈ ರೀತಿ ಮಾಡುವುದರಿಂದ ನಮ್ಮ ಸಮಾಜದ ಬಂಧುಗಳಲ್ಲಿ ಲೇಖನ. ಕತೆ. ಕವನ, ಕಾದಂಬರಿ. ಚುಟುಕಗಳನ್ನು ಗಾದೆಗಳನ್ನು ಬರೆ

ಬರೆಯುವ ಹಾಗೂ ಸಂಗ್ರಹಿಸುವ ಹವ್ಯಾಸ ಉಂಟಾಗಿ ಸಮಾಜದ ಸಾಹಿತ್ಯ ಸಂಸ್ಕೃತಿ' ಕಲೆ ವಿಜ್ಞಾನದ ವಿಷಯದಲ್ಲಿ ಹೆಚ್ಚು ಹೆಚ್ಚಾಗಿ ಅಭ್ಯಾಸಮಾಡಿ ತಾವು ತಿಳಿದ ವಿಷಯುವನ್ನು ಸಮಾಜದ ಬೇರೆಯವರಿಗೆ ತಿಳಿಸುವಂತೆ ಪ್ರೋತ್ಸಾಹ ನೀಡುವಂತೆ ಮಾಡಲಾಗಿದೆ.

ಈ ಸಂಚಿಕೆಯ ಬಿಡುಗಡೆಯಿಂದ ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಮತ್ತು ಅದರ ಉಪ ಸಂಸ್ಥೆಯಾದ ಕೆಂಪೇಗೌಡ ಗ್ರಾಮೀಣ ಗೃಹ ನಿರ್ಮಾಣ ಸಹಕಾರ ಸಂಘದ ಸ್ಥಾಪನೆ. ಅವುಗಳು ನಡೆದು ಬಂದ ದಾರಿ ಅವುಗಳ ಉದ್ದೇಶ, ಅವುಗಳು ಸಾಧಿಸಿದ ಕಾರ್ಯಗಳು ಇನ್ನು ಮುಂದೆ ಸಾಧಿಸಬೇಕಾದ ವಿಷಯಗಳು ಏನೆಂಬುದನ್ನು ತಿಳಿಯಪಡಿಸಲು ಒಂದು ಸಂದರ್ಭವಾಗಿದೆ. ಇದೇ ರೀತಿ ಕೊಡಗು ಗೌಡ ವಿದ್ಯಾ ಸಂಘ ಮಡಿಕೇರಿ ಮತ್ತು ಮಡಿಕೇರಿ ಗೌಡ ಸಮಾಜ ಇವುಗಳ ವಿಷಯದಲ್ಲೂ ಜನರಿಗೆ ತಿಳುವಳಿಕೆ ಮಾಡಿಕೊಡುವ ಲೇಖನಗಳು ಪ್ರಕಟಗೊಂಡಿವೆ.

ಈ ರೀತಿಯಾಗಿ ಈ ಸ್ಮರಣ ಸಂಚಿಕೆ ಗೌಡರ ಹಾಗೂ ಬೆಂಗಳೂರಿನ ಗೌಡ ಸಮಾಜದ ಪ್ರಯತ್ನ ಪೂರ್ವಕವಾದ ಕಾರ್ಯ ನೆರವೇರಿದುದರಿಂದ ಇದನ್ನು ಶ್ರೇಯಸ್ ಎಂಬುದಾಗಿ ನಾಮಕರಣ ಮಾಡಿರುವುದು ಸಂದರ್ಭೋಚಿತವಾಗಿ ಎಲ್ಲಾ ಬಂಧುಗಳ ಶ್ರೇಯಸ್ಸನ್ನು ಕೋರುತ್ತದೆ.

ಈ ಶ್ರೇಯಸ್ ಒಬ್ಬ ವ್ಯಕ್ತಿಯ ಬರಹವಾಗಿರದೆ ಸಮಾಜದ ಎಲ್ಲಾ ವಿಧದ ಜನರ ಬರಣಿಗೆಯಾಗಿರುವುದರಿಂದ ಇಲ್ಲಿ ಭಾಷಾ ಶೈಲಿಗೆ ಪ್ರಧಾನತೆಯನ್ನು ಕೊಡುವ ಗಮನ ಹರಿಸದೆ ವ್ಯಕ್ತಿಗಳ ಅಭಿಪ್ರಾಯಕ್ಕೆ ಮನ್ನಣೆ ಕೊಟ್ಟಿರುವುದರಿಂದ ಲೇಖಕರು ವ್ಯಕ್ತ ಪಡಿಸಿದ ಅಭಿಪ್ರಾಯಗಳಲ್ಲಾಗಲೀ, ಬರೆದ ಭಾಷಾ ಶೈಲಿಯಲ್ಲಾಗಲಿ ವ್ಯಾಕರಣ ಮತ್ತು ಅಭಿಪ್ರಾಯಗಳಲ್ಲೆ ವಾಚಕರು ಯಾವುದೇ ನ್ಯೂನತೆಗಳಿದ್ದರೆ ಅವುಗಳನ್ನು ತಪ್ಪಾಗಿ ತೆಗೆದುಕೊಳ್ಳದೆ ಅಂತಹದೇನಾದರೂ ತಪ್ಪುಗಳಾಗಿದ್ದರೆ ಅವುಗಳಿಗೆ ಯಾವುದೇ ರೀತಿಯ ವ್ಯಕ್ತಿಗತವಾದ ಅಥವಾ ಪ್ರಾದೇಶಿಕವಾಗಿಯಾಗಲೀ ದೂಷಿಸುವ ಅಥವಾ ಅವಹೇಳನ ಮಾಡುದ ಅಭಿಪ್ರಾಯವಲ್ಲವೆಂದು ತಿಳಿಯಬೇಕಾಗಿ ವಿನಂತಿಸಿಕೊಳ್ಳುತ್ತಿದ್ದೇವೆ.

ಈ ಸಂಚಿಕೆಯನ್ನು ಹೊರತರಲು ಸಹಕರಿಸಿ ನಮ್ಮ ಕರೆಗೆ ಓಗೊಟ್ಟು ಲೇಖನ, ಕವನ, ಕಥೆ, ಚುಟುಕುಗಳು ಮತ್ತು ಗಾದೆಗಳನ್ನು ಕಳುಹಿಸಿಕೊಟ್ಟ ಲೇಖಕರಿಗೂ ಸಂಗ್ರಹಕಾರರಿಗೂ, ಈ ಲೇಖನಗಳ ಹಸ್ತಪ್ರತಿ ತಿದ್ದುವುದಕ್ಕೆ ಸಹಾಯಕರಾದ ನನ್ನ ಸಹಸಂಪಾದಕರಾದ ಶ್ರೀ ಹೊದ್ದೆಟ್ಟಿ ಭವಾನಿಶಂಕರ್ ಹಾಗೂ ತಳೂರು ಮೊಣ್ಣಪ್ಪನವರಿಗೂ ಹಾಗೂ ಸಮಯೋಚಿತ ಸಲಹೆಯನ್ನು ಕೊಟ್ಟ ಸಂಪಾದಕ–ಮಂಡಳಿಯ ಸದಸ್ಯರಿಗೂ, ಈ ಸಂಚಿಕೆಯ ಮುಖಪುಟಕ್ಕೆ ಚಿತ್ರವನ್ನು ಅಂದವಾಗಿ ಬರೆದುಕೊಟ್ಟ ಶ್ರೀ ದೇಶಪಾಂಡೆಯವರಿಗೂ ಸಂಚಿಕೆಯ ಮುದ್ರಣ ಕಾರ್ಯ ಅಂದವಾಗಿ ಮುದ್ರಿಸಿ ನಿಗದಿ ವೇಳೆಗೆ ಬಿಡುಗಡೆ ಮಾಡಲು ಸಹಾಯಕರಾದ ಇಂಪ್ರಷನ್ಸ್ ಮುದ್ರಣಾಲಯದ ಮಾಲೀಕರಾದ ಶ್ರೀ ವಿ. ಆರ್. ನಾಥ್‌ರವರಿಗೂ ಹಗಲೂ ರಾತ್ರಿಯನ್ನು ಲೆಕ್ಕಿಸದೆ ಶೀಘ್ರದಲ್ಲಿ ಉತ್ಸಾಹದಿಂದ ಕೆಲಸ ಮಾಡಿದ ಆಡಳಿತ ವರ್ಗ ಹಾಗೂ ಮುದ್ರಣಾಲಯದ ಕಾರ್ಮಿಕ ಬಂಧುಗಳಿಗೂ ನಮ್ಮಗಳ ಕೇಳಿಕೆ ಮೇರೆಗೆ ನಮ್ಮ ಸಂಚಿಕೆಗೆ ಜಾಹೀರಾತುಗಳನ್ನು ಕಳುಹಿಸಿಕೊಟ್ಟು ಸಹಕರಿಸಿದ ಎಲ್ಲಾ ಜಾಹಿರಾತುದಾರರಿಗೂ ನನ್ನ ಹೃತ್ಪೂರ್ವಕವಾದ ವಂದನೆಗಳು.

ಜೈ ಹಿಂದ್.

**ಪೂಜಾರಿ ಮೊಣ್ಣಪ್ಪ**

ಪ್ರಧಾನ ಸಂಪಾದಕರು

# ಕಟ್ಟಡದ ಉದ್ಘಾಟಕರು



**ಶ್ರೀ ಬಿ. ಎ. ಜೀವಿಜಯ B. sc.,**

ಕರ್ನಾಟಕ ಸರಕಾರದ

ಸಣ್ಣ ಕೈಗಾರಿಕೆಗಳ ಮಾನ್ಯ ಮಂತ್ರಿಗಳು

# ಸ್ಮರಣ ಸಂಚಿಕೆ ಬಿಡುಗಡೆ



ಶ್ರೀ ಕೆ. ಎಂ. ವೆಂಕಟ್ರಮಣ ಗೌಡ
ಸ್ಥಾಪಕಾಧ್ಯಕ್ಷರು, ನೆಹರು ಮೆಮೋರಿಯಲ್ ಕಾಲೇಜು, ಸುಳ್ಯ ದಕ್ಷಿಣ ಕನ್ನಡ



ಡಾ. ಕೆ. ವೀರಪ್ಪಗೌಡ G. M. V. C. P. G. (usa)
ಅಧ್ಯಕ್ಷರು, ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ (ರಿ.), ಬೆಂಗಳೂರು



**ಕಾರ್ಯಕಾರಿ ಮಂಡಳಿ**

ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ (ರಿ.), ಬೆಂಗಳೂರು



ಆಡಳಿತ ವರ್ಗ

ಕೆಂಪೇಗೌಡ ರೂರಲ್ ಹೌಸ್ ಬಿಲ್ಡಿಂಗ್

ಕೋ-ಆಪರೇಟಿವ್ ಸೊಸೈಟಿ (ರಿ.), ಬೆಂಗಳೂರು

# ಪ್ರಾರ್ಥನೆ

ರಚನೆ—ಹೊದ್ದಟ್ಟಿ ಭವಾನಿಶಂಕರ್

ಫಲಿಸಿತಿಂದೆಮಗಿಲ್ಲಿ ಕಾರ್ಯದಲಿ ಗೆಲುವು ।
ಬಂದಿಹುದು ನಮಗೀಗ ಒಗ್ಗಟ್ಟಿನಲಿ ಭಲವು ॥ಫ॥

ಅಂದು ಈ ಸಂಘವದು ಚಿಕ್ಕಗಿಡವಾಗಿದ್ದು
ಇಂದು ಮರವಾಗೆಮಗೆ ನೆರಳೀಯುತಿಹುದು
ಇವರ ಅಡಿಯಲಿ ನಾವು ಸಂಘಟಿತರಾಗಿ
ಹಂಚಿಕೊಳ್ಳುವ ಹರುಷ ಶ್ರಮದ ಫಲವಾಗಿ ॥ಫ॥

ಹನಿಕೂಡಿ ಹಳ್ಳವದು ಹರಿಯುತ್ತಿರುವಂತೆ
ಒಗ್ಗಟ್ಟಿಲಿರೆ ನಮಗೆ ಯಾಕಿಹುದು ಚಿಂತೆ
ಇದರ ಅಡಿಯಲಿ ನಾವು ಎಂದೆಂದೂ ಒಂದೆ
ಇದ ನಾವು ಮರೆಯದಿರೆ ಹೋಗುವೆವು ಮುಂದೆ ॥ಫ॥

ನಮ್ಮ ಸಂಘಕೆ ಶ್ರಮಿಸಿ ಬಳಲಿರಲು ಎಲ್ಲ
ತೆರೆದಿಹನು ಬಾಗಿಲನು ದೇವನದೊ ಮೆಲ್ಲ
ದುಡಿಮೆ ನಮ್ಮದು ಫಲವ ಕರುಣಿಸೆನ್ನುತ್ತ
ಯಾಚಿಸುವ ಕುಲದೇವರನು ಕೈಯ್ಯ ಮುಗಿಯುತ್ತ ॥ಫ॥



ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ (ರಿ.)

# ನಡೆದು ಬಂದ ದಾರಿ

1964ರಲ್ಲಿ ಬೆಂಗಳೂರಿನಲ್ಲಿ ಮೊಟ್ಟ ಮೊದಲು "ಕೊಡಗು ಗೌಡ ಸಮಾಜ" ಎಂಬ ನಾಮಾಂಕಿತದಿಂದ ಪ್ರಾರಂಭವಾಯಿತು. ಈ ಸಮಾಜದ ಉದ್ದೇಶವು ಕೊಡಗು ಗೌಡರ ಸಾಂಸ್ಕೃತಿಕ ಚಟುವಟಿಕೆಗಳನ್ನು ಆಚರಿಸುವುದು ಹಾಗೂ ಕೊಡಗಿನಿಂದ ಬಂದ ಗೌಡರು ಬೆಂಗಳೂರಿನಲ್ಲಿ ನೆಲೆಸಿದವರು ವರ್ಷದಲ್ಲಿ ಒಂದೆರಡು ಸಲ ಒಂದು ಸ್ಥಳದಲ್ಲಿ ಸೇರಿ ಸಂತೋಷದಿಂದ ಕಾಲ ಕಳೆಯುವ ರೀತಿಯಾಗಿತ್ತು. ಆ ರೀತಿ 1968ರ ವರಗೆ ನಡೆದು 1968ರಲ್ಲಿ ಸಮಾಜದವರು "ಕೊಡಗು ಗೌಡ ಸಂಸ್ಕೃತಿ" ಎಂಬ ಸ್ಮರಣ ಸಂಚಿಕೆಯನ್ನು ಪ್ರಕಟಿಸಿ ಗೌಡರ ಚಾರಿತ್ರಿಕ ಹಿನ್ನಲೆ ಗೌಡರ ಹುಟ್ಟಿನಿಂದ ಸಾಯುವವರೆಗಿನ ಪದ್ಧತಿಗಳು ಸೋಬಾನೆ ಹಾಗೂ ಅರೆ ಭಾಷೆಯ ಮತ್ತು ತುಳು ಭಾಷೆಯ ಹಾಡು ಗಳನ್ನು ಪ್ರಕಟಿಸಿ ಗೌಡರ ಇತಿಹಾಸದಲ್ಲಿ ಪುಸ್ತಕದ ರೂಪದಲ್ಲಿ ಮೊತ್ತ ಮೊದಲಿನ ಪ್ರಕಟಣೆಯನ್ನು ಗೌಡ ಬಾಂಧವರಿಗೆ ಓದುವ ಸಂದರ್ಭವನ್ನು ಕಲ್ಪಿಸಿ ಕೊಟ್ಟರು, ಎಂಬುದಾಗಿ ಹೇಳಲು ಹೆಮ್ಮೆಯಾಗಿದೆ. ಇದೇ ಸಮಯದಲ್ಲಿ ಈ ಸಮಾಜಕ್ಕೊಂದು ಉಪ ನಿಯಮವನ್ನು 1968ನೇ ಇಸವಿಯ ಮಹಾ ಸಭೆ ಯಲ್ಲಿ ಮಂಡಿಸಲಾಗಿ ಕೊಡಗಿನಿಂದಲೂ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯಿಂದ ಸಭೆಗೆ ಹಾಜರಾದ ಕುಲ ಭಾಂಧವರುಗಳ ಸಲಹೆಯ ಮೇರೆಗೆ ಕೊಡಗು ಗೌಡ ಸಮಾಜದ ಬದಲಾಗಿ "ಗೌಡ ಸಮಾಜ ಬೆಂಗಳೂರು" ಎಂಬುದಾಗಿ ಹೆಸರಿಟ್ಟ ಉಪನಿಯಮ ವನ್ನು ಮಹಾಸಭೆಯು ಅಂಗೀಕರಿಸಿತು. ಆದರೆ ಮಹಾಸಭೆಯ ನಂತರ ಹಲವಾರು ಮಹನೀಯರು "ಗೌಡ ಸಮಾಜ ಬೆಂಗಳೂರು" ಎಂಬ ಹೆಸರು ಸರಿ ಇಲ್ಲವೆಂಬುದಾಗಿ ಆರೋಪವನ್ನು ಎತ್ತುತ್ತಿದ್ದರಿಂದ 1969ರಲ್ಲಿ ಒಂದು ವಿಶೇಷ ಮಹಾ ಸಭೆಯನ್ನು ಕರೆದು "ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ" ಎಂಬುದಾಗಿ ಪುನಃ ಹೆಸರನ್ನು ತಿದ್ದುಪಡಿ ಮಾಡಲಾಯಿತು.

ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದವರು 1969ರಲ್ಲಿ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡರಿಗೆ ಕರ್ನಾಟಕದ ರಾಜಧಾನಿಯೂ ಹಾಗೂ ಭಾರತದ ಕೈಗಾರಿಕಾ ರಾಜಧಾನಿ ಎಂದು ಕರೆಯಲ್ಪಡುವ ಬೆಂಗಳೂರಿಗೆ ಕೊಡಗು ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಿಂದ ಕೆಲಸಕ್ಕಾಗಿ ಉನ್ನತ ತಾಂತ್ರಿಕ ಹಾಗೂ ಇನ್ನಿತರ ವಿಧ್ಯಾಭ್ಯಾಸಕ್ಕಾಗಿ ಬರುವ ಬಡ ಯುವಕ ಯುವತಿಯರು ತಾವು ಬಂದ ಕೆಲಸ ಗಳನ್ನು ಸುಗಮವಾಗಿ ಹಾಗೂ ಕಡಿಮೆ ಖರ್ಚಿನಲ್ಲಿ ಕೆಲಸ ಕಾರ್ಯಗಳನ್ನು ಮಾಡಿಕೊಂಡು ಹೋಗಲು ಹಾಗೂ ಇಲ್ಲಿ ನೆಲೆಸಿರುವ ಗೌಡರ ಸಾಂಸ್ಕೃತಿಕ, ಸಾಮಾಜಿಕ, ವಿಧ್ಯಾಭ್ಯಾಸ, ಆರ್ಥಿಕ ಅಭಿವೃದ್ಧಿಯನ್ನು ಮಾಡಿಕೊಳ್ಳಲು ತಮ್ಮದೇ ಆದ ಸ್ವಂತ ಕಟ್ಟಡವನ್ನು ಹೊಂದಿ ಈ ಸಮಾಜದ ಮುಖಾಂತರ ಇಲ್ಲಿಗೆ ಬರುವ ಗೌಡ ಯುವಕ ಯುವತಿಯರಿಗೆ ಸರಕಾರಿ ಹಾಗೂ ಸರಕಾರೇತರ ಸಂಸ್ಥೆಗಳಲ್ಲಿ ಕೆಲಸ ದೊರಕಿಸುವ ಹಾಗೂ ವಿದ್ಯಾಸಂಸ್ಥೆಗಳಲ್ಲಿ ಅಂದರೆ ಇಂಜನಿಯರಿಂಗ್, ಮೆಡಿಕಲ್ ಹಾಗೂ ಇತರ ಔದ್ಯೋಗಿಕ ಸಂಸ್ಥೆಗಳಲ್ಲಿ ಪ್ರವೇಶವನ್ನು ಪಡೆಯುವುದಕ್ಕೂ ಹಾಗೂ ಬೆಂಗಳೂರು ಮಹಾನಗರದಲ್ಲಿ ನೆಲಸಿರುವ ಗೌಡರ ಕುಟುಂಬದ ಹಾಗೂ ಅವರ ಸಂಬಂಧಿಕರು ತಮ್ಮ ಆರ್ಥಿಕ ಸ್ಥಿತಿ ಗಳನ್ನು ಉತ್ತಮ ಪಡಿಸುವುದಕ್ಕೆ ಉಪಕಸುಬುಗಳನ್ನು ಪ್ರಾರಂಭಿಸುವುದಕ್ಕೆ, ವ್ಯಾಪಾರ, ಸಣ್ಣ ಕೈಗಾರಿಕೆ

ಗಳನ್ನು ಪ್ರಾರಂಭಿಸುವುದಕ್ಕೆ ತಮ್ಮದೇ ಆದ ಕಟ್ಟಡವನ್ನು ಹೊಂದಬೇಕೆಂಬ ನಿರ್ಣಯವನ್ನು ಮಾಡಿತು.

ಈ ನಿರ್ಣಯದ ಕಾರ್ಯಗತಕ್ಕಾಗಿ ಸರಕಾರದ ವತಿಯಿಂದಾಗಲೀ, ಬೆಂಗಳೂರಿನ ಪ್ರಾಧಿಕಾರದ ವತಿಯಿಂದಾಗಲೀ ಕರ್ನಾಟಕದ ಗೃಹ ನಿರ್ಮಾಣ ಮಂಡಳಿಯ ಮುಖಾಂತರವಾಗಲೀ ನಿವೇಶನವನ್ನು ಹೊಂದುವ ಆಶೆಯಿಂದ ಈ ದಿಶೆಯಲ್ಲಿ ಹಲವಾರು ಪ್ರಯತ್ನಗಳು ನಡೆದವು. ಈ ಪ್ರಯತ್ನಗಳಿಗೆ ಸಂಬಂಧಪಟ್ಟವರಿಂದ ಹೆಚ್ಚಿನ ಪ್ರೋತ್ಸಾಹ ದೊರೆಯದ್ದರಿಂದ ಸಮಾಜವೇ ಹಣವನ್ನು ಸಂಗ್ರಹಿಸಿ ಸ್ವಂತವಾಗಿ ತನ್ನ ಆರ್ಥಿಕ ಸ್ಥಿತಿಯನ್ನನುಸರಿಸಿ ನಿವೇಶನವನ್ನು ಕೊಂಡುಕೊಳ್ಳುವ ತೀರ್ಮಾನಕ್ಕೆ ಬಂದಿತು.

1969ರಲ್ಲಿ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದವರು ಬೆಂಗಳೂರಿನ ಗಂಗೇನಹಳ್ಳಿ ಬಡಾವಣೆಯಲ್ಲಿ ಒಂದು ನಿವೇಶನವನ್ನು ಸಮಾಜಕ್ಕಾಗಿ ವಿಕ್ರಯಿಸಲು ಒಪ್ಪಂದವನ್ನು ಮಾಡಿಕೊಂಡು 1970ರಲ್ಲಿ ಈ ಸಮಾಜವು "ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಸಂಸ್ಕೃತಿ" ಎಂಬ ಹೊತ್ತಿಗೆಯನ್ನು 1968ರ ಕೊಡಗು ಗೌಡ ಸಮಾಜದ ಸಂಸ್ಕೃತಿ ಸಂಚಿಕೆಯ ಲೇಖನ ಹಾಡು ಮತ್ತು ಸೋಬಾನೆಗಳ ಜೊತೆಗೆ ಇನ್ನೂ ಹೆಚ್ಚಿನ ಮಾಹಿತಿಯನ್ನು ಕೊಡುವ ಗೌಡರ ಚರಿತ್ರೆ, ಪದ್ಧತಿಗಳು, ಸೋಬಾನೆಗಳು, ಹಾಡುಗಳಿಂದ ಕೂಡಿದ ಪ್ರಕಟಣೆಯನ್ನು ಹೆಚ್ಚಿನ ಜನರಿಗೆ ಉಪಯೋಗವಾಗುವಂತೆ ಪ್ರಕಟಿಸಿತು.

1970ರಿಂದ ಇಲ್ಲಿಯವರೆಗೆ ಆಡಳಿತ ಮಂಡಳಿಯವರು ಹಾಗೂ ಇತರ ವ್ಯಕ್ತಿಗಳು ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಪ್ರವಾಸ ಕೈಗೊಂಡು 60,000 ರೂಪಾಯಿಗಳ ಚಂದಾವನ್ನು ವಸೂಲು ಮಾಡಿದ್ದರು. ಆದರೆ ಈ ರೀತಿ ಚಂದಾವನ್ನು ವಸೂಲಿ ಮಾಡಿ ಕಟ್ಟಡದ ಕೆಲಸವನ್ನು ಪ್ರಾರಂಭಿಸುವುದು ಸಾಧ್ಯವಾಗಲಾರದೆಂದು ತಿಳಿದು ನಮ್ಮ ಸಮಾಜದ ಮುಖಾಂತರವೇ ಸ್ಥಾಪಿಸಲಾದ ಬೆಂಗಳೂರಿನ ಕೆಂಪೇಗೌಡ ರೂರಲ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿಯ ಮುಖಾಂತರ ಸದ್ರಿ ಸೊಸೈಟಿಗೊಂದು ಕಛೇರಿಯ ಅವಶ್ಯಕತೆ ಇದ್ದುದ್ದರಿಂದ ಸಮಾಜಕ್ಕಾಗಿ ಕಟ್ಟುವ ಕಟ್ಟಡದಲ್ಲೊಂದು ಕೋಣೆಯನ್ನು ಬಾಡಿಗೆಗಾಗಿ ಕೊಡುವಂತಾಗಿಯೂ ಕಟ್ಟಡವನ್ನು ಪೂರೈಸಲಾಗುವುದಕ್ಕೆ ಬೇಕಾದ ಹಣವನ್ನು ಸದ್ರಿ ಸೊಸೈಟಿಯ ಕಛೇರಿಯ ಬಾಡಿಗೆಗಾಗಿ ಮುಂಗಡ ಹಣ ರೂಪಾಯಿ 1,50,000 ನ್ನೂ ಪಡೆದುಕೊಂಡು ಕಟ್ಟಡವನ್ನು ಸದ್ರಿ ಸೊಸೈಟಿಯವರೇ ಕಟ್ಟಿಸಿ ಕೊಟ್ಟಿದ್ದಾರೆ. ಈ ಕೆಲಸದಲ್ಲಿ ಮುತುವರ್ಜಿಯಿಟ್ಟು ದುಡಿದ ಸೊಸೈಟಿಯ ಅಧ್ಯಕ್ಷ ಹಾಗೂ ಕಾರ್ಯಕಾರಿ ಮಂಡಳಿಯವರಿಗೂ, ಕಟ್ಟಡಕ್ಕೆ ಬೇಕಾದ ನಕಾಶೆಯನ್ನು ಮಾಡಿಕೊಟ್ಟು ಸಮಯೋಚಿತ ಸಲಹೆಯನ್ನು ಕೊಟ್ಟ ಶ್ರೀ ಮಾವಜಿ ಅಚ್ಯುತನವರಿಗೆ ಸಮಾಜ ಚಿರಋಣಿಯಾಗಿದೆ.

ಇಲ್ಲಿರುವ ಸಮಾಜದ ಸದಸ್ಯರು ಹೆಚ್ಚಿನವರು ಮೂರನೆ ಮತ್ತು ನಾಲ್ಕನೆ ದರ್ಜೆಯ ನೌಕರರೂ ಕಾರ್ಮಿಕರೂ ಆಗಿರುವುದರಿಂದ ಸಮಾಜದ ಕಾರ್ಯಕಲಾಪಗಳಿಗೆ ಹೆಚ್ಚಿನ ಆಸಕ್ತಿಯಿಂದ ಕೆಲಸಮಾಡಲು ಬಿಡುವಿಲ್ಲದ ಕಾರಣದಿಂದ ಬೆಂಗಳೂರಿನಿಂದ ತಮ್ಮ ತಮ್ಮ ಊರುಗಳಿಗೆ ಆಗಾಗ್ಗ ಹೋಗಿ ಈ ಕೆಲಸಕ್ಕಾಗಿ ಹಣ ಸಂಗ್ರಹ ಮಾಡುವುದಕ್ಕೆ ಪ್ರಯತ್ನ ಪಡುತಿದ್ದಾರೆ.

ಅದೂ ಅಲ್ಲದೆ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ವಾಸಿಸುವ ಹೆಚ್ಚಿನ ಗೌಡರಿಗೆ ಬೆಂಗಳೂರಿನಲ್ಲಿ ನಮ್ಮದೇ ಕಟ್ಟಡವು ಅತಿ ಶೀಘ್ರದಲ್ಲಿ ಆದರೆ ನಮ್ಮ ಯುವಕ ಹಾಗೂ ಯುವತಿಯರ ಏಳಿಗೆಗೆ ಇದರಿಂದ ಪ್ರಯೋಜನವಾಗುವುದೆಂಬ ಮನವರಿಕೆಯಾಗಿದೆ. ಇಲ್ಲಿನ ಕಾರ್ಯಕರ್ತರು ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಿಗೆ ಚಂದಾವಸೂಲಾತಿಗೆ ಹೋದರೆ ಕೊಡಗಿನಲ್ಲಿ ಅಥವಾ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇರುವ ತಮಗೆ ಬೆಂಗಳೂರಿನಲ್ಲಿ ಕಟ್ಟಡ ಕಟ್ಟುವುದರಿಂದ ಮುಂದಕ್ಕೆ ಪ್ರಯೋಜನವಿದೆಯೆಂದು ಕಂಡುಬಂತು.

1982ರಲ್ಲಿ ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಸಮಾಜದ ಪರವಾಗಿ ಕೊಡಗು ಮತ್ತು

ದಕ್ಷಿಣ ಕನ್ನಡ ಗೌಡ ಜನರ ಪ್ರತಿಯೊಂದು ಕುಟುಂಬದವರಿಗೆ ಬೆಂಗಳೂರಿನಲ್ಲಿ ನಿವೇಶನ ಪಡೆಯುವ ಯೋಜನೆಯಿಂದ ಈ ಜನರು ಅತೀ ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲಿಗೆ ಬಂದು ನೆಲೆಸಿ ತಮ್ಮ ಆರ್ಥಿಕ ವಿದ್ಯಾಭ್ಯಾಸ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಅಭಿವೃದ್ಧಿ ಸಾಧಿಸಲು ಬೆಂಗಳೂರಿನ ಹತ್ತಿರದ ಹಳ್ಳಿಗಳಲ್ಲಿ 23 ಎಕ್ರೆ ಭೂಮಿಯನ್ನು 17 ಲಕ್ಷ ರೂಪಾಯಿಗಳಿಗೆ ವಿಕ್ರಯಿಸಿ 250 ಜನರಿಗೆ ಮನೆ ಕಟ್ಟುವ ನಿವೇಶನಗಳನ್ನು ಹಂಚಲು ಏರ್ಪಾಡು ಮಾಡಿದೆ. ಈ ಹಿಂದೆ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ ಗೃಹ ನಿರ್ಮಾಣ ಸಹಕಾರ ಸಂಘ ಎಂಬುದಾಗಿ ಹೆಸರಿಟ್ಟಿದ್ದನ್ನು ಸರಕಾರದ ಆದೇಶದ ಮೇಲೆ "ಕೆಂಪೇಗೌಡ ಗ್ರಾಮೀಣ ಗೃಹ ನಿರ್ಮಾಣ ಸಹಕಾರ ಸಂಘ" ಎಂಬುದಾಗಿ ಹೆಸರು ಬದಲಾಯಿಸಲಾಗಿದೆ.

1984ನೇ ಇಸವಿಯಲ್ಲಿ ಈ ಸಮಾಜದ ವತಿಯಿಂದ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗೌಡರ ಹಿಂದುಳಿದಿರುವಿಕೆಯನ್ನು ಕರ್ನಾಟಕದ ಎರಡನೇ ಹಿಂದುಳಿದ ಆಯೋಗಕ್ಕೆ ಮನಗಾಣುವಂತೆ ನಮ್ಮ ಜನರ ಪರವಾಗಿ ಭಿನ್ನವತ್ತಳೆಯನ್ನು ಅರ್ಪಿಸಿ ಹಿಂದುಳಿದ ಜಾತಿಯ ಪಟ್ಟಿಯಲ್ಲಿ ಸೇರಿಸಬೇಕೆಂದು ಒತ್ತಾಯಿಸಿದೆ.

ಈ ರೀತಿಯಾಗಿ ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡರ ಸರ್ವತೋಮುಖ ಅಭಿವೃದ್ಧಿಗೆ ಕೈಲಾದಷ್ಟು ದುಡಿಯುತ್ತಿದೆ.

ಈ ರೀತಿ ಬೆಂಗಳೂರು ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜವು ತನ್ನ ಧ್ಯೇಯ ದೋರಣೆಯನ್ನು ಹೊತ್ತು ಶ್ರಮಿಸುತ್ತಿರುವುದರಿಂದ ಈ ಸಮಾಜದ ಸದಸ್ಯರುಗಳ ಹುಟ್ಟೂರಾದ ಕೊಡಗು ಮತ್ತ ದಕ್ಷಿಣ ಕನ್ನಡ ಜಿಲ್ಲೆಯ ಇತರ ಎಲ್ಲ ಗೌಡರು ಇವರ ಈ ಕೆಲಸಕ್ಕೆ ತಮ್ಮ ಕೈಲಾದ ಸಹಾಯವನ್ನು ಸ್ವಪ್ರೇರಣೆಯಿಂದ ಮುಂದೆ ಬಂದು ಸಹಕರಿಸಿದರೆ ಈ ಸಮಾಜದವರು ಹಾಕಿಕೊಂಡಿರುವ ಕಾರ್ಯಕ್ರಮಗಳು ಯಾವುದೇ ಅಡ್ಡಿ ಆತಂಕಗಳಿಲ್ಲದೆ ಕೈಗೂಡುವುದರಲ್ಲಿ ಸಂಶಯವಿಲ್ಲ. ಅದೂ ಅಲ್ಲದೆ 25–2–85ರಲ್ಲಿ ನಡೆಸಿದ ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳ ಗೌಡರ ಸಮ್ಮೇಳನದ ಆಶೆ ಆಕಾಂಕ್ಷೆಗಳ ಕೆಲವೊಂದು ಅಂಶಗಳು ಈ ಸಮಾಜದ ಮುಖಾಂತರ ಕಾರ್ಯಗತವಾಗಬಹುದೆಂದು ನಿರೀಕ್ಷಿಸಬಹುದು.

---

**ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಪದಾಧಿಕಾರಿಗಳು ಮತ್ತು ಆಡಳಿತ ಮಂಡಳಿಯ ಸದಸ್ಯರು,**

## 1964–65—1965-66

**ಕೊಡಗು ಗೌಡ ಸಮಾಜ, ಬೆಂಗಳೂರು.**

| | | | |
|---|---|---|---|
| ಅಧ್ಯಕ್ಷರು | — | ಶ್ರೀ ಕೆದಂಬಾಡಿ ಮುದ್ದಪ್ಪ | **ಸಾಧಿಸಿದ ಕಾರ್ಯ** |
| ಉಪಾಧ್ಯಕ್ಷರು | — | ,, ಚೆರಿಯಮನೆ ಪೊನ್ನಪ್ಪ | ಸಮಾಜದ ಸ್ಥಾಪನೆ |
| ಕಾರ್ಯದರ್ಶಿ | — | ,, ಕೆದಂಬಾಡಿ ವಾಸುದೇವ | |
| ಖಜಾಂಚಿ | — | ,, ಅಮೆಶಿವರಾಯ | |
| ಸದಸ್ಯರು | — | ಶ್ರೀ ಕಟ್ಟ್ರತನ ಹರಿಶ್ಚಂದ್ರ | |
| | | ,, ಮೊಟ್ಟೇರ ನಂಜಪ್ಪ | |
| | | ,, ಪೂಜಾರಿ ಪೊಣ್ಣಪ್ಪ | |
| | | ,, ಹೆಚ್. ಬಿ. ಭವಾನಿ ಶಂಕರ | |
| | | ,, ಟಿ. ಡಿ. ನಾಣಯ್ಯ | |
| | | ,, ನಡುಬೆಟ್ಟು ಸೀತಾರಾಮ | |
| | | ,, ಡಿ. ಎಸ್. ಆನಂದ | |
| | | ,, ಕೈಬಿಲಿ ವೇಣುಗೋಪಾಲ | |
| | | ,, ಶಿರಕಜೆ ಚಿಣ್ಣಪ್ಪ | |
| | | ,, ಎಮ್. ಎ. ಪೊಣ್ಣಪ್ಪ | |
| | | ,, ಕಾಳೆಯಂಡ್ರ ಮಾಚಯ್ಯ | |
| | | ,, ತೆಕ್ಕಡೆ ಗೋಪಾಲ | |
| | | ,, ಬೆಳ್ಯನ ಈರಪ್ಪ | |
| | | ,, ಗುಡ್ಡೇರ ಚಿಣ್ಣಪ್ಪ | |
| | | ,, ಡಾ॥ ದೇವಜನ ರಾಮಯ್ಯ | |
| | | ,, ಶಿರಕುಜೆ ಚಿಣ್ಣಪ್ಪ | |

## 1966–67

| | | |
|---|---|---|
| ಅಧ್ಯಕ್ಷರು | — | ಶ್ರೀ ಚೆರಿಯಮನೆ ಪೂನ್ನಪ್ಪ |
| ಉಪಾಧ್ಯಕ್ಷರು | — | ,, ತೋಟಂಬೈಲು ಬೆಳ್ಳಪ್ಪ |
| ಕಾರ್ಯದರ್ಶಿ | — | ,, ಅಮೆ ಶಿವರಾಯ |
| ಉಪಕಾರ್ಯದರ್ಶಿ | — | ,, ನಡುಬೆಟ್ಟು ಸೀತಾರಾಮ |
| ಖಜಾಂಚಿ | — | ,, ಕೆದಂಬಾಡಿ ವಾಸುದೇವ |

ಸದಸ್ಯರು — ಶ್ರೀ ಪೊಟ್ಟೇರ ಸಂಜಪ್ಪ
,, ಪೂಜಾರಿ ಪೊಣ್ಣಪ್ಪ
,, ಹೆಚ್. ಬಿ. ಭವಾನಿಶಂಕರ
,, ಟಿ. ಡಿ. ನಾಣಯ್ಯ
,, ನಡುಬೆಟ್ಟು ಸೀತಾರಾಮ
,, ಡಿ. ಎಸ್. ಆನಂದ
,, ಕಟ್ರತನ ಹರಿಶ್ಚಂದ್ರ
,, ಕೈಬಿಲಿ ವೇಣುಗೋಪಾಲ
,, ಉಳುವಾರನ ಚಂಗಪ್ಪ
,, ಎಮ್. ಎ. ಪೊಣ್ಣಪ್ಪ
,, ಕೆ. ಸಿ. ದೇವಯ್ಯ
,, ಕಾಳೆಯಂಡ್ರ ಮಾಚಯ್ಯ
,, ದೇವಜನ ಗಣಪತಿ
,, ತೆಕ್ಕಡೆ ಗೋಪಾಲ
,, ದಿ॥ ಚೆಟ್ಟಿಮಾಡ ಚಿಣ್ಣಪ್ಪ
,, ದಿ॥ ಹೊಸೂಕ್ಲು ಚಂಗಪ್ಪ
,, ಕುದುಪಜೆ ಭೈರಪ್ಪ
,, ಬೆಳ್ಯನ ಈರಪ್ಪ
,, ಪೊಟ್ಟೇರ ಈರಪ್ಪ
,, ಮೂಲೆ ಮಜ್ಲು ಶಿವರಾಮ
,, ಬಾರನ ದೇವಯ್ಯ
,, ಎನ್. ಡಿ. ರಾಮಚಂದ್ರ

**1967–68**

ಅಧ್ಯಕ್ಷರು — ಶ್ರೀ ಪೂಜಾರಿ ಪೊಣ್ಣಪ್ಪ
ಉಪಾಧ್ಯಕ್ಷರು — ,, ಯಾಲದಾಳು ಬೋಪಯ್ಯ
ಕಾರ್ಯದರ್ಶಿ — ,, ದಂಬೆಕೋಡಿ ಆನಂದ
ಖಜಾಂಚಿ — ,, ತೋಟಂಬೈಲು ನಾಣಯ್ಯ
ಸದಸ್ಯರುಗಳು — ಶ್ರೀ ಹೊದ್ದೆಟ್ಟಿ ಭವಾನಿ ಶಂಕರ
,, ನಡುಬೆಟ್ಟು ಸೀತಾರಾಮ
,, ಗುಡ್ಡೇರ ಚಿಣ್ಣಪ್ಪ
,, ಉಳುವಾರನ ಚಂಗಪ್ಪ
,, ಮಂಞಪುರ ಪೊಣ್ಣಪ್ಪ
,, ಕಾಳೆಯಂಡ್ರ ಮಾಚಯ್ಯ
,, ದೇವಜನ ಗಣಪತಿ
,, ಬಾರನ ದೇವಯ್ಯ
,, ತಕ್ಕಡೆ ಗೋಪಾಲ

**ಸಾಧಿಸಿದ ಕಾರ್ಯ**

1. ಸಮಾಜಕ್ಕೊಂದು ಉಪ–ನಿಬಂಧನೆಯ ತಯಾರಿಕೆ
2. ಕೊಡಗು ಗೌಡ ಸಮಾಜ ಸಂಸ್ಕೃತಿಯ ಹೊತ್ತಿಗೆಯ ಪ್ರಕಟಣೆ.

ಶ್ರೀ ಕುಯ್ಯಮುಡಿ ಬೆಳ್ಯಪ್ಪ
,, ಕಾಳೆರಮ್ಮನ ದೇವಯ್ಯ
,, ನಡುಬೆಟ್ಟು ನಾರಾಯಣ
,, ಬಾರನ ಗಣಪತಿ
,, ಕೂಡಕಂಡಿ ಪೂನ್ನಪ್ಪ
,, ಕುಲ್ಲಚನ ಕಾರ್ಯಪ್ಪ
,, ಮೂಲೆಮಜ್ಲು ಶಿವರಾಮು
,, ಕಟ್ರತನ ಹರಿಶ್ಚಂದ್ರ
,, ಕುದುಪಜೆ ಭೈರಪ್ಪ
,, ಬೆಳ್ಯನ ಈರಪ್ಪ
,, ಶಿರಕಜೆ ಆನಂದ

**1968–69**

**ಗೌಡ ಸಮಾಜ, ಬೆಂಗಳೂರು**

ಅಧ್ಯಕ್ಷರು — ಶ್ರೀ ಡಾ॥ ಪದ್ದಂಬೈಲು ಮುದ್ದಪ್ಪ
ಉಪಾಧ್ಯಕ್ಷರು — ,, ದೇವಜನ ಗಣಪತಿ
ಗೌ॥ ಕಾರ್ಯದರ್ಶಿ — ,, ತೋಟಂಬೈಲು ನಾಣಯ್ಯ
ಖಜಾಂಚಿ — ,, ದಂಬೆಕೋಡಿ ಆನಂದ
ಸದಸ್ಯರುಗಳು — ,, ಕಾಳೆಯಂಡ್ರ ಮಾಚಯ್ಯ
,, ಡಾ॥ ಗುಡ್ಡೇರ ಚಿಣ್ಣಯ್ಯ
,, ಪೂಜಾರಿ ಪೊಣ್ಣಪ್ಪ
ಶ್ರೀಮತಿ ಜೆ. ಟಿ. ಪ್ರಕಾಶ
ಶ್ರೀ ಕೆ. ಎ. ಆನಂದ
,, ಡಿ. ಕೆ. ಬಾಬು
,, ಕೆ. ವಿಶ್ವನಾಥ
ಕುಮಾರಿ ಕೆ. ವಿ. ವಿಜಯಲಕ್ಷ್ಮಿ
ಶ್ರೀ ಕೆ. ಎಸ್. ಗಣಪತಿ
,, ಬಿ. ಡಿ. ಸುರೇಶ
,, ನಡುಬೆಟ್ಟು ಸೀತಾರಾಮು
,, ಉಳುವಾರನ ಚಂಗಪ್ಪ
,, ಹೆಚ್. ಬಿ. ಭವಾನಿ ಶಂಕರ
,, ಶಿರಕಜೆ ಆನಂದ
,, ಕುಲ್ಲಚನ ಕಾರ್ಯಪ್ಪ
,, ಕೂಡಕಂಡಿ ಪೂನ್ನಪ್ಪ
,, ಕುದುಪಜೆ ಭೈರಪ್ಪ

ಶ್ರೀ ಮೂಲೆ ಮಜ್ಲು ಶಿವರಾಮ
,, ಕೆ. ಸಿ. ದೇವಯ್ಯ
ಕಾನೂನು ಸಲಹೆಗಾರರು ,, ಮಾವಜಿ ಜನಾರ್ಧನ

## 1970–71

**ಕೊಡಗು ಮತ್ತು ದಕ್ಷಿಣಣ ಕನ್ನಡ ಗೌಡ ಸಮಾಜ, ಬೆಂಗಳೂರು**

ಅಧ್ಯಕ್ಷರು — ಶ್ರೀ ಸಿ. ಸಿ. ಪೂನ್ನಪ್ಪ
(ಅವರು ರಾಜಿನಾಮೆ ಕೊಟ್ಟನಂತರ
ಶ್ರೀ ವೆಂಕಟ್ರಮಣ ಗೌಡರು)
ಉಪಾಧ್ಯಕ್ಷರು — ಪಿ. ವೆಂಕಟ್ರಮಣಗೌಡ
ಗೌ॥ ಕಾರ್ಯದರ್ಶಿ — ಶ್ರೀ ಐಯ್ಯಂಡ್ರ ಭೀಮಯ್ಯ
ಖಜಾಂಚಿ — ಶ್ರೀ ಎಂ. ಸಿ. ವಾಸುದೇವ
ಸದಸ್ಯರುಗಳು — ಶ್ರೀ ಎಂ. ಎ. ಪೊಣ್ಣಪ್ಪ
,, ಟಿ. ಡಿ. ಮುತ್ತಣ್ಣ
,, ಸಿ. ಟಿ. ಗಣಪತಿ
,, ಸಿ. ಕೆ. ಕುಟ್ಟಪ್ಪ
,, ಕೆದಂಬಾಡಿ ಪೊನ್ನಪ್ಪ
,, ಚಿನ್ನಪ್ಪಗೌಡ
,, ಪಡಿಕಲ್ಲು ಚಂಗಪ್ಪ
,, ಮೂಡಗದ್ದೆ ವಿಶ್ವನಾಥ
,, ಚಂದಪ್ಪ ಗೌಡ
ಶ್ರೀಮತಿ ಚಂದ್ರಾವತಿ
,, ಸಿ. ಎ. ಲೀಲಾ
,, ಕೆ. ವಿ. ನ್ಯಾನ್ಸಿ
ಶ್ರೀ ಚೆಟ್ಟಿಮಾಡ ಜೋಯಪ್ಪ
,, ಡಿ. ಎ. ಚಂದ್ರಶೇಖರ
,, ಟಿ. ಯಂ. ಗೋಪಾಲ
ಕಾನೂನು ಸಲಹೆಗಾರರು ,, ಮಾವಜಿ ಜನಾರ್ಧನ

**ಸಾಧಿಸಿದ ಕಾರ್ಯ**

1. ಸಮಾಜಕ್ಕೊಂದು ನಿವೇಶನ ವನ್ನು ಗಂಗೇನಹಳ್ಳಿಯಲ್ಲಿ ಕ್ರಯಕ್ಕೆ ಖರೀದಿಸಲಾಯಿತು.
2. ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಸಂಸ್ಕೃತಿಯೆಂಬ ಹೊತ್ತಗೆ ಯನ್ನು ಪ್ರಕಟಿಸಲಾಯಿತು.
3. ಲಕ್ಕಿಡಿಪ್ಪನ್ನು ಏರ್ಪಡಿಸಿ ಹಣ ಸಂಗ್ರಹಿಸಲಾಯಿತು.

## 1971

ಅಧ್ಯಕ್ಷರು — ಡಾ॥ ಕೆ. ವೀರಪ್ಪಗೌಡ
ಉಪಾಧ್ಯಕ್ಷರು — ಶ್ರೀ ಬಿ. ಎಂ. ದೇವಯ್ಯ
ಗೌ॥ ಕಾರ್ಯದರ್ಶಿ — ಶ್ರೀ ಟಿ. ಡಿ. ನಾಣಯ್ಯ
ಉಪಕಾರ್ಯದರ್ಶಿ — ಶ್ರೀ ಕೆ. ಕೃಷ್ಣಪ್ಪ
ಖಜಾಂಚಿ — ಶ್ರೀ ಎ. ಆರ್. ಭೀಮಯ್ಯ

| | | |
|---|---|---|
| ಸದಸ್ಯರುಗಳು | — | ಶ್ರೀ ಡಿ. ಎ. ಚಂದ್ರಶೇಖರ |
| | ,, | ಹೆಚ್. ಬಿ. ಭವಾನಿ ಶಂಕರ |
| | ,, | ಕೆ. ಲಕ್ಷ್ಮಣಗೌಡ |
| | ,, | ಕೆ. ಸಿ. ದೇವಯ್ಯ |
| | ,, | ಎನ್. ಡಿ. ರಾಮಚಂದ್ರ |
| | ,, | ಎಂ. ಎ. ಪೊಣ್ಣಪ್ಪ |
| | ,, | ಕೆ. ಎಂ. ಲಿಂಗರಾಜು |
| | ,, | ಪಿ. ಎಂ. ಪದ್ಮನಾಭ |
| | ,, | ಎಂ. ಸಿ. ವಾಸುದೇವ |
| ಕಾನೂನು ಸಲಹೆಗಾರರು | ,, | ಮಾಪಜಿ ಜನಾರ್ಧನ |

**ಸಾಧಿಸಿದ ಕಾರ್ಯ**

ಈ ಸಮಯದಲ್ಲಿ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಿಗೆ ಹೋಗಿ ಸಮಾಜದ ಕಟ್ಟಡಕ್ಕೆ ಹಣ ಸಂಗ್ರಹಿಸ ಲಾಯಿತು.

## 1972

| | | |
|---|---|---|
| ಅಧ್ಯಕ್ಷರು | — | ಡಾ॥ ಕೆ. ವೀರಪ್ಪಗೌಡ |
| ಉಪಾಧ್ಯಕ್ಷರು | — | ಶ್ರೀ ಬಿ. ಎಂ. ದೇವಯ್ಯ |
| ಗೌ॥ ಕಾರ್ಯದರ್ಶಿ | — | ಶ್ರೀ ಟಿ. ಡಿ. ನಾಣಯ್ಯ |
| ಖಜಾಂಚಿ | — | ಶ್ರೀ ಕೆ. ಕೃಷ್ಣಪ್ಪ |
| ಸದಸ್ಯರುಗಳು | — | ಶ್ರೀ ಎನ್. ಡಿ. ರಾಮಚಂದ್ರ |
| | ,, | ಕೆ. ಎಂ. ಲಿಂಗರಾಜು |
| | ,, | ಡಿ. ಎ. ಚಂದ್ರಶೇಖರ |
| | ,, | ಹೆಚ್. ಬಿ. ಭವಾನಿ ಶಂಕರ |
| | ,, | ಕೆ. ಲಕ್ಷ್ಮಣಗೌಡ |
| | ,, | ಪಿ. ಎಂ. ಪದ್ಮನಾಭ |
| | ,, | ಕೆ. ಸಿ. ದೇವಯ್ಯ |
| | | ಶ್ರೀಮತಿ ಸಿ. ಎ. ಲೀಲಾ |
| ಕಾನೂನು ಸಲಹೆಗಾರರು | | ಶ್ರೀ ಮಾಪಜಿ ಜನಾರ್ಧನ |

## 1973

| | | |
|---|---|---|
| ಅಧ್ಯಕ್ಷರು | — | ಡಾ॥ ಕೆ. ವೀರಪ್ಪ ಗೌಡ |
| ಉಪಾಧ್ಯಕ್ಷರು | — | ಶ್ರೀ ಕೆ. ಎಂ. ಶಿವರಾಮು |
| ಗೌ॥ ಕಾರ್ಯದರ್ಶಿ | — | ಶ್ರೀ ಪೂಜಾರಿ ಪೂವಯ್ಯ |
| ಖಜಾಂಚಿ | — | ಡಾ॥ ಪಿ. ಮುದ್ದಪ್ಪ |

ಸದಸ್ಯರುಗಳು — ಶ್ರೀ ಟಿ. ಡಿ. ನಾಣಯ್ಯ
,, ಹೆಚ್. ಬಿ. ಭವಾನಿ ಶಂಕರ್
,, ಕೆ. ಸಿ. ದೇವಯ್ಯ
,, ಕೆ. ವಿ. ಸುಧೀರ್
,, ಡಿ. ಎಸ್. ಪೂವಯ್ಯ
,, ಪಿ. ಎಸ್. ಗಣಪಯ್ಯ
,, ಪಿ. ವೆಂಕಪ್ಪ
,, ಕೆ. ಎಂ. ಲಿಂಗರಾಜು
,, ಎನ್. ಡಿ. ರಾಮಚಂದ್ರ
,, ಎಸ್. ಎನ್. ಜನಾರ್ಧನ
,, ಟಿ. ಆರ್. ರಾಘವಯ್ಯ
,, ಕುಮಾರಿ ಪಿ. ಆರ್. ಪ್ರೇಮಲತ
ಕಾನೂನು ಸಲಹೆಗಾರರು ಮಾವಜಿ ಜನಾರ್ಧನ

## 1974 ಮತ್ತು 1975

ಅಧ್ಯಕ್ಷರು — ಡಾ॥ ಕೆ. ವೀರಪ್ಪಗೌಡ
ಉಪಾಧ್ಯಕ್ಷರು — ಶ್ರೀ ಕೆ. ಆರ್. ಚಾಮಯ್ಯ
ಗೌ॥ ಕಾರ್ಯದರ್ಶಿ — ಶ್ರೀ ಪೂಜಾರಿ ಪೂವಯ್ಯ
ಖಜಾಂಚಿ — ಡಾ॥ ಪಿ. ಮುದ್ದಪ್ಪ
ಸದಸ್ಯರುಗಳು — ಡಾ॥ ಕೆ. ಎಂ. ಬೋಜಪ್ಪ
ಶ್ರೀ ಎ. ಮುತ್ತಯ್ಯ
,, ಟಿ. ಡಿ. ನಾಣಯ್ಯ
,, ಕೆ. ಎಂ. ಶಿವರಾಮು
,, ಹೆಚ್. ಬಿ. ಭವಾನಿ ಶಂಕರ
,, ಕೆ. ಸಿ. ದೇವಯ್ಯ
,, ಡಿ. ಎಸ್. ಪೂವಯ್ಯ
,, ಪಿ. ಸಿ. ಗಣಪಯ್ಯ
,, ಕೆ. ಎಂ. ಲಿಂಗರಾಜು
,, ಎನ್. ಡಿ. ರಾಮಚಂದ್ರ
,, ಟಿ. ಆರ್. ರಾಘವಯ್ಯ
,, ಎ. ರಾಮಣ್ಣಗೌಡ
ಕಾನೂನು ಸಲಹೆಗಾರರು ,, ಮಾವಜಿ ಜನಾರ್ಧನ

## 1976

| | | |
|---|---|---|
| ಅಧ್ಯಕ್ಷರು | — | ಡಾ॥ ಕೆ. ವೀರಪ್ಪಗೌಡ |
| ಉಪಾಧ್ಯಕ್ಷರು | — | ಶ್ರೀ ಎನ್. ಎಂ. ಅಪ್ಪಾಜಿ |
| ಗೌ॥ ಕಾರ್ಯದರ್ಶಿ | — | ಶ್ರೀ ಪೂಜಾರಿ ಪೂವಯ್ಯ |
| ಉಪಕಾರ್ಯದರ್ಶಿ | — | ಶ್ರೀ ಟಿ. ಡಿ. ನಾಣಯ್ಯ |
| ಖಜಾಂಚಿ | — | ಡಾ॥ ಪಿ. ಮುದ್ದಪ್ಪ |
| ಸದಸ್ಯರುಗಳು | — | ಶ್ರೀ ಪಿ. ಎಸ್. ಗಣಪಯ್ಯ |
| | | ,, ಶ್ರೀಮತಿ ಚಂದ್ರಾವತಿ ಚಾಮಯ್ಯ |
| | | ,, ಶ್ರೀ ಎನ್. ಡಿ. ರಾಮಚಂದ್ರ |
| | | ,, ಎಮ್. ಡಿ. ಚಿನ್ನಪ್ಪ |
| | | ,, ಸೀನಪ್ಪಗೌಡ |
| | | ,, ಎ. ಪೂವಪ್ಪ |
| | | ,, ಎ. ರಾಮಣ್ಣಗೌಡ |
| | | ,, ಎಂ. ವೆಂಕಪ್ಪ |
| | | ,, ಎನ್. ಎನ್. ಪೊನ್ನಪ್ಪ |
| | | ,, ಎ. ಗೋಪಾಲ ಕೃಷ್ಣ |
| | | ,, ಡಿ. ಎಸ್. ಆನಂದ |
| ಕಾನೂನು ಸಲಹೆಗಾರರು | ,, | ಮಾವಜಿ ಜನಾರ್ಧನ |

## 1977

| | | |
|---|---|---|
| ಅಧ್ಯಕ್ಷರು | — | ಡಾ॥ ಕೆ. ವೀರಪ್ಪ ಗೌಡ |
| ಉಪಾಧ್ಯಕ್ಷರು | — | ಶ್ರೀ ಎನ್. ಎಂ. ಅಪ್ಪಾಜಿ |
| ಗೌ॥ ಕಾರ್ಯದರ್ಶಿ | — | ಶ್ರೀ ಪೂಜಾರಿ ಪೂವಯ್ಯ |
| ಉಪಕಾರ್ಯದರ್ಶಿ | — | ಪಿ. ಎ. ಪೊಣ್ಣಪ್ಪ |
| ಖಜಾಂಚಿ | — | ಡಾ॥ ಪಿ. ಮುದ್ದಪ್ಪ |
| ಸದಸ್ಯರುಗಳು | — | ಶ್ರೀ ಎ. ಪೂವಪ್ಪ |
| | | ,, ಡಿ. ಆನಂದ |
| | | ಶ್ರೀಮತಿ ಚಂದ್ರಾವತಿ ಚಾಮಯ್ಯ |
| | | ಶ್ರೀ ಡಿ. ಪಿ. ಗಣಪತಿ |
| | | ,, ಹೆಚ್. ಬಿ. ಭವಾನಿ ಶಂಕರ |
| | | ,, ಎಂ. ಬಿ. ಸದಾಶಿವ |
| | | ,, ಎಮ್. ಡಿ. ಚಿನ್ನಪ್ಪ |
| | | ,, ಜಿ. ಎಸ್. ಪೊಣ್ಣಪ್ಪ |
| | | ,, ಎನ್. ಡಿ. ರಾಮಚಂದ್ರ |

ಶ್ರೀ ಟಿ. ಡಿ. ನಾಣಯ್ಯ
,, ಎಂ. ಎಲ್. ಗಿರಿಧರ್
ಕಾನೂನು ಸಲಹೆಗಾರರು ಮಾವಜಿ ಜನಾರ್ಧನ

## 1978 ಮತ್ತು 1979

ಅಧ್ಯಕ್ಷರು — ಡಾ॥ ಕೆ. ವೀರಪ್ಪಗೌಡ
ಉಪಾಧ್ಯಕ್ಷರು — ಶ್ರೀ ಎಸ್. ಎಂ. ಅಪ್ಪಾಜಿ
ಗೌ॥ ಕಾರ್ಯದರ್ಶಿ — ಶ್ರೀ ಎ. ರಾಮಣ್ಣ ಗೌಡ
ಖಜಾಂಚಿ — ಶ್ರೀ ಹೆಚ್. ಬಿ. ಭವಾನಿ ಶಂಕರ
ಸದಸ್ಯರುಗಳು — ಶ್ರೀ ಐ. ಕೆ. ಪೂವಯ್ಯ
,, ಪಿ. ಎಸ್. ಗಣಪಯ್ಯ
,, ಡಿ. ಆನಂದ
,, ಡಿ. ಪಿ. ಗಣಪತಿ
,, ಕೆ. ರವಿರಾಜು
,, ಎ. ಟಿ. ಚಿಣ್ಣಪ್ಪ
,, ಜಿ. ಎಸ್. ಪೊಣ್ಣಪ್ಪ
,, ಟಿ. ಯಂ. ಪೊಣ್ಣಪ್ಪ
,, ಎನ್. ಡಿ. ರಾಮಚಂದ್ರ
,, ಎಮ್. ಎಲ್. ಗಿರಿಧರ
ಕಾನೂನು ಸಲಹೆಗಾರರು ,, ಮಾವಜಿ ಜನಾರ್ಧನ

## 1980

ಅಧ್ಯಕ್ಷರು — ಡಾ॥ ಕೆ. ವೀರಪ್ಪಗೌಡ
ಉಪಾಧ್ಯಕ್ಷರು — ಶ್ರೀ ಡಿ. ಪಿ. ಗಣಪತಿ
ಗೌ॥ ಕಾರ್ಯದರ್ಶಿ — ಶ್ರೀ ಪಿ. ಕೆ. ಬೋಪಯ್ಯ
ಖಜಾಂಚಿ — ಶ್ರೀ ಕೆ. ಎಂ. ಭೀಮಯ್ಯ
ಸದಸ್ಯರುಗಳು — ಶ್ರೀ ಎ. ರಾಮಣ್ಣಗೌಡ
,, ಪಿ. ತಮ್ಮಪ್ಪ
,, ಪಿ. ಕೆ. ಪೂವಯ್ಯ
,, ಎನ್. ಡಿ. ರಾಮಚಂದ್ರ
,, ಎ. ಗೋಪಾಲಕೃಷ್ಣ
,, ಕೆ. ಕೃಷ್ಣಪ್ಪ
,, ಟಿ. ಎ. ಚಿಣ್ಣಪ್ಪ

| | | |
|---|---|---|
| | | ಶ್ರೀ ಪಿ. ಎ. ಪಳಂಗಪ್ಪ |
| | | ,, ಟಿ. ಎಂ. ಮೊಣ್ಣಪ್ಪ |
| | | ,, ಎಂ. ಎಲ್. ಗಿರಿಧರ |
| | | ,, ಕೆ, ಲೋಕಯ್ಯ |
| ಕಾನೂನು ಸಲಹೆಗಾರರು | | ,, ಪಿ. ಎ. ಮೊಪ್ಪಣ್ಣ |
| ಲೆಕ್ಕ ಪರಿಶೋಧಕರು | | ,, ಕೆ. ರಾಮಣ್ಣ |

**1981**

| | | |
|---|---|---|
| ಅಧ್ಯಕ್ಷರು | — | ಡಾ॥ ಕೆ. ವೀರಪ್ಪಗೌಡ |
| ಉಪಾಧ್ಯಕ್ಷರು | — | ಶ್ರೀ ಡಿ. ಪಿ. ಗಣಪತಿ |
| ಗೌ॥ ಕಾರ್ಯದರ್ಶಿ | — | ಶ್ರೀ ಪಿ. ಕೆ. ಬೋಪಯ್ಯ |
| ಖಜಾಂಚಿ | — | ಶ್ರೀ ಕೆ. ಎಂ. ಭೀಮಯ್ಯ |
| ಸದಸ್ಯರುಗಳು | — | ಶ್ರೀ ಎ. ರಾಮಣ್ಣಗೌಡ |
| | | ,, ಪಿ. ತಮ್ಮಪ್ಪ |
| | | ,, ಪಿ. ಕೆ. ಪೂವಯ್ಯ |
| | | ,, ಎನ್. ಡಿ. ರಾಮಚಂದ್ರ |
| | | ,, ಎ. ಗೋಪಾಲಕೃಷ್ಣ |
| | | ,, ಎ. ಟಿ. ಚಿಣ್ಣಪ್ಪ |
| | | ,, ಪಿ. ಎ. ಪಳಂಗಪ್ಪ |
| | | ,, ಟಿ. ಎಂ. ಮೊಣ್ಣಪ್ಪ |
| | | ,, ಎಮ್. ಎಲ್. ಗಿರಿಧರ |
| | | ,, ಕೆ. ಲೋಕಯ್ಯ |
| | | ,, ಡಿ. ಆನಂದ |
| | | ,, ಪಿ. ಕೆ. ಡಿ. ಪ್ರಕಾಶ |
| | | ,, ಪಿ. ಪ್ರಭಾಕರ |
| | | ,, ಕೆ. ಸಿ. ಜಯರಾಮ |
| | | ,, ಎಮ್. ಎಸ್. ನಂಜಪ್ಪ |
| | | ,, ಹೆಚ್. ಬಿ. ಭವಾನಿ ಶಂಕರ |
| | | ,, ಡಿ. ಎಸ್. ಆನಂದ |
| | | ,, ಎಂ. ಡಿ. ಚಿಣ್ಣಪ್ಪ |
| | | ,, ಯು. ಬಿ. ಅಣ್ಣಯ್ಯ |
| | | ,, ಕೆ. ಎ. ತಮ್ಮಯ್ಯ |
| | | ,, ಎಸ್. ಎ. ಚಿಣ್ಣಪ್ಪ |
| | | ,, ಟಿ. ಯಂ. ಗೋಪಾಲ |

,, ಎಸ್. ಆರ್. ಬೋಜಪ್ಪ

ಕಾನೂನು ಸಲಹೆಗಾರರು ,, ಎ. ಎ. ಪೊಣ್ಣಪ್ಪ

## 1982

ಅಧ್ಯಕ್ಷರು — ಡಾ॥ ಕೆ. ವೀರಪ್ಪಗೌಡ

ಉಪಾಧ್ಯಕ್ಷರು — ಶ್ರೀ ಕೆ. ಎಂ. ಮನಮೋಹನ

ಗೌ॥ ಕಾರ್ಯದರ್ಶಿ — ಶ್ರೀ ಪಿ. ಕೆ. ಬೋಪಯ್ಯ

ಖಜಾಂಚಿ — ಶ್ರೀ ಕೆ. ಎಂ. ಭೀಮಯ್ಯ

ಸದಸ್ಯರುಗಳು — ಶ್ರೀ ಯು. ಬಿ. ಅಣ್ಣಯ್ಯ

,, ಎಂ. ಎಸ್. ನಂಜಪ್ಪ

,, ಪಿ. ಎ. ಪಳೆಂಗಪ್ಪ

,, ಟಿ. ಎಂ. ಪೊಣ್ಣಪ್ಪ

,, ಪಿ. ತಮ್ಮಪ್ಪ

,, ಕೆ. ಎ. ತಮ್ಮಯ್ಯ

,, ಕೆ. ಲೋಕಯ್ಯ

,, ಡಿ. ಪಿ. ಗಣಪತಿ

,, ಕೆ. ಎಸ್. ಗಣಪತಿ

,, ಎ. ಎಂ. ಗೋಪಾಲಕೃಷ್ಣ

,, ಕೆ. ಎಂ. ಪೂಣಚ್ಚ

,, ಬಿ. ಪಿ. ಪೊನ್ನಪ್ಪ

ಕಾನೂನು ಸಲಹೆಗಾರರು ,, ಪಿ. ಎ. ಪೊಣ್ಣಪ್ಪ

### ಸಾಧಿಸಿದ ಕಾರ್ಯ

(ಈ ಸಾಲಿನಲ್ಲಿ ಕಾರ್ಯಕಾರಿ ಮಂಡಳಿ ಸದಸ್ಯರು ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಊರುಗಳಿಗೆ ಪ್ರವಾಸ ಹೋಗಿ ಸಮಾಜದ ಕಟ್ಟಡಕ್ಕೆ ಹಣವನ್ನು ಸಂಗ್ರಹಿಸಿದರು. ಇದೇ ವರ್ಷ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಮೂಲಕ ಗೃಹನಿರ್ಮಾಣ ಸಹಕಾರ ಸಂಘವನ್ನು ಸ್ಥಾಪಿಸಲಾಯಿತು. ಇದರ ಮುಖಾಂತರ ಸಮಾಜದ ಸದಸ್ಯರಿಗೆ ನಿವೇಶನಗಳಿಗಾಗಿ 23 ಎಕ್ರೆ ಜಮೀನನ್ನು ವಿಕ್ರಮಿಸಲಾಯಿತು.

ಇದೇ ಸಾಲಿನಲ್ಲಿ ಸಮಾಜದ ಕಟ್ಟಡಕ್ಕೆ ಅಡಿಪಾಯವನ್ನು ಹಾಕಲಾಯಿತು.

## 1983

ಅಧ್ಯಕ್ಷರು — ಡಾ॥ ಕೆ. ವೀರಪ್ಪಗೌಡ

ಉಪಾಧ್ಯಕ್ಷರು — ಶ್ರೀ ಎಂ. ಸಿ. ರವಿಕುಮಾರ್

ಗೌ॥ ಕಾರ್ಯದರ್ಶಿ — ಶ್ರೀ ಪಿ. ಕೆ. ಬೋಪಯ್ಯ

ಕಾರ್ಯದರ್ಶಿ — ಶ್ರೀ ಪಿ. ತಮ್ಮಪ್ಪ

ಖಜಾಂಚಿ — ಶ್ರೀ ಟಿ. ಎಂ. ಪೊಣ್ಣಪ್ಪ

ಸದಸ್ಯರುಗಳು — ಶ್ರೀ ಎ. ರಾಮಣ್ಣ ಗೌಡ

,, ಎನ್. ಡಿ. ರಾಮಚಂದ್ರ

,, ಕೆ. ಎಸ್. ಪೊನ್ನಪ್ಪ

,, ಕೆ. ಎಂ. ನಾಣಯ್ಯ

,, ಪಿ. ಎ. ಪಳಂಗಪ್ಪ
,, ಬಿ. ಪಿ. ಪೊನ್ನಪ್ಪ
,, ಎ. ಟಿ. ಚಿಣ್ಣಪ್ಪ
,, ಕೆ. ಎ. ಪುಟ್ಟಯ್ಯ
,, ಕೆ. ಲೋಕಯ್ಯ
,, ಎಂ. ಜಿ. ಉತ್ತಪ್ಪ
,, ಕೆ. ಜಿ. ನಾಣಯ್ಯ
,, ಡಿ. ಎಸ್. ಆನಂದ
,, ಬಿ. ಪಿ. ರಾಘವ
,, ಯು. ಬಿ. ಅಣ್ಣಯ್ಯ
,, ಕೆ. ಎಂ. ಪೂಣಚ್ಚ
,, ಹೆಚ್. ಬಿ. ಭವಾನಿ ಶಂಕರ
,, ಪಿ. ಪ್ರೇಮಚಂದ್ರ
,, ಕೆ. ಎಸ್. ವೆಂಕಟರಮಣ
,, ಡಾ॥ ಕೆ. ಎಂ. ಬೋಜಪ್ಪ
,, ಡಾ॥ ಮುದ್ದಪ್ಪ

ಕಾನೂನು ಸಲಹೆಗಾರರು ,, ಪಿ. ಎ. ಮೊಣ್ಣಪ್ಪ

**1984**

| | | |
|---|---|---|
| ಅಧ್ಯಕ್ಷರು | — | ಡಾ॥ ಕೆ. ವೀರಪ್ಪಗೌಡ |
| ಉಪಾಧ್ಯಕ್ಷರು | — | ಶ್ರೀ ಕೆ. ಎಂ. ಮನಮೋಹನ |
| ಗೌ॥ ಕಾರ್ಯದರ್ಶಿ | — | ಶ್ರೀ ಪಿ. ಕೆ. ಬೋಪಯ್ಯ |
| ಖಜಾಂಚಿ | — | ಶ್ರೀ ಟಿ. ಯಂ. ಮೊಣ್ಣಪ್ಪ |
| ಸದಸ್ಯರುಗಳು | — | ಶ್ರೀ ಎನ್. ಎ. ಚಿಣ್ಣಪ್ಪ |
| | | ಶ್ರೀಮತಿ ವಾಣಿ ಚಕ್ರಪಾಣಿ |
| | | ಶ್ರೀ ಎನ್. ಡಿ. ರಾಮಚಂದ್ರ |
| | | ,, ಎ. ರಾಮಣ್ಣ ಗೌಡ |
| | | ,, ಕೆ. ಲೋಕಯ್ಯ |
| | | ,, ಡಬ್ಲ್ಯು. ಕೆ. ಮಾದಪ್ಪ |
| | | ,, ಕೆ. ರಾವಿರಾಜ |
| | | ,, ಎ. ಟಿ. ಚಿಣ್ಣಪ್ಪ |
| | | ,, ಎಂ. ಡಿ. ಚಿಣ್ಣಪ್ಪ |
| | | ,, ಪಿ. ಗಿರಿಯಪ್ಪಗೌಡ |
| | | ,, ಪಿ. ಕೆ. ಪೂವಯ್ಯ |

**ಸಾಧಿಸಿದ ಕಾರ್ಯ**

ಈ ಸಾಲಿನಲ್ಲಿ ನಮ್ಮ ಸಮಾಜದ ಮುಖಾಂತರ ಸ್ಥಾಪಿಸಿದ ಕೆಂಪೇಗೌಡ ಗ್ರಾಮೀಣ ಗೃಹ ನಿರ್ಮಾಣ ಸಹಕಾರ ಸಂಘ ನೊಂದಣಿ ಆಯಿತು.

ಶ್ರೀ ಪಿ. ತಮ್ಮಪ್ಪ
,, ಕೆ. ಎಂ. ಪೂಣಚ್ಚ
ಕಾನೂನು ಸಲಹೆಗಾರರು ಶ್ರೀ ಎಂ. ಸಿ. ರವಿಕುಮಾರ

## 1985 ಮತ್ತು 1986

ಅಧ್ಯಕ್ಷರು — ಡಾ॥ ಕೆ. ವಿ. ವೀರಪ್ಪಗೌಡ
ಉಪಾಧ್ಯಕ್ಷರು — ಶ್ರೀ ಪಿ. ಕೆ. ಪೂನ್ನಪ್ಪ
ಗೌ॥ ಕಾರ್ಯದರ್ಶಿ — ಶ್ರೀ ಎ. ಎಂ. ಧರ್ಮಪಾಲ
ಖಜಾಂಚಿ — ಶ್ರೀ ಕೆ. ಕೆ. ನಳಿನಕುಮಾರ
ಸದಸ್ಯರುಗಳು — ಶ್ರೀ ಎ. ರಾಮಣ್ಣಗೌಡ
,, ಎನ್. ಡಿ. ರಾಮಚಂದ್ರ
,, ಎ. ಟಿ. ಚಿಣ್ಣಪ್ಪ
,, ಕೆ. ಲೋಕಯ್ಯ
,, ಕೆ. ಎಂ. ಪೂಣಚ್ಚ
,, ಕೆ. ರವಿರಾಜ
,, ಕೆ. ಎಸ್. ಗಣಪತಿ
,, ಡಬ್ಲ್ಯು. ಕೆ. ಮಾದಪ್ಪ
,, ಪಿ. ಕೆ. ಪೂವಯ್ಯ
,, ಪಿ. ತಮ್ಮಪ್ಪ
,, ಬಿ. ಪಿ. ರಾಘವ
,, ಎಂ. ಡಿ. ಚಿಣ್ಣಪ್ಪ
,, ಎಂ. ಎಸ್. ನಂಜಪ್ಪ
,, ಮೋಹನಗೌಡ
,, ಪಿ. ಓಂಪ್ರಕಾಶ
ಶ್ರೀಮತಿ ವಾಣಿ ಚಕ್ರಪಾಣಿ
ಶ್ರೀ ಪಿ. ಗಿರಿಯಪ್ಪಗೌಡ
ಕಾನೂನು ಸಲಹೆಗಾರರು ಶ್ರೀ ಪಿ. ಎ. ಮೊಣ್ಣಪ್ಪ

## 1987 ಮತ್ತು 1988

ಅಧ್ಯಕ್ಷರು — ಡಾ॥ ಕೆ. ವೀರಪ್ಪಗೌಡ
ಉಪಾಧ್ಯಕ್ಷರು — ಶ್ರೀ ಕೆ. ಟಿ. ಮಾದಪ್ಪ
ಗೌ॥ ಕಾರ್ಯದರ್ಶಿ — ಶ್ರೀ ಪಿ. ತಮ್ಮಪ್ಪ
ಖಜಾಂಚಿ — ಶ್ರೀ ಟಿ. ಎಂ. ಮೊಣ್ಣಪ್ಪ

ಸದಸ್ಯರುಗಳು — ಶ್ರೀ ಎ. ರಾಮಣ್ಣಗೌಡ
,, ಎನ್. ಡಿ. ರಾಮಚಂದ್ರ
,, ಪಿ. ಕೆ. ಪೂವಯ್ಯ
,, ಕೆ. ಲೋಕಯ್ಯ
,, ಪಿ. ಎಂ. ಕುಶಾಲಪ್ಪ (ಪ್ರಕಾಶ)
,, ಕೆ. ರವಿರಾಜ
,, ಪಿ. ಕೆ. ಬೋಪಯ್ಯ
,, ಡಬ್ಲ್ಯು. ಕೆ. ಮಾದಪ್ಪ
,, ಹೆಚ್. ಬಿ. ಭವಾನಿ ಶಂಕರ
,, ಎಂ. ಪಿ. ಕುಶಾಲಪ್ಪ
,, ಪಿ. ಗಿರಿಯಪ್ಪ ಗೌಡ
,, ಎ. ಎಂ. ಧರ್ಮಪಾಲ
,, ಎಂ. ಡಿ. ಚಿಣ್ಣಪ್ಪ
,, ಎ. ಟಿ. ಚಿಣ್ಣಪ್ಪ
ಕಾನೂನು ಸಲಹೆಗಾರರು ,, ಪಿ. ಎ. ಪೊಣ್ಣಪ್ಪ

**ಸಾಧಿಸಿದ ಕಾರ್ಯ**

ಈ ಸಾಲಿನಲ್ಲಿ ಕಟ್ಟಡದ ಕೆಲಸ ಪೂರ್ತಿಗೊಳಿಸಲಾಯಿತು. ಕಟ್ಟಡ ನಿಧಿಗೆ ಹಣ ಸಂಗ್ರಹವಾಯಿತು. ಕಟ್ಟಡ ಉದ್ಘಾಟನೆ ನೆರವೇರಿಸಿ ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡಲಾಯಿತು.

---

# ಗೌಡ ಸಮಾಜದ ಯುವ ಪೀಳಿಗೆಗೆ ಹಿರಿಯರೊಬ್ಬರ ಕರೆ

—ಯಂ. ಯಂ. ಗಿರಿ, ಮಲ್ಲಾರ, ಸುಳ್ಯ, ದ.ಕ.

[ಶ್ರೀ ಯಂ. ಯಂ. ಗಿರಿಯವರು ಭೌತಿಕ ಜ್ಞಾನದೊಡನೆ ಆತ್ಮಜ್ಞಾನವನ್ನು ಯುವಕ ಯುವತಿಯರು ಬೆಳೆಸಿ ಕೊಳ್ಳಬೇಕೆಂದು ಕಳಕಳಿಯಿಂದ ಕರೆ ನೀಡಿದ್ದಾರೆ. ಭೌತಿಕ — ಜ್ಞಾನವನ್ನು ಪಡೆಯುವುದರೊಂದಿಗೆ — ಆತ್ಮ ಜ್ಞಾನವನ್ನು ಪಡೆಯಬೇಕೆಂದು ಅವರ ಅಭಿಲಾಷೆ. ಈಗಿನ ಯುವ ಪೀಳಿಗೆಯಲ್ಲಿ ಆತ್ಮ ಜ್ಞಾನ ಕಡಿಮೆಯಾಗಿ ಭೌತಿಕ ಜ್ಞಾನ ಹೆಚ್ಚಾಗಿ ಆತ್ಮದ ಜ್ಞಾನ ಸಂಪಾದನೆಯ ಕಡೆಗೆ ನಿರ್ಲಕ್ಷವಿರುವುದನ್ನು ಎತ್ತಿ ತೋರಿಸಿದ್ದಾರೆ. ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಅರ್ಜುನನಿಗೆ ಹೀಗೆ ಹೇಳುತ್ತಾನೆ.

ದಮಾಂ ದುಷ್ಕೃತಿನೋ ಮೂಡಾ :
ಪ್ರಪದ್ಯಂತೇ ನರಾಧಮಾ :
ಮಾಯ ಯಾಪಹೃತ ಜ್ಞಾನಾ :
ಅಸುರಂ ಭಾವ ಮಾಶ್ರೀತಾ :

ಯಾವ ಜ್ಞಾನವೆಂಬ ಧನವನ್ನು ಮಾಯಾಶಕ್ತಿಯು ಅಪಹರಿಸುವುದೋ ಅವರು ಅಸುರೀವೃತ್ತಿಗೆ ಒಳ ಪಟ್ಟಿರುತ್ತಾರೆ. ಮೂಢರೂ ಪಾಪ ಕರ್ಮಗಳನ್ನು ಮಾಡುವ ನರಾಧಮರು ನನ್ನನ್ನು ಪಡೆಯಲಾರರು. ಅದುದರಿಂದ ಶ್ರೀ ಗಿರಿಯವರು ನೀಡಿದ ಕರೆ ಸಮಾಜದ ಯುವಕ ಯುವತಿಯವರಿಗೆ ಆತ್ಮ ಜ್ಞಾನಾಭಿವೃದ್ಧಿಗೆ ಒಂದು ದಾರಿ ದೀಪವಾಗಿದೆ.]

ನಿತ್ಯ ಬದಲಾವಣೆಯ ಸಮೂಹವಾದಂಥ ಈ ಪ್ರಪಂಚದಲ್ಲಿ ಇತ್ತೀಚೆಗಿನ ವರ್ಷಗಳಲ್ಲೆ ಎಲ್ಲೆಲ್ಲೂ ಹೊಸ. ಹೊಸ ದೃಶ್ಯಗಳೇ ಮಾತ್ರವಲ್ಲ, ನಾಗರಿಕ ತನದ ಹಣೆ ಪಟ್ಟೆಯನ್ನು ಹೊತ್ತು, ಅದೆಷ್ಟೋ ನವನವೀನ ತೆರನ. ನಡೆ, ನುಡಿ, ಆಚರಣೆಗಳು ನಮ್ಮ ಯುವ ಪೀಳಿಗೆಯ ಕಣ್ಣು ಕಿವಿಗಳ ಮೂಲಕ ಮನದಾಳಕ್ಕೆ ಇಳಿದು ಅಸಾಧಾರಣ ಪರಿವರ್ತನೆಯನ್ನು ಮಾಡುವುದನ್ನು ನಾವೆಲ್ಲರೂ ನೋಡುತ್ತೇವೆ. ಇದರೊಂದಿಗೆ ಸಾಹಸಮಯ ವಿಜ್ಞಾನ ಅವಿಷ್ಕಾರಗಳ, ಪರಿಣಾಮದಿಂದ ಮನಷ್ಯನ ಬಳಕೆಯ ಸೌಲಭ್ಯತೆಗಳು ಮಿಂಚಿನಂತೆ ಮುಂದುವರಿದು, ಯುವಕರ ಬೆಳೆಯುವ ಬುದ್ಧಿ ಶಕ್ತಿಗೆ, ಆಶ್ಚರ್ಯ, ಉಲ್ಲಾಸಗಳನ್ನುಂಟು ಮಾಡುತ್ತದೆ. ಈ ಕೌತುಕಮಯ ಪರಿವರ್ತನೆಯಲ್ಲಿ ಈಗಿನ ವಿದ್ಯಾಭ್ಯಾಸವೂ, ಹೊರತಾಗಿಲ್ಲವೆಂದು ಹೇಳಲೇ ಬೇಕಾಗಿದೆ. ಪ್ರಸ್ತುತ, ಯುವ ಪೀಳಿಗೆಯನ್ನೇ ಗುರಿಯಾಗಿಟ್ಟುಕೊಂಡ ಕಾರಣವೆಂದರೆ, ಮನುಷ್ಯ ಜೀವನದಲ್ಲಿ ಪ್ರಾಯ 16 ರಿಂದ 30ರವರೇಗಿನ ಕಾಲ— ಪ್ರೌಡತನಕ್ಕೂ ಬುದ್ಧಿ ಹರಿತಕ್ಕೂ — ವಿವೇಚನೆಯ ಬೆಳವಣಿಗೆಗೂ ಪ್ರಾಮುಖ್ಯವಾದ ಕಾಲ. ಈ ಪ್ರಾಯದಲ್ಲಿ ಪ್ರತಿಯೊಂದು ಹೆಣ್ಣು ಗಂಡಿನ ಮನಸ್ಸು, ಸ್ವತಂತ್ರವಾಗಿರಬಲ್ಲದು. ನಂತರ ಮನೆ ಮಕ್ಕಳು— ಉದ್ಯೋಗ, ಸೋಲು — ಗೆಲವುಗಳ ತಾಕಲಾಟ ತಪ್ಪಿದ್ದಲ್ಲ. ಈ ಪ್ರಾಯವೇ, ಮನಸ್ಸಿನ ಏಕಾಗ್ರತೆಗೆ ಉತ್ತಮವಾದದೆಂದು ನಮ್ಮ ಹಿರಿಯರು ಅನುಭವದಿಂದ ಕಂಡು ಹೇಳಿರುತ್ತಾರೆ. ಇಲ್ಲೊಂದು ಪ್ರಶ್ನೆ! ಈ ಪರಿವರ್ತನೆಯ ಸೆಳೆತದಲ್ಲಿ ಸುಧಾರಣೆ ಹೊಂದುತ್ತೇವೆಂದು ಭಾವಿಸಿಕೊಂಡೇ ಮುಂದುವರಿಯುತ್ತೇವೆಯೋ ? ಎಂಬದೊಂದು ಪ್ರಶ್ನೆ ಮತ್ತು ಹೊಸತು ಹೊಸತನ್ನೆಲ್ಲಾ ಅನುಕರಣೆ ಮಾಡುತ್ತೇವೆಯೋ ? ಎಂಬ ಸಂಶಯ ಬರುವುದು. ಈ ರೀತಿಯ ವಿಚಾರ ಯೋಗ್ಯವಲ್ಲವೇ ? ಈ ಓಟಕ್ಕೆ ಹಿಂದಿನ ಅನುಭವ, ನಮ್ಮಲ್ಲಿ ಇಲ್ಲ. ಮುಂದಿನ ಪರಿಣಾಮ ಭವಿಷ್ಯತ್ತೇ

ಉತ್ತರಿಸಬಲ್ಲುದು. ಈ ಮಧ್ಯಂತರ ಕಾಲದ ನಮ್ಮ ಭವಿಷ್ಯವನ್ನು ಈ ಪರಿವರ್ತನೆಯ ಜಾಲಕ್ಕೆ ತಪ್ಪಿಸಿ ನಾವು ಕೇವಲ ಅನುಕರಣೆಯ ಆಳಾಗಲಾಗದೆಂಬುದಕ್ಕೆ ಏನು ಭರವಸೆ ? ಇದು ಈಗಿನ ನಡೆ, ನುಡಿ, ಆಚರಣೆ– ವಿದ್ಯಾಭ್ಯಾಸ ಎಲ್ಲದ್ದರಲ್ಲೂ ನಮ್ಮ ಮುಂದಿನ ಭವಿಷ್ಯದ ಅಸ್ಪಷ್ಟತೆಯ ಊಹಿಸುವಂತಾಗದೆ ? ಆದುದರಿಂದ ಮನಸ್ಸು ಸ್ವತಂತ್ರವಾಗಿರುವ ಈ ಯುವ ಪ್ರಾಯದಲ್ಲಿ ಕಾಯಾ ವಾಚಾ_ಮನಸ್ಸಿನ ಮೂಲಕ, ಎಲ್ಲಾ ಕಾರ್ಯಾಚರಣೆಗಳನ್ನು ತನ್ನ ಅಧೀನಕ್ಕೊಳಪಡಿಸಿಕೊಂಡೇ ಮಾಡಿದಾಗ ಮಾತ್ರ ಅವಕ್ಕೆ ಪೂರ್ಣ ಮೌಲ್ಯಬರಬಹುದೇ ಹೊರತು ಅನುಕರಣೆಯನ್ನೇ ಆದರ್ಶವಾಗಿಟ್ಟುಕೊಂಡರೆ ಪರಿಣಾಮ—ಹತ್ತು ಸಾವಿರವನ್ನು ಅಂಕೆಯನ್ನು ಬರೆದು, ಎಡಗಡೆಯ ಒಂದು ಅಂಕೆಯನ್ನು ಅಳಿಸಿ ಮಿಕ್ಕ ನಾಲ್ಕು ಸೊನ್ನೆಗಳನ್ನಿರಿಸಿಕೊಂಡಂತಾಗದೇ ? ಹೀಗಾಗಿ ಪ್ರತಿಯೊಬ್ಬನ ಯುವ ಮನಸ್ಸು—ತನ್ನನ್ನು ತಾನು ಪ್ರಶ್ನಿಸಿಕೊಳ್ಳಬೇಕಾದುದು ಆದ್ಯ ಕರ್ತವ್ಯ.ಈ ದೃಢಗೋಚರ ಪ್ರಪಂಚವೆಂದರೆ ಏನು ? ಇದರ ನಿರಂತರ ಬದಲಾವಣೆಗಳೇನು ? ಒಟ್ಟಾರೆ ಇದರ ಉದ್ದೇಶವೇನಿರಬಹುದು ? ಇವನ್ನೆಲ್ಲಾ ಕಂಡು ಕೇಳಿ ತಿಳಿಯಲಪೇಕ್ಷಿಸುವ ನಾನಾರು? ಈ ಪ್ರಜ್ಞಾವಸ್ಥೆಗೆ ಬರುವ ಮೊದಲು ಎಲ್ಲಿದ್ದೆ ? ಈ ದೇಹ ಬದಲಾಯಿಸಿದ ಮೇಲೆ ನಾನೇನಾಗಬಲ್ಲೆ ? ಎಂಬ ಚಿಂತನಗಳನ್ನು ತನ್ನ ಸ್ವಂತ ಮನಸ್ಸಿನಲ್ಲೇ ಹಾಕಿ ಅರೆದಾಗ ತಕ್ಕುದಾದ ಪ್ರತಿಫಲ ಬಂದೇ ಬರುತ್ತದೆ. ಆಗ ಮಾತ್ರ ನಮಗೆ ನಮ್ಮ ಕಾಲಮೇಲೆ ನಿಲ್ಲುವ ಸಾಮರ್ಥ್ಯ ಬರುವುದು. ಇದಕ್ಕಾಗಿಯೇ ಈಗಿನ ವಿದ್ಯಾಭ್ಯಾಸವಿರುವುದಲ್ಲವೇ ? ಎಂದು ನೀವು ಪ್ರಶ್ನಿಸಬಹುದು — ಹೌದು ಸ್ವಲ್ಪ ಮಟ್ಟಿಗೆ ಈಗಿನ ವಿದ್ಯಾಭ್ಯಾಸವು ಬುದ್ಧಿಯನ್ನು ಹರಿತ ಮಾಡಬಲ್ಲದು. ಅದೇ ಮಟ್ಟದಲ್ಲಿ ಅದು ಹೃದಯವನ್ನು ಜಡ್ಡುಗಟ್ಟಿಸಿದರೆ ನಿಮಗೆ ಆಶ್ಚರ್ಯವಾಗಬಹುದು ! ನಾನು ಹೇಳುವ ಹೃದಯವೆಂದರೆ ವ್ಯಕ್ತಿ ಸದ್ಭಾವನೆಯನ್ನೂ — ತಾಳ್ಮೆಯನ್ನು ಹುಟ್ಟಿಸುವ ಗುಣಗಳ ಕೇಂದ್ರ ಹೃದಯವೂ ಬುದ್ಧಿಯೂ ಸಮನಾಗಿ ಬೆಳೆದರೆ ಮಾತ್ರ ಅವರಿಂದ ಪ್ರಪಂಚಕ್ಕೆ ಉಪಯೋಗ — ಹೊರತು ಬುದ್ಧಿಯನ್ನೇ ಬೆಳಸಿ (ಭೌತಿಕಜ್ಞಾನ) ಪದವಿ ಅಂತಸ್ತು ಐಶ್ವರ್ಯಗಳ ಬೆನ್ನು ಹತ್ತುವ ಈಗಿನ ದೃಶ್ಯಗಳನ್ನು ಕಂಡಾಗ ವಿದ್ಯಾಭ್ಯಾಸವು ಕೇವಲ ಅಹಂಕಾರವನ್ನು ಬೆಳೆಸಿ ಜೀವಿಗೂ ಭೇದವನ್ನು ಸೃಷ್ಟಿ ಮಾಡುವ ಕಾರ್ಖಾನೆಯಾದರೆ ಅದೊಂದು ನಮ್ಮ ದುರಾದೃಷ್ಟವಲ್ಲವೇ ? ವಿಷಯ ಇನ್ನೂ ಸ್ಪಷ್ಟವಾಗಲು ತೊಂದರೆ ಇದೆ. ಅದೇನೆಂದರೆ, ಈಗ ಬೆಳೆದು ಬಂದಿರುವ ಅನುಕರಣೆಯ ಪ್ರವಾಹದ ಸೆಳೆತ — ಅದಕ್ಕಾಗಿಯೇ ಪ್ರತಿಯೊಬ್ಬನೂ ತನ್ನನ್ನು ತಾನು ಪ್ರಶ್ನಿಸಿಕೊಳ್ಳಲು ಕಲಿಯಬೇಕೆಂದು ಆಗಲೇ ಹೇಳಿರುವುದು — ಈಗ ನೋಡುತ್ತಿರುವ ಇಷ್ಟೊಂದು ಭೌತಿಕ ಶಕ್ತಿಗಳು — ಅವಿಯಿಂದ ಹಿಡಿದು, ಅಣುಶಕ್ತಿವರೆಗಿನ ಪ್ರಕೃತಿಯ ಅವಿರ್ಭಾಗಗಳಿಗೆ ಒಂದೊಂದು ಹೆಸರಿಟ್ಟು ಬಳಕೆಯನ್ನು ಮಾತ್ರ ವಿಜ್ಞಾನಿಗಳು ವಿವರಿಸಬಲ್ಲರು. ಉದಾಹರಣೆಗೆ ವಿದ್ಯುಚ್ಛಕ್ತಿಯ ಹಲವಾರು ಇಷ್ಟ ಸಿದ್ಧಿಗಳನ್ನು ಬುದ್ಧಿಯಿಂದ ಅನ್ವೇಷಿಸುತ್ತಿದ್ದಾರಲ್ಲದೆ ನಿಜವಾಗಿ ವಿದ್ಯುಚ್ಛಕ್ತಿ ಎಂದರೆ ಏನೆಂದು ಈ ತನಕ ಯಾವ ಮೃತ್ಯು ಮಾನವನಿಗೂ ತಿಳಿದಿಲ್ಲ. ಅಂತೆಯೇ ಪ್ರಕೃತಿಯ ಎಲ್ಲಾ ಅವಿರ್ಭಾಗಗಳ ಮೂಲ ಎಲ್ಲಿದೆ ? ಎಂದು ಯಾವ ವಿಜ್ಞಾನಿಯೂ ಕಂಡುಕೊಂಡಿಲ್ಲ. ಕೇವಲ ಮನುಷ್ಯರ ಬುದ್ಧಿಶಕ್ತಿಯು ವಸ್ತುಗಳ ವಿಭಜನೆ ಮಾಡುತ್ತಾ ಹೋದಂತೆ. ವಸ್ತು ನಿರ್ನಾಮವಾದಂತಾಗಿದೆ. ಉದಾ — ಅಣು ವಸ್ತುವು ಅಣುಶಕ್ತಿಯಾಯ್ತು — ಇತ್ತೀಚೆಗಿನ ಮಹಾ ವಿಜ್ಞಾನಿ "ಸರ್ ಜೇಮ್ಸ್ ಜೀನ್ಸ್..."ನನ್ನ ಕೃತಿ" ದಿ ಮಿಸ್ಟೀರಿಯಸ್ ಯುನಿವರ್ಸ್ .... (ನಿಗೂಢ ವಿಶ್ವ)ಯೆಂಬ ಗ್ರಂಥದಲ್ಲಿ ವಿಶ್ವವು ಒಂದು ದೊಡ್ಡ ಯಂತ್ರ ಎನ್ನುವುದಕ್ಕಿಂತ ಒಂದು ದೊಡ್ಡ ಭಾವನೆಯೆಂಬಂತೆ ತೋರತೊಡಗಿದೆ ಎಂದು ಒಪ್ಪಿಕೊಂಡಿರುತ್ತಾರೆ. ಇದನ್ನೇ ಸಾವಿರಾರು ವರ್ಷಗಳ ಹಿಂದೆ ಹಿಂದೂ ತಾತ್ವಿಕರು ಬಾಹ್ಯದಲ್ಲೆ ಸ್ಥೂಲವಾಗಿ ವ್ಯಕ್ತವಾಗುವ ಧನ— ಋಣ — ಆಕರ್ಷಣ — ವಿದ್ಯುತ್ — ಕಾಂತ — ಯಾವ ಶಕ್ತಿಯೇ ಆಗಿರಲಿ ಜೀವಿಯ ಆಂತರ್ಯದ ಅಂತಃಕರಣದಲ್ಲಿ ಸೂಕ್ಷ್ಮಾವಸ್ಥೆಯಲ್ಲಿರುವ ವಿದ್ಯುಚ್ಛಕ್ತಿಯ ವ್ಯಕ್ತರೂಪಗಳೆಂದು ಪ್ರತಿಪಾದಿಸಿದ್ದರು. ಒಂದಲ್ಲ ಒಂದು ದಿನ ಹೊರಗಿನ ಅನ್ವೇಷಣೆಯೂ ಅಲ್ಲಿಗೇ ಹೋಗಿ ಸೇರಬೇಕಾಗಿದೆ. ಆತನಕ ನೆಮ್ಮದಿ ಇರಲಾರದು. ಅದಕ್ಕಾಗಿಯೇ ಬುದ್ಧಿ

ಶಕ್ತಿಯುಳ್ಳ ಮನುಷ್ಯರು ತಮ್ಮ ತಮ್ಮ ಅಂತಃಕರಣವನ್ನೇ ಸಮೃದ್ಧಿಗೊಳಿಸಿಕೊಂಡಲ್ಲಿ ಅರ್ಥಾತ್ ಅರಿತು ಕೊಂಡಲ್ಲಿ ಎಲ್ಲಾ ನಿರೀಕ್ಷೆಗಳ ಪೂರೈಕೆ ಸಾಧ್ಯ ಎಂದು ಹೇಳ ಬಯುಸುತ್ತೇನೆ. ಉದಾಹರಣೆಗೆ ಹೊರಗಿನ ಭೋಧನೆಯೊಂದೇ ತುಂಬಿಸಿಕೊಡಲಾರದೆಂದು ಈಗಿನ ವಿದ್ಯಾಭ್ಯಾಸವೂ ನಮಗೆ ಮನವರಿಕೆ ಮಾಡಿಕೊಟ್ಟಿದೆ. ಒಂದು ಪಾಠ ಪ್ರವಚನದಲ್ಲಿಯೂ ವಿವಿಧ ವ್ಯಕ್ತಿಗಳಲ್ಲೆ ವಿವಿಧ ಪ್ರತಿಫಲವು ಬರಲು ಅವರವರ ಅಂತಃಕರಣದ ಪ್ರತಾಪವೇ ಕಾರಣವೆಂದು ಸಾಕ್ಷಿ ನುಡಿಯಬಲ್ಲುದು. ಆದ್ದರಿಂದ ಕಲ್ಪತರು—ವಿನಂತಿರುವ ನಮ್ಮ ನಮ್ಮ ಅಂತಃಕರಣವನ್ನು ನಾವು ಮೊದಲು ಕಂಡುಕೊಂಡು ಪ್ರಕಾಶಗೊಳಿಸಿಕೊಂಡರೆ ಪರಿಸರದಲ್ಲಿ ಒದಗಬಹುದಾದ ಸನ್ನಿವೇಶಗಳ ಒಳಿತು ಕೆಡುಕುಗಳನ್ನು ಎದುರಿಸಿ ಜಯಶೀಲರಾಗಬಲ್ಲ "ಅಭಯ" ವೆಂಬ ರತ್ನದಂತಹ ಗುಣ ನಮ್ಮದಾಗಲು ತೊಂದರೆಯಿಲ್ಲ. ಇತ್ತೀಚೆಗೆ ನಮ್ಮೆದುರು ಬಾಳಿ ಬದುಕಿದ್ದ "ಗಾಂಧೀಜಿ"ಯವರು ಪ್ರತಿಯೊಂದು ನಡೆ, ನುಡಿ, ಆಚರಣೆಯನ್ನು ಮಾತ್ರವಲ್ಲ. ಆಯೋಜಿತ ಜೀವನ್ಮರಣ, ಉಪವಾಸಗಳ, ಆರಂಭವನ್ನು ಸಹಾ ಅವರು ತಮ್ಮ "ಅಂತರ್ವಾಣಿಯ ಆದೇಶ" ಎಂದು ಹೇಳಿಕೊಂಡಿದ್ದರು. ಅವರಿಗೆ ಇಡೀ ಪ್ರಪಂಚದಲ್ಲಿ ಭಯುವೂ ಇರಲಿಲ್ಲ ದ್ವೇಷವೂ ಇರಲಿಲ್ಲ. ಕೋಟಿಗಟ್ಟಲೆ ಅವಿದ್ಯಾವಂತರಿಂದಲೂ "ಮಹಾತ್ಮ"ರೆಂದು ಬಿರುದು ಪಡೆದರು. ಇದು ಕೇವಲ ಅವರ ಬುದ್ಧಿಯ ತೀಕ್ಷಣತೆಯಿಂದಲ್ಲ. ತನ್ನ ಅಂತಃಕರಣವನ್ನು ಸುದ್ಧಿಗೊಳಿಸಿ ಹೃದಯ ಸಂಪತ್ತನ್ನು ಬೆಳೆಸಿಕೊಂಡುದರಿಂದಲೇ ಸಾಧ್ಯವಾಯ್ತು. ಪ್ರತಿಯೊಬ್ಬನ ಅಂತಃಕರಣದಲ್ಲಿಯೂ ಈ ತರದ ಚೈತನ್ಯ ಕಿಡಿ ಇದ್ದೇ ಇದೆ. ಅದನ್ನು ಮುಸುಕಿರುವ ಆಲಸ್ಯ ಇಂದ್ರಿಯ ಮೋಹಗಳೆಂಬ ಕಾರ್ಮೋಡವನ್ನು ನೂಕಿ ಶುದ್ಧಿ ಮಾಡಿಕೊಳ್ಳಬೇಕಾಗಿದೆ. ಹೊರಗಿನ ಕಾರ್ಯ ಯಾವನೇ ಆಪ್ತ ಬಂಧುವಿನಿಂದಾಗಲೀ, ಯಾರೇ ದೊಡ್ಡ ಪ್ರಾಚಾರ್ಯರ ಭೋದನೆಯಿಂದಲೂ ಆಗಲಾರದು. ಶ್ರದ್ಧಾಪೂರ್ವಕ ಅವನವನ ಪ್ರಯತ್ನವೇ ಈ ಕಾರ್ಯ ಪ್ರಪಂಚದಲ್ಲಿ ಹೊಣೆಯಾಗಲ್ಲದು. ಆದ್ದರಿಂದ ಈ ತೆರನ ಮಹಾ ಜೀವಿಗಳ ಜೀವನ ಚರಿತ್ರೆಯನ್ನೋ,ಆತ್ಮ ಕಥನಗಳನ್ನೋ ಅಧ್ಯಯನ ಮಾಡಿ ನಮ್ಮ ಯುವಜನ ಯುವತಿಯರು ತಮ್ಮ ತಮ್ಮ ಅಂತಃಕರಣ ಶಕ್ತಿಯನ್ನು ಪ್ರಕಾಶಗೊಳಿಸಿ ಅಜೇಯ ಸಾಮರ್ಥ್ಯವನ್ನು ಗಳಿಸಿಕೊಳ್ಳಲಿ ಎಂದು ಪ್ರಾರ್ಥಿಸುತ್ತೇನೆ.

---



---

# ಚಿಂತನ ಮಂಥನ

—ಶ್ರೀ ಪೂಜಾರಿ ಮೊಣ್ಣಪ್ಪ

[ಈ ಲೇಖನವನ್ನು ಗೌಡ ಸಂಸ್ಕೃತಿ, ವಿಧ್ಯಾಭ್ಯಾಸ ನಿರುದ್ಯೋಗ ಸಮಸ್ಯೆ ಸಮಾಜದಲ್ಲಿರುವ ನ್ಯೂನತೆಗಳನ್ನು ಹೋಗಲಾಡಿಸುವ ಬಗ್ಗೆ ಜನಾಭಿಪ್ರಾಯವನ್ನು ಸಂಗ್ರಹಿಸಲು ಸಮಾಜದ ಹಿರಿಯರು ಮತ್ತು ಯುವಕ ಯುವತಿಯರು, ಈ ಲೇಖನದಲ್ಲಿ ಪ್ರಸ್ತಾಪಿಸಿರುವ ವಿಚಾರಗಳೊಡನೆ ತಮಗೆ ತೋಚಿದ ಇತರ ವಿಷಯಗಳಲ್ಲಿ ಕೂಲಂಕುಶವಾಗಿ ಚರ್ಚಿಸಲು ಚರ್ಚೆಗೋಷ್ಠಿಯನ್ನು ಏರ್ಪಡಿಸಿ ಚರ್ಚಿಸಿ ಸಮಾಜದ ಸಂಸ್ಕೃತಿ ಅಭಿವೃದ್ಧಿಗೆ ನ್ಯೂನತೆಗಳ ನಿವಾರಣೆಗೆ, ಏನೇನು ಕಾರ್ಯಕ್ರಮಗಳನ್ನು ಕೈಕೊಳ್ಳಬೇಕೆಂಬ ನಿರ್ಧಾರಕ್ಕೆ ಬಂದು ಅವುಗಳ ಅನುಷ್ಠಾನವನ್ನು ಗೌಡ ಸಮಾಜಗಳು, ಗೌಡ ವಿಧ್ಯಾ ಸಂಘಗಳು ಕೈಕೊಳ್ಳುವಂತಾಗಲೆಂದು ಹಾರೈಸುತ್ತೇವೆ. ಸಂ]

7 ಸಾವಿರ ವರ್ಷದ ಹಿಂದಿನಿಂದ ಬೇರೆ ಬೇರೆ ಊರುಗಳನ್ನು ಸುತ್ತಿತಿರುಗಿ ಕೊನೆಗೆ ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳಲ್ಲಿ ನೆಲಸಿರುವ "ಗೌಡ"ರ ಸಂಸ್ಕೃತಿ ಈಗ 20–30 ವರ್ಷಗಳಿಂದ ಅತಿವೇಗದಿಂದ ಬದಲಾಗುತ್ತಿರುವುದನ್ನು ಕಾಣುವಾಗ ಈ ಸಂಸ್ಕೃತಿಯ ಭವಿಷ್ಯವೇನು ಎಂಬುದನ್ನು ಚಿಂತಿಸಬೇಕಾದ ಸಂದರ್ಭ ಬಂದಿದೆ. ಅದೇ ರೀತಿ ಈಗ 40 ವರ್ಷಗಳಿಂದೀಚೆ ಗೌಡರಲ್ಲಿ ವಿಧ್ಯಾಭ್ಯಾಸ ತೀವ್ರಗತಿಯಿಂದ ಅಭಿವೃದ್ಧಿಗೊಂಡಿದ್ದರೂ ಸರ್ಕಾರಿ ಮತ್ತು ಸರ್ಕಾರಿ ಸ್ವಾಮ್ಯದ ಮತ್ತು ಖಾಸಗೀ ಸಂಸ್ಥೆಗಳಲ್ಲಿ ಕೆಳದರ್ಜೆಯ ಉದ್ಯೋಗದಲ್ಲಿ ಹೆಚ್ಚಿಲ್ಲದಿದ್ದರೂ ಸಾಮಾನ್ಯವಾಗಿ ಎಲ್ಲಿ ಸಂಸ್ಥೆಗಳಲ್ಲಿ ಉದ್ಯೋಗವನ್ನು ಪಡೆದುಕೊಂಡಿದ್ದರೂ ಉನ್ನತ ಹುದ್ದೆಗಳಾದ ಐ.ಎ.ಯಸ್.ಐ.ಪಿ.ಯಸ್. ಐ.ಎಫ್.ಯಸ್. ಮತ್ತು ಒಂದನೇ ಎರಡನೇ ದರ್ಜೆಯಲ್ಲಿ ಬೇರೆ ಜಾತಿ ಬಾಂಧವರನ್ನು ಹೋಲಿಸಿದಾಗ ಶೇಕಡವಾರು ಸಂಖ್ಯೆ ಒಂದಕ್ಕಿಂತ ಕಡಿಮೆ ಸಂಖ್ಯೆಯಲ್ಲಿ ಕಂಡು ಬರುತ್ತದೆ. ಸಮಾಜದಲ್ಲಿ ಬರುಬರುತ್ತಾ ಮಧ್ಯಪಾನದ ಹಾವಳಿ ಹೆಚ್ಚುತ್ತಿದೆ. ವರದಕ್ಷಿಣೆ ಪಿಡುಗು ಪ್ರಾರಂಭವಾಗಿದೆ. ಇವುಗಳಿಗೆ ಕಾರಣವೇನು? ಇವುಗಳಿಗೆ ಪರಿಹಾರವೇನು — ಎಂಬ ವಿಷಯದಲ್ಲಿ ಈ ಕೆಳಗೆ ಹಲವಾರು ಪ್ರಶ್ನೆಗಳನ್ನುಕೊಟ್ಟಿದೆ. ಈ ಅಭಿಪ್ರಾಯವನ್ನು ಹಿರಿಯರು ಮತ್ತು ಯುವಕ–ಯುವತಿಯರು ಸೇರಿ ಚರ್ಚಿಸಬೇಕಾಗಿದೆ.

ಪ್ರಶ್ನೆಗಳು :—

ಗೌಡರಲ್ಲಿ ವಿಧ್ಯಾವಂತರಾದಂತೆಯೇ ಗೌಡರಲ್ಲಿದ್ದ ಪದ್ಧತಿ ಸಂಸ್ಕೃತಿಗಳನ್ನು ಬರಬರುತ್ತಾ ಮರೆಯುತ್ತಿದ್ದಾರೆ. ಹಳೆಯ ತಲೆ ಮಾರಿನ ಜನ ಹೀಗೆ ಹೇಳುತ್ತಾರೆ. "ನಮ್ಮ ಪೂರ್ವಿಕರು ಹಿಂದೂ ದೇಶದ ಬಹುದೂರದ ಪ್ರದೇಶದಿಂದ ಬಂದು ಸಿಂಧೂನದೀ ಕಣಿವೆಯಲ್ಲಿ ನೆಲಸಿ ಅಲ್ಲಿಗೆ ಆರ್ಯರು ಧಾಳಿ ನಡೆಸಿದುದರಿಂದ ನಮ್ಮ ಪೂರ್ವಿಕರ ಸಂತಾನವನ್ನು ಹಾಗೂ ಸಂಸ್ಕೃತಿಯನ್ನು

ಕಾಪಾಡುವುದಕ್ಕಾಗಿ ಗಂಗಾನದೀ ಪ್ರದೇಶಕ್ಕೆ ಹೋದಾಗ ಅಲ್ಲಿಯೂ ನಮ್ಮ ಹಿರಿಯರನ್ನು ಬಿಡದಿದ್ದಾಗ ನಮ್ಮ ಹಿರಿಯರು ಈಗಿನ ಬಂಗಾಳ ರಾಜ್ಯಕ್ಕೆ ವಲಸೆ ಬಂದು ನೆಲೆನಿಂತಾಗ ಅಲ್ಲಿ ನಮ್ಮ ಹಿರಿಯರು ಕಬ್ಬು ಬೆಳೆಸಿ ಬೆಲ್ಲವನ್ನು ಉತ್ಪಾದಿಸುತ್ತಿದ್ದುದರಿಂದ "ಗೂಡ್" ಉತ್ಪಾದಿಸುವ ದೇಶ ಗೌಡದೇಶವೆಂದು ಕರೆಯಲ್ಪಟ್ಟು ನಾವು ಆ ದೇಶದಿಂದ ಬಂದವರಾದುದರಿಂದ ನಮ್ಮನ್ನು "ಗೌಡ"ರೆಂದು ಕರೆಯಲ್ಪಟ್ಟವರಾಗಿ ಅಲ್ಲಿಯೂ ಜೈನ ಮತ್ತು ಭೌದ್ಧರ ಮತಾಂತರ ಗೊಂದಲವನ್ನು ತಡೆಯಲಾರದೆ ಹರ್ಷವರ್ಧನನ ಕಾಲದಲ್ಲಿ ದೇವಗಿರಿಗೆ ಬಂದು ನೆಲಸಿ 1296ನೇ ಇಸವಿಯಲ್ಲಿ ದೇವಗಿರಿಯ ಯಾಧವ ರಾಜನಾದ ರಾಮಚಂದ್ರನನ್ನು ಅಲ್ಲಾವುದ್ದೀನ್ ಖಿಲ್ಜಿಯ ದಂಡನಾಯಕನಾದ ಮಲ್ಲೀಕಾಫ್‌ರನು ಸೋಲಿಸಿದಾಗ ನಮ್ಮ ಹಿರಿಯರು ತಮ್ಮನ್ನು ಮಹಮದೀಯರಾಗಿ ಮತಾಂತಗೊಳಿಸಬಹುದೆಂಬ ಭೀತಿಯಿಂದ ಅಲ್ಲಿಂದಲೂ ಸರಿದು ಆಗಿನ ವಿಜಯನಗರದ ಸಾಮ್ರಾಜ್ಯದ ರಾಜಧಾನಿಯಾದ ಈಗಿನ ಹಂಪೆಯ ಸುತ್ತಮುತ್ತಲು ನೆಲೆಸಿದ್ದ ವಿಜಯನಗರ ಸಾಮ್ರಾಜ್ಯ ಬಹಮಿನಿ ಸುಲ್ತಾನರಿಂದ ನುಚ್ಚುನೂರು ಮಾಡಲ್ಪಟ್ಟಾಗ ಅಲ್ಲಿದ್ದರೆ ತಾವು ಮಹಮದೀಯರಾಗಿ ಮತಾಂತರಗೊಳ್ಳಬಹುದೆಂಬ ಭೀತಿಯಿಂದ ಅಲ್ಲಿಂದಲೂ ದಕ್ಷಿಣಕ್ಕೆ ಸರಿದು ಆಗಿನ ಕಾಲದ ಇಕ್ಕೇರಿ ವಂಶದ ನಾಯಕರ ಆಶ್ರಯವನ್ನು ಪಡೆದು ನೆಲೆಸಿದಾಗ ಅಲ್ಲಿಯೂ ನಮ್ಮ ಹಿರಿಯರಿಗೆ ತೊಂದರೆ ತಪ್ಪದೆ ಅಲ್ಲಿ ಲಿಂಗಾಯಿತರ ಬಲತ್ಕಾರವನ್ನು ತಾಳಲಾರದೆ ಹಾಸನದ ಐಗೂರು ಸೀಮೆಯಲ್ಲಿ ಸ್ವಲ್ಪ ಕಾಲ ಇದ್ದು ನಂತರ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲಸಿ ಕೆಲವರು ಕೊಡಗಿಗೂ ಬಂದು ನೆಲಸಿದ ನಮ್ಮ ಹಿರಿಯರು ತಮ್ಮ ಜೀವಭಯವನ್ನು ಬಿಟ್ಟು ಊರಿಂದೂರಿಗೆ ವಲಸೆ ಬಂದು ತಮ್ಮ ಸಂಸ್ಕೃತಿ ಮತ್ತು ಧರ್ಮವನ್ನು ಕಾಪಾಡಿಕೊಂಡು ಬಂದ ಸಂಸ್ಕೃತಿಯನ್ನು ಈಗಿನ ಯುವ ಪೀಳಿಗೆಯು ಪಾಶ್ಚಾತ್ಯ ವಿದ್ಯಾಭ್ಯಾಸ ಹಾಗೂ ನವನಾಗರೀಕತೆಯ ಪ್ರಭಾವದಿಂದಾಗಿ ಮರೆಯುತ್ತಿದ್ದಾರೆ. ಇನ್ನು 50–100 ವರ್ಷಗಳ ನಂತರ ಈ ಸಮಾಜದ ಹೆಸರೇ ಬೇರೆಯಾಗಿ ತನ್ನ ತನವನ್ನೇ ಕಳೆದುಕೊಳ್ಳುತಾರೆ" ಎಂಬುದಾಗಿ ಚಿಂತಾಕ್ರಾಂತರಾಗಿದ್ದಾರೆ.

ಈಗಿನ ಪೀಳಿಗೆಯವರು ಇದಕ್ಕೆ ಈ ರೀತಿಯ ಸವಾಲನ್ನು ಹಾಕುತ್ತಿದ್ದಾರೆ.

"ನಾವು ಪಾಶ್ಚಾತ್ಯ ಭಾವನೆ ಭಾಷೆ ಆಹಾರ ಉಡಿಗೆ ಆಚಾರ ವಿಚಾರ ವ್ಯವಹಾರ ಮುಂತಾದುವುಗಳನ್ನು ಅನುಸರಿಸಿದರೆ ಪಾಶ್ಚಾತ್ಯರಷ್ಟು ಭಲಾಢ್ಯರೂ ಮತ್ತು ಪರಾಕ್ರಮಶಾಲಿಗಳೂ ಆಗುವೆವು, ನಾವು ಉತ್ತಮ ವಸ್ತುಗಳನ್ನು ಪಡೆಯುವುದಕ್ಕೆ ನಾವು ಪ್ರಯತ್ನ ಪಡಬೇಡವೆ ? ನಮ್ಮ ಸಮಾಜದಲ್ಲಿ ಎಷ್ಟೋ ಕುಂದುಕೊರತೆಗಳಿಲ್ಲವೇ? ನಾವು ಕಲಿತುಕೊಳ್ಳಬೇಕಾದುದು ಎಷ್ಟೋ ಇವೆ. ಸಾಯುವವರೆಗೂ ಹೊಸ ಹೊಸ ಉತ್ತಮ ವಸ್ತುಗಳಿಗಾಗಿ ಹೋರಾಟ ಮಾಡಬೇಕು. ನಮ್ಮ ಗಂಡ ಹೆಂಡಿರನ್ನು ಆರಿಸಿಕೊಳ್ಳುವುದರಲ್ಲಿ ನಮಗೆ ಸಂಪೂರ್ಣ ಸ್ವಾತಂತ್ರ್ಯ ಬೇಕು. ಏಕೆಂದರೆ ಈ ಮದುವೆಯ ಮೇಲೆ ನಮ್ಮ ಸುಖ ದುಃಖಗಳೆಲ್ಲ ನಿಂತಿವೆ. ನಮ್ಮ ಸ್ವತಂತ್ರ್ಯ ಇಚ್ಛೆಯಂತೆ ಇದನ್ನು ನಿರ್ಧರಿಸಲು ನಮಗೆ ಅಧಿಕಾರಬೇಕು. ಪಾಶ್ಚಾತ್ಯ ನಾರಿಯರು ಅವರ ಗಂಡಂದಿರನ್ನು ಅವರೇ ಆರಿಸಿಕೊಳ್ಳುತ್ತಾರೆ. ಅದೇ ಒಳ್ಳೆಯದು. ಗೊಡ್ಡು ಸಂಪ್ರದಾರಿರುಗಳಿಂದೇನು ಫಲ ? ಅದನ್ನೆಲ್ಲಾ ಯಾಕೆ ಆಚರಿಸಬೇಕು ಎಂಬುದಾಗಿ ಮಾನವ ಕುಲದವರೇ ಒಂದು ಎಂಬುದಾಗಿ ಹೇಳುತ್ತಿರುವ ಈ ಕಾಲದಲ್ಲಿ ಕುವೆಂಪುರವರ "ವಿಶ್ವಮಾನವ" ಸಿದ್ಧಾಂತವೇ ಸರಿ: ಈಗಿನ ಜನ ಜೀವನ ಹಿಂದಿನವರಂತೆ ನಿಧಾನವಾಗಿ ಆರಾಮವಾಗಿ ಸಾಗುವಂಥದಲ್ಲ. ಪ್ರತಿ ನಿಮಿಷಕ್ಕೂ ಬೆಲೆ ಕಟ್ಟುವ ಕಾಲ, ಪ್ರತಿ ನಿಮಿಷವನ್ನೂ ಯಾವ ರೀತಿಯಲ್ಲಿ ಉಪಯೋಗಿಸಬೇಕೆಂದು ಯೋಚಿಸುವ ಕಾಲ. ಹಾಗಿರುವಾಗ ಪದ್ಧತಿ ಸಂಸ್ಕೃತಿ ಎಂದು ಕಾಲ ಕಳೆಯಲು ಸಾಧ್ಯವಿಲ್ಲ. ಪದ್ಧತಿ ಸಂಸ್ಕೃತಿಯನ್ನು ಕಟ್ಟಿಕೊಂಡು ನಮಗೇನಾಗಬೇಕು ? ಯೂರೋಪಿಯನ್ನರು ಅಮೇರಿಕಾದವರು ರಷ್ಯನ್ನರು ಯಾವ ಪದ್ಧತಿಯನ್ನು ಆಚರಿಸುತ್ತಾರೆ? ಅವರು ಅದನ್ನೆಲ್ಲಾ ಅಳವಡಿಸಿಕೊಂಡಿದ್ದರೆ ಈ ರೀತಿ ಮುಂದುವರಿಯುತ್ತಿದ್ದರೇ ? ಈಗಿನ ಸ್ಥಿತಿಯಲ್ಲಿ ಮನುಷ್ಯನಿಗೆ ಬೇಕಾದುದು ಯೋಗ್ಯವಾದ ಮನೆ. ಅದಕ್ಕೆ ಬೇಕಾದ ಸೌಖರ್ಯ, ಓಡಾಡುವುದಕ್ಕೆ ಬೇಕಾದ ಕಾರು, ಮೋಟಾರ್ ಬೈಕ್, ತಿನ್ನು

ವುದಕ್ಕೆ ಉಡುವುದಕ್ಕೆ ಬೇಕಾದ ಒಳ್ಳೆಯ ಬಟ್ಟೆ, ರುಚಿಕರವಾದ ಊಟ ಇದನ್ನು ಬಿಟ್ಟು ಸಂಸ್ಕೃತಿ ಪದ್ಧತಿಗಳೆಂದು ಹೇಳುವುದರಿಂದ ಪ್ರಯೋಜನವಿಲ್ಲ. ಒಂದು ಹೆಣ್ಣಿಗೆ ಒಂದು ಗಂಡು ಅವರಿಬ್ಬರು ಒಪ್ಪಿ ಒಟ್ಟಿಗೆ ಸೇರಿದರೆ ಸಾಕು. ಮದುವೆ ಪದ್ಧತಿ ಬಣ್ಣ ಬಂಗಾರ, ಸೋದರ ಮಾವ ಕಾಸ್‌ತಾಳಿ, ಎಣ್ಣೆ ಅರಸಿನ ಶಾಸ್ತ್ರ ಇವೆಲ್ಲ ಗೊಡ್ಡು ಸಂಪ್ರದಾಯಗಳು ಇವುಗಳಿಂದೇನೂ ಆರ್ಥಿಕವಾಗಿ ಯಾವ ಪ್ರಯೋಜನ ವಿಲ್ಲ. ಗಂಡು ಹೆಂಡರಿಗೆ ಸರಿಬಾರದಿದ್ದರೆ ಕುಟುಂಬ ನ್ಯಾಯಾಲಯ(Family Courts)ಗಳಿವೆ. ಇಲ್ಲಿ ವಿವಾಹ ವಿಚ್ಛೇದನ (divorce) ಮಾಡಿದರಾಯಿತು. ನಂತರ ಇನ್ನೊಂದು ಮದುವೆ ಮಾಡಿದರಾಯಿತು. ಪ್ರೀತಿ ವಿಶ್ವಾಸವೆಂಬ ಮಾತೆಲ್ಲಾ ಸುಳ್ಳು ಹಣ ಒಂದಿದ್ದರೆ ಎಲ್ಲಾ ತನ್ನಷ್ಟಕ್ಕೆ ಆಗುತ್ತದೆ".

ಅದಕ್ಕೆ ವಯಸ್ಸಾದ ಮುದುಕರು ಹೇಳುತ್ತಾರೆ. "ಎಲೇ ಮಗುವೇ ನಮ್ಮ ಭಾರತೀಯ ಸಂಸ್ಕೃತಿ ಬಹು ಪುರಾತನವಾದುದ್ದು ಅದರಂತೆಯೇ ಗೌಡರ ಸಂಸ್ಕೃತಿ. ಪ್ರಪಂಚದ ಅತೀ ಪುರಾತನ ಸಂಸ್ಕೃತಿಗಳು ಆಗಿ ಹೋದವು. ಗ್ರೀಕ್ ರೋಮ್ ಮೆಸಪೊಟೇಮಿಯಾ ಈಜಿಪ್ಟ್ ಮುಂತಾದ ಸಂಸ್ಕೃತಿಗಳು ಒಂದು ಕಾಲಕ್ಕೆ ಅತೀ ಉನ್ನತಸ್ಥಿತಿಯಲ್ಲಿದ್ದು ಮಂಗಮಾಯವಾಗಿ ಬಿಟ್ಟವು. ಆದರೆ ಭಾರತೀಯ ಸಂಸ್ಕೃತಿ ಅಂದಿನಿಂದ ಇಂದಿನವರೆಗೆ ಮುಂದುವರಿಯುತ್ತಾ ಬರುತ್ತಿದೆ. ಭಾರತೀಯ ಸಂಸ್ಕೃತಿ ಭಾರತೀಯನ ಪ್ರತಿಯೊಂದು ಕಾರ್ಯದಲ್ಲೂ ಹಾಸು ಹೊಕ್ಕಾಗಿ ಇಂದಿನವರೆಗೂ ಉಳಿದಿರುವುದು, ನಮ್ಮ ಸಂಸ್ಕೃತಿಯ ವಿಶೇಷ ಗುಣ. ಇದಕ್ಕಾಗಿ ನಮ್ಮ ಋಷಿಗಳು ತಮ್ಮ ಜೀವನ ಪರ್ಯಂತ ತಪಸ್ಸನ್ನಾಚರಿಸಿ ರೂಪಿಸಿದ ಸಿದ್ಧಾಂತವೇ ಈ ರೀತಿ ಅಳಿಯದೆ ಉಳಿದಿರುವುದಕ್ಕೆ ಕಾರಣವಾಗಿದೆ. ನಮ್ಮಲ್ಲಿ ಬಡತನವಿರಬಹುದು. ಯಂತ್ರಜ್ಞಾನ ಕಡಿಮೆ ಇರ ಬಹುದು. ಆದರೆ ನಮ್ಮ ಸಮಾಜ ಜೀವನ ಪಶ್ಚ್ಯಾತ್ಯ ರಾಷ್ಟ್ರದಲ್ಲಿರುವ ಸಮಾಜಿಕ ಜೀವನಕ್ಕಿಂತ ಶಾಂತಿಯುತ ವಾದ ಜೀವನವನ್ನು ಕಾಣುತ್ತಿದ್ದೇವೆ. ನಾವು ತಾಯಿಗೆ ಕೊಟ್ಟ ಗೌರವ ಪ್ರೀತಿಯನ್ನು ಪ್ರಾಶ್ಚಿಮಾತ್ಯ ಸಮಾಜ ದಲ್ಲಿ ಕಾಣಲು ಸಾಧ್ಯವಿಲ್ಲ. ನಮ್ಮ ಹಿರಿಯರು ನಿಡಾಂಬರ ಜೀವನವನ್ನು ನಡೆಸಿಕೊಂಡು ಉದಾತ್ತ ಭಾವನೆಗಳನ್ನು ಹೊಂದಿದ್ದರು. ಆದರೆ ಈಗಿನ ಪೀಳಿಗೆ ತದ್ವಿರುದ್ಧವಾಗಿದೆ. ಋಷಿವರ್ಯರು, ಶ್ರುತಿಕಾರರು ಸ್ಮೃತಿಕಾರರು, ತರ್ಕಿಸಿ ಸಿದ್ಧ ಪಡಿಸಿದ ಪದ್ಧತಿಗಳನ್ನೇ ನಾವು ಆಚರಿಸುತ್ತಿದ್ದೇವೆ. ಅವುಗಳು ಬರೇ ಅಂಧಶ್ರದ್ಧೆ ಯ ಆಚರಣೆಗಳಲ್ಲ ಪ್ರತಿಯೊಂದು ಆಚರಣೆಗಳಿಗೂ ಅರ್ಥವಿದೆ. ಕಾರಣವೂ ಇದೆ. ಹೊಸದಾಗಿ ಬಂದಿರು ವುದೆಲ್ಲವೂ ವೈಜ್ಞಾನಿಕವೆನಿಸಲಾರದು. ಹಳೆಯದೆಲ್ಲಾ ಗೊಡ್ಡು ಸಂಪ್ರದಾಯಗಳಲ್ಲ. ಸಂಸ್ಕೃತಿ ಮನುಷ್ಯನ ಆಧ್ಯಾತ್ಮಿಕ ವಿಚಾರಗಳಿಗೆ ಎಡೆಮಾಡಿಕೊಡುತ್ತದೆ. ನಾಗರೀಕತೆ ಮನುಷ್ಯನ ಭೌತಿಕ ವಿಚಾರಗಳಿಗೆ ಪ್ರೋತ್ಸಾಹ ಕೊಡುತ್ತದೆ.

ಪರವರ ಅನುಕರಣೆಯಿಂದ ಎಂದಿಗೂ ನಮ್ಮದಾ ಗದು. ಸಿಂಹದ ತೊಗಲನ್ನು ಧರಿಸಿದ ಕತ್ತೆ ಸಿಂಹ ವಾಗುವುದೇ ? ಪಾಶ್ಚಾತ್ಯದ ಗುರಿ ಭಾಷೆ ಹಣವನ್ನು ಗಳಿಸುವುದು ವ್ಯಕ್ತಿ ಸ್ವಾತಂತ್ರ್ಯ ಅದಕ್ಕೆ ಮಾರ್ಗ ರಾಜಕೀಯ. ನಮಗೆ ಗುರಿ ಮೋಕ್ಷ ಭಾಷೆ ಅದಕ್ಕೆ ವೇದ ಅದಕ್ಕೆ ಮಾರ್ಗ ತ್ಯಾಗ ಈ ಎರಡು ಅಭಿಪ್ರಾಯಗಳಲ್ಲಿ ಯಾವುದು ಸರಿ ಯಾವುದು ತಪ್ಪು ?"

ಮುದುಕರು ಹೇಳುತ್ತಾರೆ. "ಈಗಿನ ಹುಡುಗರು ಓದಿ ರ್‍ಯಾಂಕ್ ಪಡೆಯುವುದರಲ್ಲಿ, 1ನೇ ದರ್ಜೆಯಲ್ಲಿ ಉತ್ತೀರ್ಣರಾಗಬೇಕೆಂದು ಕುತೂಹಲ ಇಲ್ಲ. ಆದ್ದರಿಂದ ಅವರಿಗೆ ಐ.ಎ.ಎಸ್. ಐ.ಪಿ.ಎಸ್. ಐ.ಎಫ್.ಎಸ್. 1ನೇ ಮತ್ತು 2ನೇ ದರ್ಜೆ ಉದ್ಯೋಗ ಸಿಗದಿರುವುದಕ್ಕೆ ಕಾರಣ" ಇದಕ್ಕೆ ಯುವಕರು ಹೀಗೆ ಹೇಳುತ್ತಾರೆ.

"ನಮಗೆ ಐ.ಎ.ಎಸ್. ಮುಂತಾದ ಪರೀಕ್ಷೆಗಳಿಗೆ ಕೂರುವುದಕ್ಕೆ ಸರಿಯಾದ ಸಲಕರಣೆಗಳಿಲ್ಲ. ನಾವೆಲ್ಲಾ ಹಳ್ಳಿಯ ಮಕ್ಕಳು. ನಾವು ಇರುವಲ್ಲಿ ಸರಿಯಾದ ಗ್ರಂಥಾಲಯಗಳಿಲ್ಲ. ಉನ್ನತ ಪರೀಕ್ಷೆಗಳಿಗೆ ಕೂರಲು ಅದಕ್ಕೆ ಬೇಕಾದ ತಯಾರಿ ನಡೆಸಲು ನಮಗೆ ಸಂದರ್ಭ ಗಳಿಲ್ಲ. ನಾವು ದೂರದ ಬೆಂಗಳೂರು, ಮೈಸೂರು, ಮಂಗಳೂರು ಮುಂತಾದ ಒಳ್ಳೆಯ ಗ್ರಂಥಾಲಯಗಳಿಗೆ ಹೋಗಲು ಅಥವಾ ಈ ಪರೀಕ್ಷೆಗಳಿಗೆ ತರಬೇತಿ ಕೊಡುವ

ಕೇಂದ್ರಗಳಿಗೆ ಸೇರಿಕೊಳ್ಳುವ ಅನುಕೂಲತೆಗಳಿಲ್ಲ, ಹೆಚ್ಚಾಗಿ ಬಿಯುಸ್ಸಿ, ಯುಂಯುಸ್ಸಿ, ಬಿ.ಎ. ಯಂ.ಎ. ಬಿಕಾಂ. ಯುಂಕಾಂ. ಓದಿದವರು ಈ ಪರೀಕ್ಷೆಗಳಿಗೆ ಹೋಗಲು ಇಚ್ಛೆ ಪಡುವರು. ಅಂತಹ ವಿದ್ಯಾರ್ಥಿಗಳಿಗೆ ನಮ್ಮ ಸಮಾಜದಲ್ಲಿ ಎಷ್ಟರ ಮಟ್ಟಿಗೆ ಗೌರವ ಪ್ರೋತ್ಸಾಹ ಇದೆ ? ಇಂಜಿನಿಯರ್ ಡಾಕ್ಟರ್ ಆದರೆ ಜನ ಮನ್ನಿಸುತ್ತಾರೆ. ಅವರಿಗೇ ಪ್ರೋತ್ಸಾಹ ಜಾಸ್ತಿ. ಹೀಗಿರುವಾಗ ಬರಿ ಖಾಲೀ ಡಿಗ್ರಿ. ಮಾಸ್ಟರ್ ಡಿಗ್ರಿ ಪಡೆದವರನ್ನು ಕೇಳುವವರ್ಯಾರು ?

ನಮ್ಮಲ್ಲಿ ಗೌಡ ವಿದ್ಯಾ ಸಂಘಗಳಿವೆ, ಗೌಡ ಸಮಾಜಗಳಿವೆ ವಿದ್ಯಾ ಸಂಘಗಳು ಹಿಂದಿನ ರೀತಿಯ ಸ್ಕಾಲರ್ ಶಿಫ್‌ಗಳನ್ನು ಕೊಡುವುದರಲ್ಲಿ ಯಾವುದೇ ಹೆಚ್ಚಿನ ಪ್ರೋತ್ಸಾಹವನ್ನು ಮಾಡುತ್ತಿಲ್ಲ. ಮಾಡುತ್ತಿದ್ದರೂ ಅದು ಕೇವಲ ಬೆರಳೆಣಿಕೆಯಷ್ಟು ಮಾತ್ರ. ಅಲ್ಲಲ್ಲಿ ಸಮಾಜಗಳನ್ನು ತೆರೆದು ಕಲ್ಯಾಣ ಮಂಟಪಗಳನ್ನು ಕಟ್ಟಿಸುತ್ತಿದ್ದಾರೆ. ಕಲ್ಯಾಣ ಮಂಟಪಗಳನ್ನು ಕಟ್ಟಿಸಿ ಬರುವ ಹಣವನ್ನು ಯಾವ ಕಾರಣಕ್ಕಾಗಿ ಉಪಯೋಗಿಸುತ್ತಾರೆಂಬುದೂ ಇನ್ನೂ ತಿಳಿದು ಬಂದಿಲ್ಲ. ಈ ವಿದ್ಯಾ ಸಂಘಗಳು ಕಲ್ಯಾಣ ಮಂಟಪಗಳು ಹಣ ಕೂಡಿ ಹಾಕುವ ಸಂಸ್ಥೆಗಳಾಗದೆ ಸಮಾಜದ ಸರ್ವತೋಮುಖ ಅಭಿವೃದ್ಧಿಯ ಹಾದಿಯನ್ನು ಕಂಡು ಕೊಂಡದ್ದು ಕಾಣುವುದಿಲ್ಲ. ಈ ವಿದ್ಯಾ ಸಂಘಗಳು ಸಮಾಜದ ಕಲ್ಯಾಣ ಮಂಟಪಗಳಿಂದ ಬರುವ ಹಣವನ್ನು ಸಮಾಜದ ಬುದ್ಧಿವಂತ (merited) ಯುವಕ ಯುವತಿಯರಿಗೆ ಐ.ಎ.ಯಸ್. ಮುಂತಾದ ಪರೀಕ್ಷೆಗಳಿಗೆ ಕೂರಲು ಬೇಕಾದ ಪುಸ್ತಕ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಮಾಡಲು ಬೇಕಾದ ತರಬೇತಿ ಕೊಡುವ ತರಬೇತಿ ಕೇಂದ್ರಗಳಿಗೆ ಹೋಗಿ ಅಭ್ಯಾಸ ಮಾಡಲು ಬೇಕಾದ ಖರ್ಚುಗಳನ್ನು ವಹಿಸಿ ಕೊಳ್ಳುವ ಯುವಕ—ಯುವತಿಯರಿಗೆ ಉದ್ಯೋಗ ಮತ್ತು ಸ್ವಯಂ ಉದ್ಯೋಗಗಳನ್ನು ಕಲ್ಪಿಸುವ ತರಬೇತಿ ಕೇಂದ್ರಗಳನ್ನು ತೆರೆಯುವ ಅಥವ ಏರ್ಪಾಡು ಮಾಡುವಂತಾದರೆ ನಮ್ಮ ಯುವಕ — ಯುವತಿಯರೂ ಬೇರೆ ಜಾತಿ ಬಾಂಧವರೊಡನೆ ಸ್ಪರ್ಧಿಸಿ ತನ್ನ ತನವನು ಗಳಿಸಲು ಸಾಧ್ಯವಾದೀತು.

ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ?



# ಸಮಾನತೆಯ ಫಲ

—ಲಲಿತ ಮಲ್ಲಾರ ಸುಳ್ಯ

[ಸಮಾನತೆ ರಮೇಶನಂತೆ ಸಭೆಗಳಲ್ಲಿ ಭಾಷಣ ಬಿಗಿದರೆ ಸಾಧಿಸಲು ಸಾಧ್ಯವಿಲ್ಲ. ಅದನ್ನು ಆಚರಣೆಯಲ್ಲಿ ತರುವಂತಾಗಬೇಕು. ಈಗಿನ ಕಾಲದಲ್ಲಿ ಗಂಡು ಹೆಣ್ಣಿಗೆ ಸಮಾನ ಸ್ಥಾನ ಮಾನಗಳಿವೆ ಎಂದು ನಮ್ಮ ಸಂವಿಧಾನ ಘೋಷಿಸಿದರೂ ಸಮಾಜ ದಲ್ಲಿ ಈ ಹಿಂದೆ ನಡೆಯುತ್ತಿದ್ದ ಹೆಣ್ಣಿನ ಶೋಷಣೆ ಮುಂದುವರಿಯುತ್ತಿದೆ ಎಂಬು ದನ್ನು ಈ ಲೇಖನ ಎತ್ತಿ ತೋರಿಸಿದೆ. ಪ್ರಾಚೀನ ಕಾಲದಲ್ಲಿ ಹೆಣ್ಣು ದೇವತೆ ಎಂಬ ಭಾವನೆ ಭಾರತೀಯರಲ್ಲಿ ಇದ್ದದ್ದು ಮಧ್ಯಯುಗದಲ್ಲಿ ಹಲವಾರು ಕಾರಣಗಳಿಂದ ಹೆಣ್ಣು ಗಂಡಿನ ಪರಿಚಾರಕಳು ಎಂಬ ಭಾವನೆ ಬೆಳೆಯಲು ಪ್ರಾರಂಭವಾಯಿತು. ಈಗ ಈ ನವೀನ ಜಗತ್ತಿನಲ್ಲಿ ವಿದ್ಯಾವಂತರೆನಿಸಿಕೊಂಡವರಿಗೂ ಈ ಪ್ರಜ್ಞೆ ಮೂಡ ದಿರುವುದು ಶೋಚನೀಯ ಸಂಗತಿಯಾಗಿದೆ. ಮದುವೆ ಎಂದರೆ ಬರೇ ಕಾಮತೃಪ್ತಿಗಾಗಿ ಮಾಡಿದ ಬಂಧನವೆಂದು ತಿಳಿಯದೆ "ಒಂದು ಸಲ ವಿವಾಹವಾದರೆ ಏಳೇಳು ಜನ್ಮ ಗಳಲ್ಲೂ ಅವನೇ ಗಂಡ ಅವಳೇ ಹೆಂಡತಿ" ಎಂಬ ಭಾರತೀಯ ಪರಂಪರೆಯ ತತ್ವ ಈ ಭೇಧಭಾವಗಳನ್ನು ಹೋಗಲಾಡಿಸುವ ದಿವ್ಯ ಮಂತ್ರ. ಇದನ್ನು ಶ್ರೀಮತಿ ಲಲಿತಾ ಮಲ್ಲಾರರವರು ಸೂಕ್ಷ್ಮವಾಗಿ ಚುಟುಕ್ಕಾಗಿ ಚಿತ್ರಿಸಿದ್ದಾರೆ ಸಂ]

ಮನಿ ಹತ್ರವಾದಂಗೂ ರಮೇಶನ ದುಗಡ ಹೆಚ್ಚುತಿತ್ತು. ಸುಧಾ ಯಾವ ತೀರ್ಮಾನತಗೊಂಡ್ಲು. ಅಲ್ಲ ಕಾಲೇಜಿನ್ಯಾಗೇನೋ ಸ್ಪರ್ಧೆಗಾಗಿ, ಸಮಾನತೆಗಾಗಿ ಹೆಣ್ಣು ಹೋರಾಟ ನಡಸಲೇ ಬೇಕು. ಪುರುಷರು ಬೆಂಬಲ ಕೊಡಬೇಕು ಎಂದು ಭಾಷಣ ಬಿಗ್ದು ಬಹು ಮಾನ ಗಿಟ್ಟಿಸಿದ್ರೆ ಅದ್ನೆ ಜೀವನಕ್ಕು ಅಳವಡ್ಸಿಕೊಳ್ಳದೇ ವಿದ್ಯಾವಂತ ವಿಶಾಲ ಮನೋಭಾವಂತ ವಾದಿಸಿ ಕೊಂಡು ನನ್ನ ಮರ್ಯಾದಿ ತಗಿಯಕೇ ಹತ್ಲಾಳಲ್ಲ ಹೆಂಡತೀನ ಆಳಲಾರ್ದ ನಾನೆಂತ ಗಂಡ್ಸು ಅದು ಎರಡು ಮಕ್ಳಾದ ಮೇಲೆ ಇವ್ಳ ಸಮಾಜ ಸೇವಿ ಹೆಚ್ಚಾಗ್ಲಾದೆ ಅದಕ್ಕೆ ಸರಿಯಾದ ಬಂದುಬಸ್ತು ಮಾಡಬೇಕೆನ್ನೋ ಹಠಕ್ಕೆ ಬೆಳಿಗ್ಗೆ ಎರಡ್ರಲ್ಲೊಂದು ತೀರ್ಮಾನ ತಗಂತ ಹೇಳಿ ಮನಿ ಬಿಟ್ಟಿದ್ದು. ಅರೇ ಅಷ್ಟು ಹೇಳಿ ಹೋದ್ರು ಮತ್ತೆ ಮನಿ ಬಾಗ್ಲಿಗೆ ಬೀಗ ಹಾಕಿ ಹೊಗ್ಯಾಳಲ್ಲ. ಧಿಮಾಕಿನ ಹೆಣ್ಣಿಗೆ ಬುದ್ದಿ ಕಲಸದ್ರೆ ನನ್ನೆಸ್ರು ರಮೇಶನೇ ಅಲ್ಲ. ಹುಚ್ಚು ಪ್ರೀತಿ ಪ್ರೇಮದ ಬಲಿಗೆ ಬಿದ್ದು ಈ ಕಲ್ತ ಹೆಣ್ಣ ಕಟ್ಟಿಕೊಂಡು ಬಂದ ಬವಣೆ ಸಾಕಪ್ಪ ತೆಪ್ಪಗೆ ಅಮ್ಮ ಅಪ್ಪ ಹೇಳಿದ ಮಾನವ ಮುಗ್ಧ ಮದುವಿಯಾಗಿದ್ರೆ ಈ ರಗಳೇ ಇತ್ತಾ...? ಅಲ್ಲ ಇಷ್ಟೊತ್ತಿಗೆ ಮಕ್ಳನ್ನು ಕಟ್ಟಿಕೊಂಡು ಎಲ್ಲಿಗೋದ್ಲು ಲೋಫರ್ ಎನ್ನುತ್ತ ತನ್ನಲ್ಲಿದ್ದ ಇನ್ನೊಂದು ಕೀ ಯಿಂದ ಬೀಗ ತಗ್ದು ಒಳ ಹೊಕ್ಕಿದವ್ನೆ ಕನ್ನಡಿ ಎದುರಿಗೆ ಸಿಕ್ಕಿಸಿಟ್ಟ ಕಾಗದನೆ ಎದ್ರುಗೊಳ್ತು. ಬಿಡಿಸಿ ಓದಿನೋಡಿ ಕೊನಿಗೂ ನಂಗೆ ಬುದ್ದಿ ಕಲ್ಸಕೆ ಹೊರಟ್ಯಾ ಎನ್ನುತ ತಲೆ ಮೇಲೆ ಕೈ

ಹೊತ್ತು ಕೂತ. ರಮೇಶಗೆ ಬೆಳಗ್ಗೆ ಗಂಡ ಹೆಂಡಿರಲ್ಲಿ ನೆಡ್ದ ಬಿರುಸಿನ ಮಾತುಕತೆ ನೆನಪಾಯ್ತು.

ಮನೆ ಸುಧಾರಣೆ ಮಾಡ್ದ ನೀ ಸಮಾಜನೇನು ಸುಧಾರಿಸೀಯೋ...... ? ದಿನ ಈ ಮಾತು ಕೇಳಿ ರೋಸಿದ್ದ ಸುಧಾ ಈ ದಿನ ರೊಚ್ಚಿನಲ್ಲಿ ಪತಿಯನ್ನು ಖಂಡಿಸಿ ಮಾತಾಡಿದ್ದಳು. ನೋಡಿ ನಿಮ್ಮ ಮಾತು ಮನ್ಸು ನಂಗೆ ಚೆನ್ನಾಗಿ ಅರ್ಥ ಆಗ್ಲಾದೆ. ಹೆಣ್ಣಿನ ಇನ್ನೊಂದು ಮುಖ ಮತ್ಸರ ಅಂತಾರೆ. ಹಂಗೆ ಅನ್ನೋರು ಯಾರು ಗೊತ್ತಾ ? ನಿಮ್ಮಂತ ಗಂಡಸೆ ಹೊರ್ತು ಹೆಣ್ಣಲ್ಲ ಹೆಣ್ಣು ಗಂಡಿಗೆ ಯಾವ ತರ್ದ ಬಿರ್ದು ನೀಡ್ದೆ ಮೂಗ ಬಸವನಂಗೆ ಮನಿ ಒಳ್ಗೆ ಬಿದ್ದಿದ್ರೆ ತಾನೆ ನಿಮ್ಗೆ ಕುಶಿಯಾಗದು. ಹಂಗೆ ನಾ ಕೇಳಲ್ಲ ಅಲ್ಲ ಅನ್ನೋದು ತಿಳ್ದೆ ತಾನೆ ನಿಮಗಿಂದು ನಾ ಮಾಡಕೆಲ್ಸ ಅರ್ಥ ಇಲ್ಲದ್ದು ಅನ್ನಿಸ್ತಿರದು. ಮನಿ ಸುಧಾರಣೆ ಇನ್ಯಾವ ರೀತಿ ಮಾಡದು ಅನ್ನಾದಾದ್ರು ತಿಳ್ಸಿಕೊಡಿ. ಯಾವಕೆಲ್ಸ ಮಾಡಿಲ್ಲ ತೋರ್ಸಿಕೊಡಿ. ಸುಮ್ನೆ ಮತ್ಸರದಾಗೆ ಏನಾರು ಕಿರಿಕಿರಿ ಹೇಳಿ ನನ್ನ ಮನ್ಸು ಹಾಳ್ ಮಾಡ್ತೀರಲ್ಲ. ಸಿಟ್ಟಿನಾಗಿ ಬೈದಾಗ ಮೌನ ಗೌರಿಯಾಗಿ, ಸಿಟ್ಟು ತಿಳ್ದಾಗ ನಿಧಾನವಾಗಿ ವಿಚಾರಗಳ ವಿಮರ್ಶೆ ಮಾಡಿ ಬುದ್ದಿ ಹೇಳುತಿದ್ದ ಮಡದಿ ಇಂದು ಇದ್ದಕ್ಕಿದ್ದಂಗೆ ಎದುರುತ್ರ ಹೇಳಿದ್ದ ಕೇಳಿ ರಮೇಶನ ಸಿಟ್ಟು ಒಮ್ಮೆಗೆ ನೆತ್ತಿಗೇರ್ತು, ಒಡನೆ ಎಳ್ದು ಹಿಡ್ದು ಬೆನ್ನಗೆರಡು ಬಾರ್ಸಿದ. ನೀವೊಬ್ಬ ವಿದ್ಯಾವಂತರೇನ್ರಿ ಹೆಣ್ಣಿನ ಮೇಲೆ ಕೈ ಮಾಡುವಷ್ಟು ಕೆಳ ಮಟ್ಟಕ್ಕೆ ಇಳಿತೇ ನಿಮ್ಮ ಬುದ್ದಿ ಸುಧಾ ಕಣ್ಣೀರ ಕೋಡಿ ಹರ್ಸುತ್ತ ಕೇಳಿದಾಗ ತನ್ನಾ ತಪ್ಪಿನ ಅರಿವಾಯ್ತು. ಆದ್ರೇನು ಅವ್ಳ ಸಮಾಜ ಸೇವೆ ಹುಚ್ಚು ಇಳಿಸಲೇ ಬೇಕು. ಅವ್ಳ ಸೇವಾ ಪಟ್ಟಿ ಹಂಗೂ ಕತೆ ಕವಿತೆಯು ಪ್ರಚಾರದಿಂದಾಗಿ ನನ್ನ ಹೆಸರಿನ ಹಿಂದೆ ಅವ್ಳ ಹೆಸರಾಗದೆ ಅವ್ಳ ಹೆಸರಿನ ಮುಂದೆ ನನ್ನ ಗುರುತಿಸಂಗೆ ಆಗ್ತ ಉಂಟಲ್ಲ ಇದ್ನ ಯಾವ ಗಂಡ್ಸು ತಾನೇ ಸಹಿಸ್ತಾನೆ. ಯಾಕೇ ಸುಮ್ಮಾ ನಾದ್ರಿ, ಹೆಣ್ಣು ಗಂಡಿನಲ್ಲಿ ಸಮಾನತೆ ಮುಖ್ಯಾಂತ ಭಾಷಣ ಬಿಗಿತಿದ್ದ ನೀವೀಗ ತನ್ನ ಹೆಂಡತಿಯ ಕೀರ್ತಿಯ ಸಹಿಸಲಾಗದಂಗಾಗಿರುದು ಸೋಜಿಗನೆ ಸರಿ. ಎಲ್ಲರ ಅಟ್ಟಹಾಸನು ವೇದಿಕೆಗೆ ಮೀಸಲು. ಜೀವನಕ್ಕೆ ಇದೇ ಎಲ್ಲ ರೀತಿಲು ಶೋಷಣೆ. ಸಾಕು ನಿನ್ನ ಪ್ರತಾಪ. ಮಾಡದು ಮಾಡಿಕಂಡು ಮತ್ತೆ ನಾಲಿಗೆ ಎಳೀತೀಯಾ ಹೋಗು ನಿನ್ನ ಕೆಲ್ಸ ನೋಡಿಕೊ ? ನನ್ನ ಕೆಲ್ಸ ನೀವು ಮಾಡಿಕೋಡದು ಬೇಡ ಹೆಂಡತಿಗೆ ಕಷ್ಟ ಆಗ್ತದಂತ ಕರುಣೆತೋರಿ ಜನ ಇಡದು ಬೇಡ, ಆದ್ರೆ ನನ್ನ ತಪ್ಪೇನು ಅನ್ನಾದ್ನ ತೋರ್ಸಿಕೊಟ್ರೆ ತಿದ್ದಿಕೊಂಡೇನು ? ತಪ್ಪು ತೋರ್ಸಿ ಕೊಡಾದು ಒಂದು ಕಾಲ ಬರ್ತದೆ ನೀ ಹಿಂಗೆ ಯಾರ್ದಾದ್ರು ಕಾರು, ಜೀಪಗೆ, ತಿರ್ಗುತ ಗಂಡು ಬೀರಿ ಯಾಗಿ ಮೆರಿ, ಗಂಡ ಮಕ್ಳನ ಪರದೇಶಿ ಮಾಡು. ನಾ ಹಿಂಗೆ ಬಾಯಿ ಮುಚ್ಚಿಕೊಂಡಿರುತ್ನೆ. ಚೆ, ಯಾಕೆ ಹೇಳದು ಬಾಯಿ ಮುಚ್ಚಿಕೊಂಡಿರದ, ಇನ್ನು ನಾ ಮಾತ್ರ ಬಾಯಿ ಮುಚ್ಚಿಕೊಂಡು ಕೆಲಸದಾಳಿನಂಗೆ ಬಾಳಕೆ ಸಾಧ್ಯವಿಲ್ಲವೆನ್ನುತ ನಡುದ್ಲು. ಕೈ ಮುಸುರೆ ಪಾತ್ರೆ ತೊಳಿತಿದ್ರು, ಮನ್ಸು ನಿನ್ನೆ ಘಟನೆಯ ಮೆಲುಕು ಹಾಕ್ತಿತ್ತು. ಬೆಳಗ್ಗಿನ ಕಾಫಿ, ತಿಂಡಿ ಮಾಡಿ ಗಂಡ ಮಕ್ಳಗೆ ಕೊಟ್ಟು, ಗಂಡನ್ನಾ ಆಫೀಸಿಗೆ, ಮಕ್ಕಳಿಗೆ ಶಾಲೆಗೆ ಕಳ್ಸಿ. ಮಧ್ಯಾನಕ್ಕೆ ಅಡಿಗೆ ಮಾಡಿಟ್ಟು ಮಹಿಳಾ ಸಮಾಜಕ್ಕೆ ಹೊಲಿಗೆ ಕಲಿಸಲು ಹೋಗಿ ಮಧ್ಯಾಹ್ನ ದೊಟಕ್ಕೆ ಬಂದು ಎಲ್ಲರಿಗೂ ಊಟಕೊಟ್ಟು ಇರುವ ಸ್ವಲ್ಪ ಜಾಗದಲ್ಲಿ ಮಾಡಿದ ತರಕಾರಿ ಹಾಗೂ ಹೂ ಗಿಡಗಳಿಗೆ ನೀರೆರೆದು ರಾತ್ರಿ ಅಡಿಗೆಗೆ ಶುರು ಮಾಡ ಬೇಕು. ಅದಕ್ಕೆ ಮೊದಲು ಸಂಜೆ ಬರುವ ಮಕ್ಕಳಿಗೆ ತಿಂಡಿ ಮಾಡಿಟ್ಟು ಕಾಫಿ ಮಾಡ್ತಿರ ಬೇಕಾದ್ರೆ ಅಮ್ಮ ಸುಧಮ್ಮ ಎಂದು ಕರೆದಿದ್ದ ಕೇಳಿ ಹೊರಗೆ ಬಂದು ಯಾರು ಎಂದಳು. ನಾನು ಮರಿಯಾ, ಏನು ಮರಿಯಾ ಸೌಖ್ಯನ ? ನಿನ್ನ ಹೆಂಡತಿಗೆ ಹೆರಿಗೆ ಆಯ್ತು ? ಇಲ್ಲ ಅಮ್ಮ ಅದೇ ಈಗ ಪೇಚಿಗೆ ಬಂದಿರೊದು ಈ ಊರಗಿನ ಆಸ್ಪತ್ರೆಗೆ ಹೋದ್ರೆ ಅಲ್ಲಿ ಯಾವಾಗ್ಲು ಬಾಗ್ಲು. ಸುಬ್ಬಿಗೆ ಹೆರಿಗೆ ಬೇನೆ ಸುರುವಾಗ್ಯತೆ ಪಕ್ಕಮಾನಿ ಅಜ್ಜಿನ ಹತ್ರ ತೋರ್ಸಿ ಓಡಿ ಬಂದೆ ಅಮ್ಮ, ಈಗ ಇಲ್ಲಿ ನೋಡಿದ್ರೆ ನರ್ಸ ಇಲ್ಲ. ನೀವೆ ನಂಗೇನಾರು ದಾರಿ ತೋರ್ಸ್ಬೇಕು ದೇವರು: ಅಂತ ಇತ್ತ ಬಂದೆ ತಾಯಿ ಅಂತ ಕೈ ಮುಗ್ದು ನಿಂತ ಬಡ ಮರಿಯನ ನೋಡಿ ಅಯ್ಯೋ ಅನ್ನಿಸ್ತು. ಕೂಡ್ಲೆ ಬೇಕಾದ ಸಾಮಾನು ಸರಿ ಪಡ್ಸಿ ಕೊಂಡು ಪಕ್ಕದ ಮನೆಯವರಲ್ಲಿ ವಿಷಯ ಹೇಳಿ ಅವನ ಹಳ್ಳಿಗೆ ಹೊರ್ಟೆ ಸುಬ್ಬಿದೆ ಹೆರಿಗೆ ನೋವು ಜೋರಾಗಿತ್ತು ಹೋಗಿ ಸ್ವಲ್ಪ ಹೊತ್ತಿಗೆ ಹೆರಿಗೆ ಆಯ್ತು ಮಗು ಬಾಣಂತಿಗೆ ಮಿಸಿ ಕೆಂಜೀರಿಗೆ ಕಸಾಯ ಕಡ್ದು ಬಾಣಂತಿಗೆ

ಕುಡ್ಸಿ ಬಿಸಿಯಾಗಿ ಅನ್ನ ಮಾಡಿಕೊಡು ಅಂತ ಮರಿಯಾಗೆ ಹೇಳಿ ಹೊರ್ಟೆ ಮನ್ಶಿವರಿಗೂ ಬಿಟ್ಟು ಬರುತ್ನಿ ಅಮ್ಮ ಎಂದ ಮರಿಯಾಗೆ ಬೇಡ ನೀನು ಮಗು ಬಾಣಂತಿ ಕಡಿಗೆ ಗಮನ ಕೊಡು ಮನಿಲಿ ಬೇರೊಂದು ಮನುಷ್ಯರಿಲ್ಲದಿರೋಗ ನೀ ನನ್ನ ಬಿಡಕೆ ಬರದು ಸರಿಯಲ್ಲ ವೆಂದೆ. ಕೊನೆಗೆ ನನ್ನ ದಣಿಗಳು ಇದ್ರೆ ಹೇಳುತ್ನಿ ಅವರ ಕಾರಗೆ ಬಂದು ಗಳಿಗೆಲಿ ನಿಮ್ಮ ಬಿಟ್ಟು ಬರ್ತ್ನಾರೆಂತ ಅವ್ನ ದಣಿನ ಹೋಗಿ ಅಂಗಲಾಚಿ ಕಾರಗೆ ನನ್ನ ಕಳಿಸಿದ ಅವನ ದೊಡ್ಡತನಕ್ಕೆ ಸಂತೋಷಪಟ್ಟೆ.

ಕಾರಿಳಿದು ಮನೆ ಮೆಟ್ಲು ಹತ್ತ ಬೇಕಾದ್ರೆ ಸುರುವಾಯ್ತು ನಂಜಿನ ನುಡಿ ಮತ್ತು ಉದ್ರಾಕೆ. ಅದ್ಯೋ ಯಾವ ಮಾತು ಆಡ್ದೆ ಬೇಗ ಅಡಿಗೆ ಮಾಡಿ ಮಕ್ಕಳಿಗೆ ಅವ್ರಿಗೆ ಬಡ್ಸಿದೆ. ಇತ್ತ ಇದ್ದ ವಸ್ತುನ ಅತ್ತ ಇಡದು ಗೊತ್ತಿಲ್ಲ. ಅಂತದ್ರಲ್ಲಿ ಹಿಂಗೆ ಬಾಯಿಗೆ ಬಂದಂಗೆ ಬೈದು ಹೊಡೆಯದು ಅಂದ್ರೆ ನಾ ಹೆಂಗೆ ಸಹಿಸ್ಲಿ. ಹೆಣ್ಣು ಅಂದೇ ಇಷ್ಟು ಸರಸವಾಯ್ತೆ ತನ್ನಂತೆ ಒಂದು ಹೆಣ್ಣು ಶೋಚನಿಯ ಸ್ಥಿತಿಯಲ್ಲಿರುವಾಗ ಹೋಗದೆ ಹೇಗಿರಲಿ. ಭಾಷಣ ಸ್ಪರ್ಧೆಯಲ್ಲಿ ಯಾವಾಗಲೂ ಮೊದಲ ಬಹುಮಾನ ಗಿಟ್ಟಿಸುತಿದ್ದ ರಮೇಶನ ವಾಕ್‌ಚಾತುರ್ಯಕ್ಕೆ ಮರುಳಾಗಿ, ಚಿಕ್ಕಂದಿನಿಂದಲೂ ತನ್ನ ಪ್ರೀತಿಸುತ್ತಿದ್ದ ಕೃಷ್ಣನ ದೂರ ಮಾಡಿದ ತನ್ನ ಮರುಳುತನಕ್ಕೆ ಇಂದು ನಾಚಿಕೆಯಾಗುತಿದೆ, ತನ್ನ ಪ್ರತಿಯೊಂದು ಕೆಲ್ಸದ ಬಗೆ ಪ್ರೋತ್ಸಾಹ ನೀಡುತ್ತಾ ಸಾಹಿತ್ಯಾಸಕ್ತಿಗೆ ನೀರೆರೆದು ಪೋಷಿಸಿದ ಕೃಷ್ಣನಿಗೆ ನಾ ನೀಡಿದ ಉಡುಗೊರೆ ?

ಹೈಸ್ಕೂಲಿನ ವಿದ್ಯಾಭ್ಯಾಸಕ್ಕೆ ತಿಲಾಂಜಲಿ ಇತ್ತು ಕಾಫಿ ತೋಟ ಬೇಸಾಯ ಕೆಲ್ಸವನ್ನೆ ಜೀವಾಳ ವಾಗಿಸಿ ಕೊಂಡು ಹಳ್ಳಿಯ ಸುಧಾರಣೆಗೆ ಶ್ರಮಿಸುತ್ತ ಬಿಡುವಿನ ವೇಳೆಯಲ್ಲಿ ನಾಡ ಕವಿತೆಗಳ ರಚಿಸಿ ಶಾಲೆಯ ಮಕ್ಕಳಿಂದಲೇ ಆಡಿಸಿ, ಹಾಡಿಸಿ, ಆತ್ಮತೃಪ್ತಿಯ ಪಡೆವ ಕೃಷ್ಣ ಅವನ ಮುಂದೆ ಈ ವಾಗ್ಮಿ ವಿದ್ಯಾವಂತ, ಉದ್ಯೋಗವಂತ, ಅಲ್ಪ ಆಯೋಗ್ಯ ಮೇಲ್ನೋಟಕ್ಕೆ ಒಬ್ಬನ ವ್ಯಕ್ತಿತ್ವವನ್ನು ಅಳೆದು ಸ್ನೇಹಿತನ್ನೊ ಸಂಗಾತಿನೋ ಆಗಿ ಸ್ವೀಕರಿಸೋದು ಮಹಾ ತಪ್ಪು ಅನ್ನೊ ಅನುಭವ ಈ ಮೊದಲೇ ಬಂದಿದ್ದರೆ, ನಾನಿಂದು ಸುಖಿಯಾಗಿರುತಿದ್ದೆ, ಇಷ್ಟೆಲ್ಲ ಕಷ್ಟ ಪಟ್ಟರು ಸುಖ ಸಂತೋಷ ಮರೀಚಿಕೆಯಾಗುತಿದೆ. ಬೆಳಿಗ್ಗೆ ನಾಲ್ಕು ಗಂಟೆಗೆದ್ದು ಗಾಣದೆತ್ತಿನಂಗೆ ದುಡಿಯಲು ಸರುವಾದರೆ ರಾತ್ರಿ ಹತ್ತು ಗಂಟೆಯಾಗಿದ್ರು ಮುಗಿಯಕಿಲ್ಲ.

ಸ್ವಲ್ಪ ಬಿಡವುಸಿಕ್ಕಿದಾಗ ಬರೆಯಲು ಕೂತ್ರೆ ಸುರುವಾಯ್ತು ಮಾರಾಯನ ಪಿರಿಪಿರಿ. ಇದನ್ನೆಲ್ಲ ಎಲ್ಲಿವರೆಗೆ ಸಹಿಸಲಿ. ಹೆಣ್ಣು ಅಡಿಗೆ ಕೋಣೆಯಲ್ಲಿ ಕೊಳೆಯುತ್ತ ನಾಲ್ಕು ಗೋಡೆಯೊಳಗೆ ಬಂದಿಯಾಗಿದ್ದರೆ ಮಾತ್ರ ಈ ಗಂಡಸರಿಗೆ ಸಂತಸ ಇಲ್ಲದಿದ್ರೆ ಇದೆರಗಳೆ. ಛೆ ಎಲ್ಲ ಗಂಡಸರನ್ನು ತೆಗೆಳುವುದು ತಪ್ಪು, ನನ್ನ ತಂದೆ ಎಂಥಹ ವಿಶಾಲ ಮನೋಭಾವದವರು, ಹೆಂಡತಿ ಮಕ್ಕಳನ್ನು ಮುಷ್ಟಿಯಲ್ಲಿ ಹಿಡಿದಿಡಲು ನೋಡದೆ ಅವರವರ ಬಾಳ ಗುರಿಯನ್ನು ವ್ಯಕ್ತವ್ಯದೊಂದಿಗೆ ರೂಪಿಸಿಕೊಂಡು ಸಮಾಜ ಹಾಗೂ ಸಂಸಾರ ಎರಡರಲ್ಲು ಪರಿಪೂರ್ಣತೆಯನ್ನು ಪಡೆಯಬೇಕೆಂದು ಭೋದಿಸುತಿದ್ದರಲ್ಲ. ಒಂದೇ ಊರಿನ ಬಾಲ್ಯದ ಒಡನಾಡಿ ಕೃಷ್ಣ ಸ್ತ್ರೀಯ ಬಗ್ಗೆ ಎಂದೂ ಹಗುರವಾಗಿ ಭಾವಿಸದ ಸದ್ಗುಣವಂತಹ ಇವರೆಲ್ಲ ಪುರುಷರಲ್ಲವೆ ? ಏನು ಇನ್ನು ಪಾತ್ರೆ ತೊಳೆದು ಆಗಿಲ್ಲವೇ ಕೆಲ್ಸದಲ್ಲಿ. ಹಿಂದೆ ತಿರುಗೋದ್ರಲ್ಲಿ ಮುಂದೆ ಗಂಡನ ಹುಚ್ಚು ನುಡಿಗೆ ಮನ ನೊಂದು ತೊಳೆದ ಪಾತ್ರೆಗಳ ತೆಗೆದುಕೊಂಡು ಒಳಗೆ ಬಂದ ಸುಧಾಗೆ ಬೇಗ ಕಾಫಿ ತಿಂಡಿ ಕೊಡು ಸೆಕೆಂಡು ಬಸ್ಸಿಗೆ ಹೊಗಕುಂಟು ಎಂದ ರಮೇಶ ತಿಂಡಿ ತಿಂದು ಹೊರಡುವಾಗ "ನೋಡು ಸುಧಾ ನಿನಗೆ ಗಂಡನ ಮೇಲೆ ಪ್ರೀತಿಯಿದ್ದರೆ ಇನ್ನು ಮುಂದೆ ಯಾವ ಸಮಾಜ ಸೇವೆಗೂ ಮನ ವರಾಡದೆ ನಿನ್ನ ಕತೆ ಕವಿತೆ ಪ್ರಭಾವ ಕಡಿಮೆಗೊಳಿಸಿ ಮನೆ ಮಕ್ಕಳೆಂಬ ಛಾಂಚೆಯನ್ನು ಬೆಳಸಿ ಉಳಿಸಿಕೊಂಡರೆ ನಾನೀ ಮನೆಯಲ್ಲಿ ಇರುತ್ತೇನೆ. ಇಲ್ಲಂದ್ರೇ ನೀ ನಿನ್ನ ಮನಾನು ಬಂದಂಗೆ ಮಾಡಿಕೊಂಡಿರು ನಾ ನನ್ನ ದಾರಿ ನೋಡುತ್ನಿ, ಯಾವುದನ್ನು ಸಂಜೆ ಒಳಗೆ ಯೋಚಿಸಿ ನಿರ್ದರಿಸು" ಎಂದು ಸೀದಾ ಹೊರ ನಡೆದ ಗಂಡನನ್ನೆ ನೋಡುತ್ತಾ ಕಲ್ಲಾಗಿ ನಿಂತಳು ಸುಧಾ.

# ಇಂದಿನ ಸ್ಥಿತಿಗೆ ಸ್ತ್ರೀಯರ ಪಾತ್ರ

ಶ್ರೀಮತಿ ಲಲಿತಾ ಮಲ್ಲಾರ

ಸ್ತ್ರೀ ಅಬಲೆಯರಲ್ಲ ಎಂಬುದನ್ನು ಶ್ರೀಮತಿ ಲಲಿತಾ ಮಲ್ಲಾರವರು ಪ್ರತಿಪಾದಿಸುವುದು ಶ್ಲಾಘನೀಯ. ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಯು ಅಬಲೆಯೂ ಅಲ್ಲ ಸಬಲೆಯೂ ಅಲ್ಲ. ಅವಳು ಸಮಾಜದ ಶಿಲ್ಪಿ. ಆದುದರಿಂದಲೇ ಸರ್ವಜ್ಞನು ಈ ರೀತಿ ಹೇಳಿದ್ದಾನೆ—

ಹೆಣ್ಣಿನಿಂದಲಿ ಇಹವು । ಹೆಣ್ಣಿನಿಂದಲಿ ಪರವು ।
ಹೆಣ್ಣಿನಿಂದ ಸಕಲ ಸಂಪದವು ॥ ಹೆಣ್ಣಿಲ್ಲ। ದಣ್ಣುಗಳು ಯಾರು ಸರ್ವಜ್ಞ

ಹೆಣ್ಣಿನಿಂದಲೇ ಈ ಲೋಕದ ಸುಖವು ದೊರೆಯುವುದು. ಹೆಣ್ಣಿನಿಂದಲೇ ಸ್ವರ್ಗ ಸುಖವು ದೊರೆಯುವುದು. ಹೆಣ್ಣುಗಳನ್ನು ಒಲ್ಲದ ಮಹಾತ್ಮನು ಯಾರಿರುವರು? (ಯಾರೂ ಇಲ್ಲ)—ಸಂ

ಇಂದು ಅಪಾರ ಸಂಖ್ಯೆಯಿಂದ ಸ್ತ್ರೀಯರು ಎಲ್ಲ ರಂಗವನ್ನು ಪ್ರವೇಶಿಸುತ್ತಿರುವುದು ಶ್ಲಾಘನೀಯ ಸಮಾಜಕ್ಕೆ ಹಾಗೂ ಕುಟುಂಬಕ್ಕೆ ಸ್ತ್ರೀಯರ ಪಾತ್ರ ಅಮೋಘವಾದದ್ದು. ಆರೋಗ್ಯ ಭಾಗ್ಯಕ್ಕೂ ದೇಶದ ಏಳಿಗೆಗೆ ಮುಖ್ಯಕಾರಣರು ಮಹಿಳೆಯರೆಂದರೆ ತಪ್ಪಾಗಲಾರದು. ಮೊದಲನೆಯದಾಗಿ ಮಕ್ಕಳನ್ನು ಹೆತ್ತು ಹೊತ್ತು ಸಾಕಿ ಉತ್ತಮ ಪ್ರಜೆಗಳನ್ನಾಗಿ ರೂಪಿಸುವ ಹೊಣೆಗಾರಿಕೆ ಮಹಿಳೆಯರ ಪಾಲಿಗೆ ಅತ್ಯಮೂಲ್ಯವಾದದ್ದು. ತನ್ನ ಮಕ್ಕಳಿಗೆ ಮುಕ್ತ ವಾತಾವರಣ, ಉತ್ತಮ ಶಿಕ್ಷಣ, ಸಂಸ್ಕೃತಿ ನಡವಳಿಕೆಗಳನ್ನು ತಾಯಿಯಾದವಳು ಸರಿಯಾದ ರೀತಿಯಲ್ಲಿ ಮಾರ್ಗದರ್ಶನ ಮಾಡಿದರೆ ಮಕ್ಕಳು ಮಾನಸಿಕವಾಗಿ, ಸದೃಢವಾಗಿ ಬೆಳೆದು ತನ್ನ ಪರಿಸರವನ್ನು ಸುಂದರವಾಗಿ ರೂಪಿಸಿಕೊಂಡು ತನ್ನ ದೇಶದ ಸಾಮಾಜಿಕ ಹಾಗೂ ಮೌಲ್ಯಾಧಾರಿತ ಪರಿಸರವನ್ನು ನಿರ್ಮಿಸುವಲ್ಲಿ ಪರಿಪೂರ್ಣರಾಗುತ್ತಾರೆ.

ಎರಡನೇಯದಾಗಿ ಹೆಚ್ಚು ಮಕ್ಕಳನ್ನು ಪಡೆದಾಗ ಇಂಥ ಸೌಲಭ್ಯವನ್ನು ಒದಗಿಸಲು ತಾಯಿಗೆ ಸಾಧ್ಯವಾಗಲಾರದು. ಅವಳ ಆರೋಗ್ಯ ಹಾಗೂ ಮಾನಸಿಕ ಸ್ವಾಸ್ಥಕ್ಕೆ ಅಡಚಣೆ ಉಂಟಾದಾಗ, ಸಂಸಾರದಲ್ಲಿ ಅಶಾಂತಿಯ ಹೊಗೆಯಾಡುತ್ತದೆ. ಆದಕ್ಕಾಗಿ ಒಂದು ಯಾ ಎರಡು ಮಕ್ಕಳನ್ನು ಮಾತ್ರ ಪಡೆಯಬೇಕು. ಅದು ಗಂಡಿರಲಿ, ಹೆಣ್ಣೇ ಆಗಲಿ ಎರಡಕ್ಕಿಂತ ಹೆಚ್ಚಿರಲೇಬಾರದು ಎಂಬುದನ್ನು ಪ್ರತಿಯೊಬ್ಬರೂ ಮನಗಾಣಲೇ ಬೇಕು. ಈ ರೀತಿಯಾಗಿ ಕುಟುಂಬ

ಯೋಜನೆಯನ್ನು ಕಡ್ಡಾಯವಾಗಿ ನಾವೇ ಜಾರಿಗೆ ತಂದಲ್ಲಿ ನಮ್ಮ ಮನೆಯು ಹಾಗೂ ನಮ್ಮ ದೇಶದ ವ್ಯವಸ್ಥೆ ಸುಸಜ್ಜಿತವಾಗಿ ರೂಪುಗೊಳ್ಳುತ್ತವೆ. ಮೂರನೆಯದಾಗಿ ನಾವು ಯಾವುದೇ ನಿಟ್ಟಿನಿಂದ ಯೋಚಿಸಿದರೂ ಅಲ್ಲಿ ಎದುರಾಗುವುದು ಬೃಹತ್ ಜನಸಂಖ್ಯೆ, ಇದರಿಂದಾತ ಎಲ್ಲಿ ನೋಡಿದರೂ ಗಲಭೆ, ಕಳ್ಳತನ ಲೂಟಿಗಳೇ ಹೆಚ್ಚಾಗಿ ನಡೆದು ನಮ್ಮ ದೇಶದ ಸಾಮಾಜಿಕ ನೆಲೆಗಟ್ಟಿಗೆ ಬಲವಾದ ಪೆಟ್ಟು ಬೀಳುತ್ತಿದೆ. ಎಲ್ಲೆಲ್ಲೂ ಅಸ್ತವ್ಯಸ್ತ ಎಂಬುದನ್ನು ನಾವಿಂದು ಕಂಡು ಅನುಭವಿಸುತ್ತಿದ್ದೇವೆ. ಇದಕ್ಕೆ ಕಾರಣ ಅತಿಯಾದ ಜನಸಂಖ್ಯೆಯಿಂದುಂಟಾದ ಆಹಾರದ ವ್ಯವಸ್ಥೆ. ವಸತಿಯ ಅಭಾವ ಪ್ರಕೃತಿಯ ನಾಶ. ಹಸಿದ ಅತೃಪ್ತಿಯ ಜನಾಂಗವೆಂದೂ ಭದ್ರ ಭಾರತವನ್ನು ಸ್ಥಾಪಿಸಲಾರದೆಂಬುದನ್ನು ನಾವಾರು ಮರೆಯಬಾರದು. ನಮ್ಮ ದೇಶ ಸಂಪನ್ಮೂಲಭರಿತ ದೇಶ, ಇದರ ನೈಸರ್ಗಿಕ ಸಂಪತ್ತನ್ನುಳಿಸಿ ಶ್ರೀಮಂತ ರಾಷ್ಟ್ರವನ್ನಾಗಿ ಮಾಡಿ ಹಸಿರು ನಾಡನ್ನಾಗಿ ಉಳಿಸಿಕೊಳ್ಳಲು ಮಿತ ಜನಸಂಖ್ಯೆಯಿಂದ ಮಾತ್ರ ಸಾಧ್ಯ. ನಾಲ್ಕನೇಯದಾಗಿ ಕೆಲವು ತಿಳುವಳಿಕೆ ಶೂನ್ಯ ಪುರುಷರು ಹಾಗೂ ವಿದ್ಯಾವತಿಯರಾದ ಮಹಿಳೆಯರು, ಮಹಿಳೆಯರು ಅಬಲೆಯರು ಕೈಲಾಗದವರು ಅವರಿಂದೇನು ಸಾಧಿಸಲು ಸಾಧ್ಯ ಎಂಬುದಾಗಿ. ಅಭಿಪ್ರಾಯವುಳ್ಳವರಾಗಿದ್ದಾರೆ. ಪುರಾಣಗಳಲ್ಲಿ ಚರಿತ್ರೆಯಲ್ಲು ಮಹಿಳೆಯರ ಪರಾಕ್ರಮವನ್ನು ತಿಳಿದಾಗ, ಅವರಂತೆ ನಾವು ಕಾರ್ಯದಕ್ಷತೆ, ಪರಾಕ್ರಮ ಗುಣಶೀಲಗಳನ್ನು ಬೆಳೆಸಿಕೊಂಡು ಸಮಾಜದ ಪ್ರಗತಿಯ ಸಾಧನೆಯಲ್ಲಿ ಮುಂದೆ ಬಂದಲ್ಲಿ ಸಮಾಜವು ಖಂಡಿತವಾಗಿ ಏಳಿಗೆಯನ್ನು ಸಾಧಿಸುತ್ತದೆಂಬುದನ್ನು ಮಹಿಳೆಯರು ಮನಗಾಣಬೇಕು. ವಿದ್ಯಾಭ್ಯಾಸವನ್ನು ಪಡೆದು ಸ್ವಾವಲಂಬಿಗಳಾದಾಗ ಎಷ್ಟೋ ಸಮಾಜ ಸುಧಾರಣೆಯ ಕಾರ್ಯವನ್ನು ಮಾಡಬಹುದು. ಈ ಕುರಿತಾಗಿ ಇಂದಿರಾಗಾಂಧಿ, ಸರೋಜಿನಿ ನಾಯಿಡು ಕಸ್ತೂರಿಬಾಯಿ, ಡಾ॥ ಸುಶೀಲನಯ್ಯರ್ ಮದರ್ ತೇರೆಸ, ಮೊದಲಾದವರು ಸಮಾಜ ಸೇವೆಯನ್ನು ಮಾಡಿ ಕೀರ್ತಿಗಳಿಸಿದ್ದಾರೆಂಬುದು ನಮಗೆಲ್ಲ ತಿಳಿದ ವಿಚಾರ. ಇವರೆಲ್ಲರ ಸ್ಫೂರ್ತಿಯಿಂದ ಮಹಿಳೆಯಲ್ಲಿ ಉತ್ಸಾಹಿಗಳಾಗಿ ದೀನದಲಿತರಿಗಾಗಿ ವೃದ್ಧರು ಮತ್ತು ರೋಗಿಗಳಿಗಾಗಿ ತಮ್ಮ ಬಿಡುವಿನ ವೇಳೆಯನ್ನುಪಯೋಗಿಸಿ ದುಡಿಯಬಹುದಾಗಿದೆ. ಮಹಿಳೆಯರು ಎಲ್ಲಾ ಕ್ಷೇತ್ರದಲ್ಲೂ ಪ್ರವೇಶಿಸಿ ಸರಕಾರ ಮತ್ತು ಸಮಾಜವನ್ನು ಶುದ್ಧೀಕರಿಸುವ ಕಾರ್ಯಕ್ಕೆ ಮನಸ್ಸು ಮಾಡಬೇಕು. ಸ್ತ್ರೀಯ ಸ್ಥಾನ ತಾಯಿಯ ಸ್ಥಾನ. ದೇಶದಲ್ಲಿ ಅಬಲೆಯರಾದರು ನಿಜವಾಗಿ ಅಬಲೆಯಲ್ಲ. "ಕೇವಲ ಭೂಷಣದ ವಸ್ತುವಲ್ಲ, ಭೋಗ ಸಾಮಗ್ರಿಯಲ್ಲ, ಮನೆಯಲ್ಲಿ ದಾಸಿಯಂತೆ ದುಡಿಯುವುದಕ್ಕಿರುವುದಲ್ಲ, ಕುಟುಂಬದ ಮತ್ತು ದೇಶದ ಅಭಿವೃದ್ಧಿಗೆ ಕಾರಣಕರ್ತಳಾಗಿದ್ದಳೆಂಬುದನ್ನು ಪುರುಷರು ಮರೆಯಬಾರದು. ಅಲ್ಲದೆ ಸ್ತ್ರೀಯು ತಾನು ಅಬಲೆಯೆಂಬ ಭಾವನೆಯನ್ನು ತೊಡೆದು ಜಗತ್ತು ತನ್ನನ್ನು ಖಂಡನಾ ದೃಷ್ಟಿಯಿಂದ ನೋಡುತ್ತದೆಂಬ ಭಾವನೆಯನ್ನು ಬಿಟ್ಟು ದೇಶದ ಹಾಗೂ ಕುಟುಂಬದ ಹಿತವನ್ನು ಸಾಧಿಸುವುದರಲ್ಲಿ ಸದಾ ಮನಸ್ಸಿಡಬೇಕು. ಹೀಗೆ ಜನತಾ ಕಲ್ಯಾಣಕ್ಕೂ ಭವ್ಯ ಭಾರತದ ಕೀರ್ತಿಯನ್ನು ಶಿಖರಕ್ಕೇರಿಸಲು ಭರತ ಮಾತೆಯ ಮಗಳಾಗಿ ದುಡಿದು ಆದರ್ಶ ಸ್ತ್ರೀಯಾಗಿ ವಿಜೃಂಭಿಸಿದಾಗ ಸ್ತ್ರೀ ಪಾತ್ರಕ್ಕೂ ದೇವಸ್ಥಾನದ ಮುಕುಟ ಕಳಸದ ಹೊನ್ನಿನಂತೆ ಶೋಭಾಯಮಾನವಾಗಬಹುದು.



# ಮಕ್ಕಳೆರಡೇ ಸಾಕು

ಶ್ರೀ ಹೊದ್ದೆಟ್ಟಿ ಭವಾನಿ ಶಂಕರ್ ಬಿ.ಇ.ಎಲ್



[ದಾ. ರಾ. ಬೇಂದ್ರೆಯವರು ರಚಿಸಿದ "ಮೂವತ್ತಮೂರು ಕೋಟಿ ಮುವತ್ತ ಮೂರು ಕೋಟಿ" ಕವನದಲ್ಲಿ ಹೇಳಿದಂತೆ ಲೆಕ್ಕಕ್ಕೆ ಕೋಟಿ ಇದ್ದು ಫಲವೇನು ? ಕುರಿ ಕುನ್ನಿಗಳಂತೆ ಲೆಕ್ಕಕ್ಕಿದ್ದರೆ ಏನು ಪ್ರಯೋಜನ ? ಸ್ವಾಮಿ ವಿವೇಕಾನಂದರು ಹೇಳಿದಂತೆ ಉಕ್ಕಿನ ಮಾಂಸ ಕಂಡಗಳಿಂದ ಕೂಡಿದ ಸಧೃಡ ಖಾಯುರಾದ ಮುಂದಿನ ಪೀಳಿಗೆ ಬೇಕಾದರೆ ನಮ್ಮ ಜನಸಂಖ್ಯೆಯ ನಿಯಂತ್ರಣಕ್ಕೆ ಕುಟುಂಬ ಯೋಜನೆಯ ಮಂತ್ರವೊಂದೆ ಪರಿಹಾರ ಮಕ್ಕಳೆರಡೇ ಸಾಕೆಂಬ ಘೋಷಣೆಯನ್ನು ಶ್ರೀ ಹೊದ್ದೆಟ್ಟಿ ಭವಾನಿ ಶಂಕರ್‌ರವರು ಕಿವಿಗಿಂಪಾಗುವಂತೆಯೂ ಮಾರ್ವಿಕವಾಗಿಯೂ ರಚಿಸಿ ಜನರ ಮನಸ್ಸಿಗೆ ನಾಟುವಂತೆ ಮಾಡಿದ್ದಾರೆ.

ಮಕ್ಕಳೆರಡೇ ಸಾಕು, ಮಕ್ಕಳೆರಡೇ ಬೇಕು.
ಸಕ್ಕರೆಯ ಸವಿ ಸವಿಯೆ ಸಂಸಾರದೊಳಗೆ,
ಉಕ್ಕಿ ಹರಿಯುತಿದೆ ಇಂದು ಜನಸಂಖ್ಯೆ ನದಿಯಂತೆ
ನೆಮ್ಮದಿಯು ಎಲ್ಲಿಹುದು ಈ ನಾಡಿನೊಳಗೆ ?





ಧಾನ್ಯವನೆ ಬೆಳಸದೆಯೆ ಮಕ್ಕಳತಿ ಪಡೆಯುತಿರೆ
ಮಾನವಗೆ ಆಹಾರ ಎಲ್ಲಿಹುದೊ ಕಾಣೆ ।
ಸಂತಾನ ಮಿತವಿಂದು ಮಾಡದಿರೆ ನಾಡಗತಿ
ಅತಿ ಹೀನವಾಗುವುದು ಇದು ದೇವರಾಣೆ ॥

ಹಿಂದಿತ್ತು ನೂರಾರು ಮಕ್ಕಳನು ನೀ ಹೆತ್ತು
ಬಾಳಿ ಬೆಳಗೆಂಬೊಂದು ಮಂತ್ರ
ಇಂದಿಲ್ಲಿ ಆ ನೂರು ಆಗಿ ಬರೆ ಬರೇ ಮೂರು
ಬಾಳು ಬೆಳಕಾಗುವುದು ಆಗ ಮಾತ್ರ ॥



ಜನನಿಬಿಡವಾಗಿಲ್ಲಿ ಈ ಭುವಿಯು ಕವಿದಿಂದು
ಜನ ಜೀವನವು ಇಹುದು ಅಸ್ತ ವ್ಯಸ್ತ ।
ಪ್ರಾಣಿಗಳು ಜೀವಿಪವು ಮಾನವಗೆ ಮೇಲಾಗಿ
ಮಾನವನ ಬಾಳಿಗೆ ಇಂದಿಲ್ಲ ಅರ್ಥ





ಭಾರತದಿ ಜನರಿಂದು ಹಸಿವೆಂದು ಕೂಗುವರು
ನಿರ್ಗತಿಕರಾಗಿಂದು ಕೈಯು ಕಟ್ಟಿ ।
ಸಂತೈಸುವವರಿಲ್ಲ ನಾಡಿನಾ ಸಂತತಿಯು
ಕರುಣೆಯಲಿ ಬಳಿ ಕರೆದು ಬೆನ್ನ ತಟ್ಟಿ ॥

ಭೂತಾಯಿಯಾ ಪುಣ್ಯದಾ ಉದರದಲಿ ಜನಿಸಿ
ಬಂದಿರುವ ಜನರಲ್ಲಿ ನನ್ನದೊಂದು ಮನವಿ ।
ಮಕ್ಕಳೆರಡೇ ಇರಲಿ ಸಂಸಾರ ಸುಖವಿರಲಿ
ಈ ಬಯಕೆ ಪಾಲಿಸಿರಿ ನಿಮ್ಮ ಸುಖಕೆ ॥



---



---

# ನಾನು ತಿಳಿದದ್ದು

ಕೆ. ಬಾಸ್ಕರಗೌಡ
ಬಿ. ಇ. ಎಲ್. ಬೆಂಗಳೂರು

(ಬೆಂಗಳೂರಿನ ಗೌಡ ಸಮಾಜದ ಅಭಿವೃದ್ಧಿಗಾಗಿ ದುಡಿದ ರೀತಿ, ವ್ಯಕ್ತಿಗಳ ಪರಿಚಯವನ್ನು ಶ್ರೀ ಬಾಸ್ಕರಗೌಡರು ತಮ್ಮದೇ ಆದ ಶೈಲಿಯಲ್ಲಿ ತಿಳಿಸಿದ್ದಾರೆ. ಸಂ)

ಕರ್ನಾಟಕ ರಾಜ್ಯದೊಳಗಿನ ಇಪ್ಪತ್ತಾರು ಸಾವಿರದ ಎಂಟುನೂರ ಇಪ್ಪತ್ತಾರು ಹಳ್ಳಿಯ ಕುಲ ಬಾಂದವರಲ್ಲಿ ಕರ್ಲಪ್ಪಾಡಿ ಅಣ್ಣಕುಟ್ಟಿ ಗೌಡರ ಮಗ ಬಿ.ಇ.ಎಲ್. ವಾಹನ ಚಾಲಕ ಕೆ. ಬಾಸ್ಕರ ಗೌಡ ನವಿನಮ್ರತೆ.

ನಾನು 1968ರಲ್ಲಿ ಸೇನೆಯಲ್ಲಿರುವಾಗ ನನ್ನ ಹಕ್ಕಿನ ರಜೆಯನ್ನು ತೆಗೆದುಕೊಂಡು ಊರಿಗೆ ಬಂದಾಗ ನಮ್ಮ ಜನಾಂಗದವರು ಹಳ್ಳಿಯಿಂದ ಹೋಗಿ ಕರ್ನಾಟಕಕ್ಕೆ ಮಹಾನಗರವೆನಿಸಿದ ಬೆಂಗಳೂರು, ಇಂತಾಃ ಸುಕ್ಷೇತ್ರದಲ್ಲಿ ಹತ್ತರ ಜೊತೆ ಹನ್ನೊಂದುಎಂಬಂತೆ ನಮ್ಮ ಗೌಡ ಜನರು ಕಷ್ಟ ಕಾರ್ಪಣ್ಯವೆಂಬ ಕಾರಡವಿಗೆ ಸಿಲುಕಿ ಹಸಿವೆಯೆಂಬ ಕೋಟರಿಗೆಯಲ್ಲಿ ನೊಂದು ಬೆಂದರೂ, ಕಂಗೆಡದೆ, ಬಲ। ಬಲಂ।। ದಿಕ್ಕು ಬಲಂ॥ ಬಲಾ ಬಲಂ॥ ಕ್ಷತ್ರಿಯುವೆಂಬಂತೆ ಕಾರ್ಗತ್ತಲೆಯ ಮಧ್ಯೆಯಿರುವುದೇ ಬೆಳಕೆಂದು ತಿಳಿದು ನಮ್ಮ ಹಿರಿಯ ಮುಖಂಡರುಗಳು ಸೇರಿ ಆ ಮುಖಂಡತ್ವದಲ್ಲಿ ಸತ್ಯ ಗುಣವನ್ನು ಪಾಲಿಸಿಕೊಂಡು ಬಂದಿರುವ ಶ್ರೀಮಾನ್ಯ ಡಾ॥ ಕೆ. ವೀರಪ್ಪಗೌಡರು ಸಹಾ! ಒಬ್ಬರು. ಇವರು ನಿಜವಾಗಿ ವಶಿಷ್ಟ ಮಹರ್ಶಿಗೆ ಸರಿಸಮಾನರೆಂದರೂ ಹೆಚ್ಚಾಗಲಾರದು. ಸತ್ವಗುಣವನ್ನು ಪಾಲಿಸಿದವನೇ ವಶಿಷ್ಟನಂತೆ, ಹಾಗೆಯೇ ಇವರು ಮೇಲ್ಕಾಣಿಸಿದ ಹಳ್ಳಿಗರ ಮನೆ ಮನೆಗೆ ಕಾಲ್ನಡೆಯಾಗಿ ನಡೆದುಕೊಂಡು ಹೋಗಿ ನಮ್ಮ ಮುಂದಿನ ಪೀಳಿಗೆಯ ಭಾವೀ ಭವಿಷ್ಯದ ಬಗ್ಗೆ ಚಿಂತಿಸುತ್ತಾ, ಬಾಂದವ್ಯವನ್ನು ತಿಳಿದು ಪ್ರತಿಭೆಯನ್ನು ಕೊಟ್ಟು ಎಲ್ಲಾ ಜನಾಂಗದಂತೆ ನಮ್ಮವರಿಗೂ ಒಂದು ಕೂಡಲ ಸಂಗಮದಂತೆ ಒಂದುಗೂಡುವ ಸಮಾಜ ಕ್ಷೇತ್ರ ಬೇಕೆಂದು ಹಿರಿಯ ಕಿರಿಯ ಅಗ್ರಾಜಾನುಜೆಯರೆಲ್ಲರಲ್ಲಿ ಬೇಡಿಕೊಂಡು ಹಸಿವೆ ತೃಷೆಗಳಿಂದ ಬಳಲಿ ಕೊನೆಗೂ ಧೃತಿಗೆಡದೆ ಸಮಾಜದ ಕಟ್ಟಡವನ್ನು ನಿರ್ಮಿಸಿದರು. ನಾನು ಹೇಳುವುದಾದರೆ ಇವರೆದೆಯಲ್ಲಿ ವಿಷ್ಣು, ಹಣೆಯ ಮಧ್ಯೆ ಬ್ರಹ್ಮ ಮತ್ತು ಹೆಡೆತಲೆಯಲ್ಲಿ ಈಶ್ವರ ಈ ಮೂರು ತ್ರಿಮೂರ್ತಿಗಳ ಯಾನವಂತ ಅಂತರ್ಯಾಮಿಯೆಂದು ಕಾಣುತ್ತದೆ. ಇವರು ನಮ್ಮೆಲ್ಲರ ಕಣ್ಣಿಗೆ ಮಾನವನಾಗಿ ಕಂಡರೂ, ಇವರು ನಿಜವಾಗಿ ಚಿನುಮಯಾತ್ಮನೇ ಹೌದು! ಪ್ರತಿಯೊಬ್ಬರು ಬೀಜದಿಂದ ಎಣ್ಣೆ ತೆಗೆಯುವುದು ಸಾಮಾನ್ಯ ಆದರೆ ಇವರು ಮಾತ್ರ ತನ್ನ ಸಹಚರರನ್ನು ಕರೆದುಕೊಂಡು ಕಲ್ಲಿನಿಂದ ಎಣ್ಣೆ ತೆಗೆದಂತ ಪ್ರತಿಭಾವಂತರೆಂದರೂ ಹೆಚ್ಚಾಗಲಾರದು. ಇನ್ನು ಮುಂದೆ ಇದಕ್ಕೆ ಕವಲೊಡೆಸಿಕೊಂಡು ಗಗನಕ್ಕೇರಿಸುವುದು ನಮ್ಮೆಲ್ಲರ ಕರ್ತವ್ಯ. ಚಿಕ್ಕದಾದ ಕೂಡಲಸಂಗಮ ಕಣಿವೆ ತೋಡುಗಳೆಲ್ಲಾ ಸೇರಿ ಹೊಳೆಯಾಗಿ ಹರಿದು ಎಲ್ಲಾ ನೀರು ಸಮುದ್ರದಲ್ಲಿ ಒಂದುಗೂಡಿ ಮನುಷ್ಯ, ಮೃಗ, ಪ್ರಾಣಿ, ಪರಿವಿಂಚಿಗಳಿಗೆಲ್ಲಾ ಪಾವನ ಗಂಗೆಯೇ ಸಮುದ್ರದ ನೀರು, ತದೋ ರೀತಿ ನಮಗೆಲ್ಲರಿಗೂ ಒಬ್ಬರನ್ನೊಬ್ಬರ ಪರಿಚಯ, ಹಾಗೂ ಸಂತೋಷವೆಂಬ ಸಾಗರದಲ್ಲಿ ಮುಳುಗಿ ಸುಖ ದುಃಖಗಳೆಂಬ ತೆರೆಗಳನ್ನು ದಾಟಿ ಉಂಡು ತಿಂದು ಮೇಲು ಕೀಳೆಂಬ ಭಾವನೆಯಿಲ್ಲದೆ ನಲಿಯುವ ಜಾಗವೇ ಕೂಡಲ ಸಂಗಮ ಅದೇ ನಮ್ಮ ಗೌಡ ಸಮಾಜದ ಕಟ್ಟಡ.

ಒಂದು ಗುಡ್ಡದಿಂದ ಇನ್ನೊಂದು ಗುಡ್ಡದ ಕೆಕ್ಕೆಗೆ ಪಾಲ ಹಾಕಿ ಎಲ್ಲರಿಗೂ ನಡೆಯುಲು ಸುವರ್ಣಾವ ಕಾಶವನ್ನು ಮಾಡಿಕೊಟ್ಟಂತಹ ಶ್ರಮ ಜೀವಿಗಳಾದ ಡಾ॥ ಕೆ. ವೀರಪ್ಪಗೌಡರು, ನ್ಯಾಯವಾದಿ ಪೂಜಾರಿ ಮೊಣ್ಣಪ್ಪನವರೂ, ಅಮೆ ರಾಮಣ್ಣಗೌಡರು ಮತ್ತು ಅಪತ್ಕಾಲದಲ್ಲಿ ಸಲಹೆ ಕೊಡುವುದು ಧೈರ್ಯವೊಂದೆ ಎಂದು ತಿಳಿದು ಪ್ರತಿಯೊಬ್ಬರಲ್ಲಿ ಧೈರ್ಯದಲ್ಲಿ ವರ್ತಿಸಿ ಭೋಧಿಸಿದ ಶ್ರೀಮಾನ್ ಹೊದ್ದೆಟ್ಟಿ ಭವಾನಿ ಶಂಕರ್ ನವರೂ ಕಲ್ಲೊಳಗಿನ ಸೀರಿನಂತಿರುವ ತಳೂರು ಮೊಣ್ಣಪ್ಪನವರಲ್ಲೂ. ಪೂಂಬಾಡಿ ತಮ್ಮಪ್ಪನವರಲ್ಲೂ, ಹಾಗೂ ಪಾಲನೆಗೆ ಸರಿಯಾಗಿ ಪರಿವರ್ತಿಸಿದ ಪೂಜಾರಿ ಬೋಪಯ್ಯನವರಲ್ಲೂ ಮತ್ತು ಆಗು ಹೋಗುಗಳ ನ್ನೆಲ್ಲಾ ತನ್ನ ಜೋಳಿಗೆಯಲ್ಲಿ ಗಾಯನ ಹೇಳಿಕೊಂಡು ಮುಂದಿನ ಭವಿಷ್ಯಕ್ಕೆ ಮಾದರಿ ನಿರ್ಮಿಸಿದ ಶ್ರೀ ಪೂಜಾರಿ ಪೊಣ್ಣಪ್ಪ, ಶ್ರೀ ಡಾ॥ ಪಿ. ಮುದ್ದಪ್ಪನವರಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸಿ, ಸಾದರ ಸಂತಾನದ ಪುಣ್ಯ ಕೋಟಿಯೆಂಬ ಗೋವಿನಂತಿರುವ ಸಮಾಜ ಅಜರಾ ಮರರಾಗಲೆಂದು ನನ್ನ ಆಕಾಂಕ್ಷೆ.

ಜೈ ಗೌಡ ಸಮಾಜ.

---

# ಕೇಳಿದ್ದು

ಗಾನಶ್ರೀ ಹೆಚ್. ಬಿ.

ಒಂದ್ ಹೋಟ್ಳ್‌ಗೆ ಒಬ್ಬ ಚಾ. ಕುಡೆಕೆ ಹೋತ್. ಆ ಹೋಟ್ಳಲಿ ಕಾಫಿ, ಚಾ, ಕ್ಕೆ ಸಕ್ಕರೆ ಹಾಕದೆ ಸಕ್ಕರೆನ ಒಂದ್ ಗ್ಲಾಸಿಲಿ ತಂದಿಡುವ ಕ್ರಮ. ಇಂವ ಅವಸರಕೆ ಸಕ್ಕರೆ ಹಾಕಣದೆ 'ಟಿ' ಕುಡ್ತ್. ಆಮೇಲಿ ಅವಂಗೆ ಗೊತ್ತಾತ್ ಗ್ಲಾಸ್‌ಲಿ ಸಕ್ಕರೆ ಇತ್ತ್‌ಂತ. ಸಕ್ಕರೆ ಕಂಡಕೂಡ್ಲೆ ಆ ಗ್ಲಾಸಿಲಿದ್ದ ಸಕ್ಕರೆನೆಲ್ಲಾ ಇಂವ ತಿಂದ್ ಅಲ್ಲೆ ನೆಲಲಿ ಹೊಣ್‌ಕ್ಯಾಡಿಕೆ ಸುರ್ ಮಾಡ್ತ್. ಅದರ ಕಂಡ್ ಮೆನೇಜರ್ ಭವಿಷ್ಯ ಹಾಲಿಲಿ ಏನೋ ಬಿದ್ದಿರೊಕು. ಇಂವ ಸತ್ತರೆ ಮತ್ತೆ ನಮ್ಮ ಮೇಲೆ ಕೇಸು ಆದುಂತ ಗ್ರಹಿಸಿ ಹೋಟ್ಳ್‌ಲಿ ಇರುವ ಹಾಲ್‌ನೆಲ್ಲಾ ಚರಂಡಿಗೆ ಸೂಸಿತ್. ಅಸ್ವೋಕ್ತ್ಮಾಕನ ಹೊಣ್ಕಿದಂವ ಎದ್ದ್ ಲ್ಯಾಕ್‌ಲಿ ಕುದ್ದಿತ್ತ್. ಮೆನೇಜರ್ ಹೋಗಿ ಕೇಳ್ತ್ "ನೀ ನೆಲಲಿ ಹೊಣ್ಕೆಕಂಡಿದ್ದಲೆ? ನಿಂಗೆ ಏನಾಗಿತ್ತ್? ಈಗ ಸರಿಯಾತೊ? ಹಾಂಗೆ ಕೇಳಿಕನ ಇಂವ ಹೇಳ್ತ್ ನಂಗೆ ಏನೂ ಆಗಿತ್ತ್‌ಲೆ, ನಾ ಚಾ ಕುಡೆಕೆನ, ಚಾ ಕ್ಕೆ ಸಕ್ಕರೆ ಹಾಕಿಕೆ ಮರ್ತೋಗಿತ್ತ್, ಅದ್ಕೆ ಚಾ ಕುಡ್ದಮೇಲೆ ಸಕ್ಕರೆ ತಿಂದೆ, ಚಾ ದೊಟ್ಟಿಗೆ ಸಕ್ಕರೆ ಸೇರಲಿಂತ ನೆಲಲಿ ಹೊಣ್‌ಕ್‌ತಿದ್ದೆಯಷ್ಟೆ. ಹೀಂಗೆ ಹೇಳಿಕನ ಮೆನೇಜರಿಗೆ ಬಾರಿ ಆಶ್ಚರ್ಯ ಆತ್.



---

# ಅತ್ತೆ—ಸೊಸೆ

—ಹೊದ್ದೆಟ್ಟಿ ಭವಾನಿಶಂಕರ್
ಬಿ. ಇ. ಎಲ್ ಬೆಂಗಳೂರು

[ಕುಟುಂಬದ ಸ್ಥಾನ ಮಾನ ಮರ್ಯಾದೆ ಆರ್ಥಿಕ ಸ್ಥಿತಿ, ಒಗ್ಗಟ್ಟು ಇವುಗಳಿಗೆ ಮನೆಯ ಒಡತಿಯ ಪಾತ್ರ ಬಹಳ ಮುಖ್ಯ. ಮೊದಲಿಗೆ ಮನೆಯ ಯಜಮಾನಿ ತಾಯಿ, ಮಗನ ಹೆಂಡತಿ ಬಂದ ಮೇಲೆ ಅವಳಿಗೆ ಅತ್ತೆಯಾಗುತ್ತಾಳೆ. ಬೇರೆ ಮನೆಯಿಂದ ಬಂದ ಮಗಳನ್ನು ಅತ್ತೆಯಾದವಳು ತನ್ನ ಮಗಳಂತೆ ಕಾಣಬೇಕಾದುದು ಸಂಸ್ಕೃತಿಯ ಒಂದು ವೈಶಿಷ್ಟ್ಯ. ಸೊಸೆಯಾದವಳು ಅತ್ತೆಯನ್ನು ತನ್ನ ತಾಯಿಯ ಸಮಾನವಾಗಿ ಕಾಣುವುದು ಇನ್ನೊಂದು ವೈಶಿಷ್ಟ್ಯ. ಆದರೆ ಸಾಮಾನ್ಯವಾಗಿ ಹಾಗಿರದೆ ಅತ್ತೆ ಸೊಸೆಯರಲ್ಲಿ ಜಗಳವಾಗುವ ಪ್ರಸಂಗಗಳು ಅದೆಷ್ಟೋ ಇವೆ. ಅವುಗಳನ್ನು ಈ ಕವಿ ಅರೆ ಭಾಷೆಯಲ್ಲಿ ವಿವರಿಸಿದ್ದಾರೆ—ಸಂ]

---

ಅತ್ತೆಗು ಸೊಸೆಗೂ ಜಗಳಗ ನಡ್ಪದೆ
ಹೆಚ್ಚಿನ ಎಲ್ಲರ ಮನೆ ಒಳಗೆ ।
ಅವರಿಬ್ಬರ ಜಗಳಂತ ಸುಮ್ಮನೆ ಬುಟ್ಟರವು
ಮನೆನನೆ ಮಾಡುವೊ ತಲೆಕೆಳಗೆ ॥

ಹಿಂದೆನ ಕಾಲಲಿ ನಡೆತಿದ್ದ ಜಗಳಗ
ಸಣ್ಣ ಸಣ್ಣದೇನಲ್ಲ ದೊಡ್ಡವೆನೆ ।
ಕತ್ತಿನು ಸೌದೆಕೊಳ್ಳಿ ಹಿಡ್ಕಂಡ್ ಮಾಡ್‌ವೊ
ಇಬ್ರೊರು ಅವು ದೊಡ್ಡ ಕಾಳಗನೆ ॥

ಅಂದ್‌ನ ಕಾಲಲಿ ಅತ್ತೆಗ ಜೋರಿದ್ದೊ
ಜಗಳಕೆ ಬೇಕಿಲ್ಲೆ ಕಾರಣನೆ ।
ಸೊಸೆ ಕಳಿಗತ್ತೆಕ ಬೊಯ್ಯದು ಹೊಡಿದವು
ಸೊಸೆನ ವಿಚಾರಣೆ ಮಾಡದೆನೆ ॥

ಅಯ್ಯಪ್ಪ ಹೇಳ್ದಾಂಗೆ ಕೇಳುತಿದ್ದೊ ಹೈದಗಂಡ್
ಸೊಸೆಗವರ ಮನೆಲಿಲ್ಲೆ ಆಸರನೆ ।
ಸೊಸೆನ ಚಾಡಿ ಅತ್ತೆಹೇಳಿ ಗಂಡನು ಹೊಡಿದು ನೋಡಿ
ಸೊಸೆಯಿರ್ದು ಕಣ್ಣೀರ್ ಹಾಕಂಡೆನೆ ॥

ಅಂದ್‌ನ ಅತ್ತೆಕ ಇಂದ್‌ನೂ ಕೆಲವೊಳೊ
ಅಂಥ ಮನೆಲಿ ನಡಿದು ಅತ್ತೆ ಧರ್ಬಾರ್‌ನೆ ।
ಹಂಗಾಗಿ ಗಂಡ್‌ಗ ಮನೆತುಂಬ ಇದ್ದರು
ಮನೆ ಒಳಗೆ ಗಂಡ್‌ಗಿಲ್ಲೆ ಪೌರುಷನೆ ॥

ಇಂದ್‌ನ ಅತ್ತೆಕ ಬಾರಿ ಪಾಪ ಹಂಗಾಗಿ
ಕೆಲವು ಸೊಸೆಕ ತೋರ್ಸುವವರ ದೌಲತ್ತ್‌ನೆ ।
ಹರ್ಕ್ ಮುರ್ಕ್ ಕಲ್ತ ಎರ್‌ಡ್ ಇಂಗ್ಲೀಸ್ ಬುಟ್ಟ್‌ಕಂಡ್
ಕಣ್ಣ್‌ಂದವು ತೆಗೆಕಿಲ್ಲೆ ಕನ್ನಡಕನೆ ॥

ಅತ್ತೆ ಬಾಯಿ ಬುಟ್ರೆಸಾಕ್ ಸೊಸೆ ಕಣ್ಣ್ ಕೆಂಪಾದಲ್ಲಿ
ಸೊಸೆ ಕೆಬಿ ಎರ್ದ್ನೂ ನಿಲ್ದು ನೆಟ್ಟಂಗೆನೆ ।
ಅತ್ತೆ ಸೊಸೆನ ನೋಡ್ರೆಸಾಕ್ ಸೊಸೆ ಚಾಡಿ ಗಂಡಂಗೇಳಿ
ಆಸ್ತಿ ಭಾಗ ಕೇಳ್ವೆ ಇಬ್ಬೊರು ಆ ಕೂಡ್ಲೆನೆ ॥

ಕೆಲ್ಸಗಿಲ್ಸ ಹೇಳ್ರೆ ಮತ್ತೆ ತಿರ್ಗಿಕೂಡಾ ನೋಡಿಕಿಲ್ಲೆ
ಸೊಸೆ ಇರ್ದು ಕೊಂಬ್‌ಲಿ ತಲೆ ಬಾಚಿಕಂಡೆನೆ ।
ಎಂತಕೇನೊ ಸೊಸೆಕ್ಯಾರು ಅತ್ತೆ ಮನೆಲಿ ಸಿಲ್ಲಿಕ್ಕಿಲ್ಲೆ
ಮೊದ್ವೆ ಆದ ಮೂರ್ನೆದಿನನೆ ಹೊರಡುವೊ ಬೇರೆನೆ ॥

ಹೆಣ್ಣ್‌ಗಿಂದ್ ಹೆದ್‌ರಿ ನಡಿವ ಗಂಡ್‌ಗಿಂದ್ ಎಷ್ಟೊ ಒಳೊ
ಗಂಡ್‌ಗಿಲ್ಲೆ ಅಂತ ಮನೆಲಿ ಸ್ವಾತಂತ್ರನೆ ।
ಹೆಣ್ಣ್‌ಗೆ ಪಟ್ಟ ವಹಿಸಿಕೊಟ್ಟ್ ಗಂಡ್ ನೋಡ್ದು ಕಣ್ಣ್ ಬುಟ್ಟು,
ಅಂತ ಹೆಣ್ಣ್ ನಡಿದು ಇಷ್ಟ ಬಂದಾಗೆನೆ ॥

ಹೆಣ್ಣ್ ಹೇಳ್ದಾಂಗೆ ನಡ್ದ್ ಉದ್ಧಾರಾದ ಮನೆನೂ ಉಟ್ಟು
ಅಂತ ಮನೆಗೆ ಹೆಚ್ಚಿಗಿಲ್ಲೆ ಬಾರಿಕಮ್ಮಿನೆ ।
ಹೆಣ್ಣ್ ಎಲ್ಲಾ ತುಂಬ್ಬಿಬುಟ್ಟು ಅವ್ವನ ಮನೆಗೆ ಕಳ್ಸುದುಟ್ಟು
ಅಂತ ಅಯ್ಯೊ ಮನೆಲಿ ಅವ್ವೊ ಬಾರಿ ಕುಸಿನೇ ॥

ಹೆಣ್ಣ್‌ಗೆರಡ್ ಕೂಡಿಕಂಡ್ ಒಗ್ಗಟ್ಟಿರುವ ಮನೆನೆ ಕಮ್ಮಿ
ಇದ್ದರವು ಯುದ್ಧರಂಗ ಕುರುಕ್ಷೇತ್ರನೆ ।
ಅಣ್ಣ ತಮ್ಮ ಒಗ್ಗಟ್ಟಿಲಿ ಒಟ್ಟಿಗಿಂದ್ ಎಷ್ಟೊಒಳೊ
ಹೆಣ್ಣ್‌ಗೆರ್ದ್ ಸೇರ್ರೆ ಅಲ್ಲಿ ಅದು ಪ್ರಳಯನೆ ॥

ಅತ್ತೆ ಸೊಸೆ ಜಗಳ ಇಲ್ಲಿ ಬರೆಕೆ ಹೋದರೆಷ್ಟೊಉಟ್ಟು
ಇದ್ದದರೆಲ್ಲ ಬರ್ದರೆ ಇನ್ನ್ ಜೊಯುವೊ ನಂಗೆನೆ ।
ಅತ್ತೆ ಸೊಸೆಕ ಒಂದೆ ಮನೆಲಿ ಕೂಡಿಕಂಡ್ ಇದ್ದರವು
ನಮ್ಮ ದೇಶದೊಳಗೆ ನಡಿವ ಕಡ್ಡೆನೆ ಹೀಂಗೆನೆ ॥

# ನಡ್ದ ಕತೆ

ಬರೆದವು–ಪಾಲಿ ಸೋಮಣ್ಣ
ಜಾಲಹಳ್ಳಿ, ಬೆಂಗಳೂರು

ಅಂಗಡಿಂದ ಹಸಿಮೊತ್ತಿಮೀನ್ ತಂದ್ ಅದರ ಕ್ಲೀನ್ ಮಾಡಿ ಅದ್ಕೆ ಮಸಾಲೆ ಉಜ್ಜಿದ್ ಒಂದ್ ಅಳಿಗೆಲಿ ಇಸಿದ್ ಮನೆವು ಪೇಟೆಗೆ ಹೊರ್ಡಿಕಾಕನ ಅಲ್ಲಿಗೊಬ್ಬ ನಂಟಬಾತ್. ಅವಂಗೆ ತುಂಬಾ ಹೊಟ್ಟೆ ಇಸಿಕಂಡಿತ್ತ್. ಮನೆವು ಆ ನೆಂಟಂಗೆ ಹೇಳ್ದೊ, ಒಳಗೆ ತರಕಾರಿ ಸಾರ್ ಉಟ್ಟ್. ನೀ ಹಾಕಂಡ್ ಊಟ ಮಾಡಿ ಮನೆಲೆ ಇರ್‌ಂತ ಹೇಳಿ ಅವು ಪೇಟೆಗೆ ಹೋದೊ.

ನಂಟಂಗೆ ಹೊಟ್ಟೆ ಇಸಿಕಂಡಿತ್ತಲೆ! ಸೀದಾ ಒಳಗೆ ಹೋಗಿ ನೋಡಿಕನ ಮಸಾಲೆ ಉಜ್ಜಿಕಂಡಿದ್ದ ಮೀನ್‌ನ ಕಂಡುಟು. ಓಹೋ ನಂಗೆ ತರಕಾರಿ ಸಾರ್‌ಂತ್ ತಲೊಪೆಗೆ ಹೇಳ್ದ್ ಆಗಿರೊಕುಂತ ಗ್ರ್ಯಸಿಕಂಡ್ ಬಟಲ್ ತುಂಬಾ ಗಂಜಿ ಹಾಕಂಡ್ ಇನ್ನೊಂದು ಪಿಂಗಾಣಿಲಿ ಆ ಮೀನ್‌ನ ಹಾಕಂಡ್ ಇಂವ ಸರೀ ಊಟ ಮಾಡ್ತ್. ಯಾಕೆಂತೇಳ್ರೆ ಅ ಮೀನ್‌ಲಿ ಉಪ್ಪ್, ಕಾರ, ಹುಳಿ, ಎಲ್ಲಾ ಸೇರಿಕಂಡಿತ್ತಲೆ ಅದ್ಕೆ.

ಮನೆವು ಪೇಟೆಂದ ಬಂದ್‌ದ್ ಬೇಗ ಮೀನ್‌ನ ಹೊರಿಯೊನೊಂತೇಳಿ ಒಳಗೆ ಹೋದರೆ ಅಳಿಗೆಲಿ ಮೀನೇ ಇಲ್ಲೆ. ಆಗ ಅಳಿಗೆಲಿದ್ದ ಮೀನ್ ಏನಾತ್‌ಂತ ನಂಟಂಗೆ ಕೇಳ್ದೊ. ಅಂವ ಸತ್ಯ ಹೇಳ್ತ್ ಮೀನ್ ಎಲ್ಲ ನಾನೆ ಹಾಕಂಡ್ ತಿಂದೆ. ಬಾರಿ ರುಚಿ ಇತ್ತ್, ಯಾರ್ ಮಾಡ್ದ್ ಇಷ್ಟ್ ಲ್ಯಾಕನ ಅಡ್ಗೆಂತ ಕೇಳ್ತ್. ಆಗ ಮನೆವುಕೆ ಗೊತ್ತಾತ್ ಈ ನಂಟ ಹಸಿಮೀನ್ ತಿಂದ ಸಂಗತಿ. ಕೊನೆಗೆ ಅವಂಗೂ ಗೊತ್ತಾತ್ ಅಂವ ತಿಂದದ್ ಹಸಿ ಮೀನ್‌ನಂತ. ಯಾರಿಗಾದರೂ ನಗೆ ಬಾರದೆ ಇರ್ದೊ ಈ ಕತೆ ಒದಿರೆ?

# ಕಟ್ಟಡ ಉದ್ಘಾಟನೆ

ಪೂಜಾರಿ ಪೂವಯ್ಯ
ಬೆಂಗಳೂರು

[ಶ್ರೀ ಪೂವಯ್ಯನವರು ತಮ್ಮ ಚೊಚ್ಚಲ ಕವಿತೆಯನ್ನು ಬರೆಯಲು ಪ್ರಯತ್ನಿಸಿ ಇನ್ನು ಮುಂದೆ ಹೆಚ್ಚಿನ ಸಂಖ್ಯೆಯಲ್ಲಿ ಕವನಗಳು ಹೊರಬರಲೆಂದು ಹಾರೈಸುತ್ತೇವೆ.
ಸಂ.]

ಉದ್ಘಾಟನೇ ಉದ್ಘಾಟನೇ ಕಟ್ಟಡ ಉದ್ಘಾಟನೇ
ಶುಭವಾಗಲಿ ನಮಗೆ ಜಯವಾಗಲೀ
ಓ ದೇವರೇ ಶುಭವಾಗಲೀ ನಮಗೆ ಜಯವಾಗಲೀ

ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ ಬೆಂಗಳೂರು
ಕಟ್ಟಡ ಉದ್ಘಾಟನೇ
ಉದ್ಘಾಟನೇ ಉದ್ಘಾಟನೇ ಕಟ್ಟಡ ಉದ್ಘಾಟನೇ

ಯಂಭತ್ತೆಂಟನೇ ಇಸವಿ ಫೆಬ್ರವರಿ ಏಳನೇ ಭಾನುವಾರ
ಭಾನುವಾರ ಅಪರಾಹ್ನ ಎರಡುವರೆ ಘಂಟೆಗೆ ಕಟ್ಟಡ ಉದ್ಘಾಟನೆ
ಉದ್ಘಾಟನೇ ಉದ್ಘಾಟನೇ ಕಟ್ಟಡ ಉದ್ಘಾಟನೇ

ಕರ್ನಾಟಕ ರಾಜ್ಯ ರಾಜಧಾನಿ ಬೆಂಗಳೂರು
ಬೆಂಗಳೂರು ಗಂಗೇನಹಳ್ಳಿಯಲ್ಲಿ ನಮ್ಮ ಮೊದಲ ಕಟ್ಟಡ ಉದ್ಘಾಟನೇ
ಉದ್ಘಾಟನೇ ಉದ್ಘಾಟನೇ ಕಟ್ಟಡ ಉದ್ಘಾಟನೇ

ಅಧ್ಯಕ್ಷತೆ ಪೀರಪ್ಪ ಗೌಡರು ಉದ್ಘಾಟನೆ ಜಿವಿಜಯ ಮಂತ್ರಿಯವರು
ಸ್ಮರಣ ಸಂಚಿಕೆ ಬಿಡುಗಡೆ ವೆಂಕಟ್ರಮಣ ಗೌಡರು
ಕಿಕ್ಕಿರಿದು ನೆರೆದಿರುವ ನಮ್ಮ ಭಾಂದವರು

ಉದ್ಘಾಟನೇ ಉದ್ಘಾಟನೇ ಕಟ್ಟಡ ಉದ್ಘಾಟನೇ
ಶುಭವಾಗಲೀ ನಮಗೆ ಜಯವಾಗಲೀ
ಓ ದೇವರೇ ಶುಭವಾಗಲೀ ನಮಗೆ ಜಯವಾಗಲೀ

# ತ್ರಿವಳಿ ಹಿರಿಯರ ಅಮೇರಿಕಾ ಪ್ರವಾಸ

ಶ್ರೀ ಪೇರಿಯಂಡ ಪೂವಯ್ಯ
ಚೆಟ್ಟಳ್ಳಿ



[ಶ್ರೀ ದಂಬೆಕೋಡಿ ಸುಬ್ರಾಯನವರು ಶ್ರೀ ಪೇರಿಯಂಡ ಪೂವಯ್ಯನವರು ಶ್ರೀ ಐಯ್ಯಂಡ್ರ ರಾಮಪ್ಪನವರು ನಮ್ಮ ಸಮಾಜದಲ್ಲಿ ತ್ರಿವಳಿ ಮಕ್ಕಳಂತೆ ಸಮಾಜದ ಕೆಲಸ ಕಾರ್ಯಗಳಲ್ಲಿ ಪಾಲ್ಗೊಂಡು ಸಮಾಜದ ಅಭಿವೃದ್ಧಿಗೆ ಶ್ರಮಿಸಿದ್ದಾರೆ. ಇವರುಗಳು ಅಮೇರಿಕಾಕ್ಕೆ ಹೋಗಿ ಬಂದ ತಮ್ಮ ಅನುಭವವನ್ನು ಶ್ರೀ ಪೇರಿಯಂಡ ಪೂವಯ್ಯನವರು ಈ ಲೇಖನದಲ್ಲಿ ತಿಳಿಸಿದ್ದಾರೆ. ಇವರುಗಳು ಹರೆ ವಯಸ್ಸಿನಲ್ಲಿಯೇ ಹೋಗಿ ಬಂದಿದ್ದಾರೆ. ಇದು ನಮ್ಮ ಸಮಾಜಕ್ಕೆ ಇನ್ನು ಹೆಚ್ಚಿನ ಲಾಭವಾಗುತ್ತಿತ್ತೇನೋ? ಸಂ.]

ಶ್ರೀಯುತರುಗಳಾದ ದಂಬೆಕೋಡಿ ಸುಬ್ರಾಯ ನವರು 80 ವರ್ಷ, ಪೇರಿಯನ ಪೂವಯ್ಯನವರು 76ವರ್ಷ, ಐಯ್ಯಂಡ್ರ ರಾಮಪ್ಪನವರು 73 ವರ್ಷ ಪ್ರಾಯದವರು. ಮಗ, ಸೊಸೆ, ಮೊಮ್ಮಕ್ಕಳನ್ನು ನೋಡಲು, ಇಲ್ಲಿಯ ಮನೆ, ಬಂಧು, ಮಿತ್ರರುಗಳ ಪ್ರೇರಣೆಯಿಂದ 1987ನೇ ಆಗಸ್ಟ್ 21ರಂದು ಪ್ರವಾಸ ಕೈಕೊಳ್ಳಲು ಬೆಂಗಳೂರಿನಿಂದ ವಿಮಾನದಲ್ಲಿ ಹೊರಟು. ಬೊಂಬಾಯಿ, ಪ್ಯಾರಿಸ್, ಅಮೇರಿಕದ ಬೊಸ್ಟನ್ ಮಾರ್ಗವಾಗಿ, ಟೆಕ್ಸಾಸಿನ, ಸ್ಯಾನ್ ಎಂಟೋನಿಯಕ್ಕೆ ಸುಮಾರು 13 ಸಾವಿರ ಮೈಲು ದೂರಕ್ಕೆ 1987ನೇ ಇಸವಿ ಜುಲೈ 22ನೇ ಸಾಯಂಕಾಲ 8 ಗಂಟೆಗೆ ತಲುಪಿದೆವು. ಅಲ್ಲಿ ಕಾದಿದ್ದ ಅಳಿಯ ಲಕ್ಷ್ಮಣ, ಮಗಳು ಸಾವಿತ್ರಿ, ಮೊಮ್ಮಕ್ಕಳು, ಸ್ನೇಹಿತರು ಬಹು ಆದರ ದಿಂದ ಬರಮಾಡಿಕೊಂಡರು.

ಬೆಂಗಳೂರಿನಿಂದ ಹೊರಡುವಾಗಲೇ ನಮ್ಮ ಹಿರಿಯರಾದ ಸುಬ್ರಾಯ್ಯನವರಿಗೆ ಆರೋಗ್ಯ ಸರಿಯಿಲ್ಲದ್ದರಿಂದ, ಬೊಂಬಾಯಿವರಗೆ, ಅವರ ಪುತ್ರ ಕರ್ನಾಟಕ ಸರಕಾರಿ ಹಣಕಾಸು ನಿಗಮದ ಮೆನೇಜರಾಗಿರುವ ಆನಂದರವರು ಬಂದು, ಬೀಳ್ಕೊಟ್ಟರು. ಪ್ಯಾರಿಸ್ಸಿನ ವಿಮಾನ ನಿಲ್ದಾಣದಲ್ಲಿ "ಕೋಮಲ್ ದಿಲ್ಲಾನ್" ಎಂಬ ಹಿಂದು ಮಹಿಳೆ ನಮಗೆ ತುಂಬಾ ಸಹಾಯ ಮಾಡಿದರು. ಬೊಂಬಾಯಿಯ ಅಂತರಾಷ್ಟ್ರೀಯ ವಿಮಾನ ನಿಲ್ದಾಣ, ಪ್ಯಾರಿಸ್ಸಿನ ಬೋಸ್ಟನ್ ಅಮೇರಿಕದ ವಿಮಾನ ನಿಲ್ದಾಣಗಳು ಬಹು ಅಚ್ಚುಕಟ್ಟಾಗಿ ಎಲ್ಲಾ ಹವಾನಿಯಂತ್ರಣವಾಗಿರುತ್ತೆ. ಊಟ, ತಿಂಡಿ, ಕುಳಿತುಕೊಳ್ಳಲು, ಅವಶ್ಯಕತೆ ತೀರಿಸಿಕೊಳ್ಳಲು ತುಂಬಾ ಅನುಕೂಲವಿರುತ್ತೆ. ಬೆಂಗಳೂರಿನಿಂದ ಬೊಂಬಾಯಿಗೆ ವಿಮಾನದಲ್ಲಿ 250–300 ಜನರು ಕುಳಿತುಕೊಳ್ಳಬಹುದಾಗಿತ್ತು. ಬೊಂಬಾಯಿಂದ ಹೊರಟ "ಏರ್ ಫ್ರಾನ್ಸ್" ವಿಮಾನದಲ್ಲಿ 500–600 ಜನರು ಕುಳಿತುಕೊಳ್ಳಬಹುದು. ಊಟ, ತಿಂಡಿ, ಆಸನ, ಮಲ ಮೂತ್ರ ವಿಸರ್ಜನೆಗೆ ಸುಚಿಯಾದ ವ್ಯವಸ್ಥೆಯಿಂದ ಕೂಡಿ, ಗಂಟೆಗೆ 600 ಮೈಲಿ ವೇಗದಲ್ಲಿ ಭೂಮಿಯಿಂದ 8–10 ಮೈಲಿ ಎತ್ತರದಲ್ಲಿ, ನಾವು ಕಾಣುವ ಮೋಡಗಳಾಚೆ, ಅಲ್ಲಾಡದೆ ಏನೊಂದೂ ಶಬ್ದವಿಲ್ಲದೆ ಹೋಗುತ್ತಿರುತ್ತೆ. ಕಿಟಕಿ ಬದಿಯಲ್ಲಿ ನೋಡಿದರೆ, ಕೆಳಭಾಗದಲ್ಲಿ ಮೋಡಗಳ ರಾಶಿ ಇರುತ್ತೆ. ಮೇಲೆ ಶುಭ್ರಾಕಾಶ ಸೂರ್ಯನ ಬಿಸಿಲಿರುತ್ತದೆ.

ಜುಲೈ ತಾ॥ 22ರಂದು ತಲಪಿದ ನಂತರ ನಮ್ಮ ಹಿರಿಯರಿಗೆ ಇಬ್ಬರು ಕನ್ನಡಿಗ ಡಾಕ್ಟರುಗಳು ಔಷದಿ 7_8 ದಿನ ಕೊಟ್ಟು, ಯಾವುದೇ ಶುಲ್ಕ ತೆಗೆದುಕೊಳ್ಳಲಿಲ್ಲ. ಊರಿಂದ ಬಂದ ನಂಟರೆಂದು ನಮ್ಮ ಸೊಸೆ, ಮಗನಿರುವ ಸ್ಯಾನ್ ಎಂಟೋನಿಯದಲ್ಲಿ ಅಂದಾಜು 500 ಹಿಂದು ಕುಟುಂಬದವರು, ವಾಸಿಸುವರಂತೆ. ದಕ್ಷಿಣ ಹಿಂದುಸ್ಥಾನದವರೇ,ಕರ್ನಾಟಕ,ಕೇರಳ,ಆಂಧ್ರ, ತಮಿಳುನಾಡು, ಕೊಡಗಿನವರು ಸೇರಿ ಸುಮಾರು 100 ಮನೆಯವರು ಒಂದು ಭಾಗದಲ್ಲಿರುವರು, ಎಲ್ಲರೂ ಉದ್ಯೋಗಸ್ಥರೆ. ಗಂಡು ಹೆಣ್ಣು ಸೇರಿ, ನಮ್ಮ ಹಿಂದೂ ಹಬ್ಬ, ಪೂಜೆ ವಗೈರೆ ಆಚರಿಸುತ್ತಾರೆ. ನಾವು ಹೋದ ವಾರದಲ್ಲಿ ಎರಡು ಕಡೆ ಗಣಪತಿ ಉತ್ಸವ, ಸತ್ಯನಾರಾಯಣ ಪೂಜೆ ಮಾಡಿದ್ದರು. ಒಂದೊಂದಕ್ಕೂ ನೂರಿನ್ನೂರು ಜನ ಸೇರಿ ವಿಜೃಂಭಣೆಯಿಂದ ಆಚರಿಸಿದರು. ಪ್ರತೀ ದಿನ ರಾತ್ರಿ ನಮಗೆ ನೆಂಟರೂಟ ಕೊಡುತ್ತಿದ್ದರು. ಅಲ್ಲಿ ಭಿನ್ನಭೇದವಿಲ್ಲ. ಎಲ್ಲರೂ ಹಿಂದೂಗಳೆಂಬ ಏಕಭಾವದಲ್ಲಿರುವರು.

ನಾವು ಹೋದದ್ದು ಅಮೇರಿಕ ಸಂಯುಕ್ತ ಸಂಸ್ಥಾನದ ಟೆಕ್ಸಾಸ್ ಎಂಬ ಜಿಲ್ಲೆಯ ಒಂದು ಮುಖ್ಯ ಪಟ್ಟಣಕ್ಕೆ, ಅಲ್ಲಿದ್ದು 300–400 ಮೈಲುದೂರ ಕೆಲವು ಮುಖ್ಯ ಪಟ್ಟಣಗಳನ್ನು ನೋಡಿದೆವು. ಸಾಮಾನ್ಯವಾಗಿ ಸಮತಟ್ಟಾದ ದೇಶ. ದನ, ಕೋಳಿ, ಕುದುರೆ, ಹಂದಿ, ವಗೈರೆ, ಸಾಕುವರು. ಕೆಲವು ಕಡೆ, ಗೋಧಿ, ಭತ್ತ, ಓಟ್ಸ ಬೆಳೆಸುವರು. ಹೆಚ್ಚಾಗಿ ಕಾರ್ಖಾನೆಯ ಸಂಪಾದನೆಯೇ ಹೆಚ್ಚು.

ವಿದ್ಯಾಭ್ಯಾಸದಲ್ಲಿ ಬಹಳ ಮುಂದುವರಿದಿರುವರು. ವರ್ಣಭೇದವಿಲ್ಲದೆ. 10ನೇ ತರಗತಿವರೆಗೆ ಖಡ್ಡಾಯ ಮತ್ತು ಯಾವುದೇ ಖರ್ಚಿಲ್ಲದೆ, ಶಾಲೆಗಳು, ಬಹು ಅಚ್ಚುಕಟ್ಟು, ವಾಹನವಿಲ್ಲದೆ ಮಕ್ಕಳಿಗೆ ಉಚಿತ ಬಸ್ ವ್ಯವಸ್ಥೆಯಿದೆ. ಶಿಸ್ತು, ನಿಯಮ, ಬಹು ಬಿಗಿಯಾಗಿದೆ.

ಸಮವಸ್ತ್ರ ಖಡ್ಡಾಯ ಪರೀಕ್ಷಾ ಫಲಿತಾಂಶ 90ರಿಂದ 100ರಂತೆ. ಎಲ್ಲಾ ಆಟಗಳಿಗೂ ಅನುಕೂಲತೆ ಇರುತ್ತೆ.

ಅಲ್ಲಿಯ ರಸ್ತೆ ವ್ಯವಸ್ಥೆ ಬಹು ನಾಜೂಕಾಗಿರುತ್ತೆ. 2 ರಿಂದ 20 ಮೈಲುವರೆಗೂ ಒಂದೇ ಭಾಗದಲ್ಲಿ 4–5 ವಾಹನ ಚಲಿಸುವಂತೆ, ನೆಟ್ಟಗಿರುವ ರಸ್ತೆಗಳಿವೆ. ಸೇತುವೆಯಲ್ಲಿ ಯಾರೂ ಹಾರ್ನ್ ಮಾಡುವುದೇ ಇಲ್ಲ. ಜನ ಓಡಾಟ ಹೆಚ್ಚಿರುವಲ್ಲಿ 16 ಅಡಿ ಎತ್ತರಕ್ಕೆ ಸೇತುವೆ ಹಾಕಿ ಒತ್ತಡ ತಪ್ಪಿಸುವ ವ್ಯವಸ್ಥೆಯಿದೆ. ಪಟ್ಟಣಗಳ ಮಧ್ಯೆ 1000 ಅಡಿ ಎತ್ತರ ಗುಮ್ಮಟವಿದ್ದು ಲಿಪ್ಟಿನಲ್ಲಿ ಮೇಲೇರಿ, ಪಟ್ಟಣ ಸೌಂದರ್ಯ ಸವಿಯಬಹುದು. ಹಾಗೆಯೇ 70, 80, 100 ಮಹಡಿಯ ಕೆಲವು ಕಟ್ಟಡಗಳಾದರೂ ಇದ್ದು, ಇದಕ್ಕೆ "ಡೌನ್ ಟೋವರ್" ಎನ್ನುವರು.

1962ರಲ್ಲಿ ಅಮೇರಿಕದ ಅಧ್ಯಕ್ಷ ಕೆನಡಿಯವರನ್ನು ಗುಂಡಿಟ್ಟು ಕೊಂದ 'ಡಲ್ಲಾಸ್' ಎಂಬ ಊರಿಗೂ ಚಂದ್ರಲೋಕಕ್ಕೆಹೋಗಿ ಬಂದ ವಿಮಾನ ವಗೈರೆ ಇಟ್ಟಿರುವ ಬೊಸ್ಟನ್ನಿನ ಹತ್ತಿರದ "ನ್ಯಾಸಾ" ಎಂಬಲ್ಲಿಗೂ, ವಿಕ್ಟೋರಿಯದಲ್ಲಿ ಪೆಟ್ರೋಲ್ ತೆಗೆಯುವ ಊರಿಗೂ ಹೋಗಿ ಬಂದೆವು. ಅಮೆರಿಕಾದಲ್ಲಿ ಎಲ್ಲಾ ರಸ್ತೆ ವ್ಯವಸ್ಥೆ ಒಂದೇ ತರವಾಗಿದೆ.

ಕಾಗೆ. ಇಲ್ಲ, ಸೊಳ್ಳೆ ಇಲ್ಲ, ಸುಳ್ಳು ವಂಚನೆ ಇಲ್ಲ, ಹೆಣ್ಣು ಗಂಡು ಸಮಾನ್ಯವಾದ ಒಂದೇ ತರದ ಉಡುಪು! ಕಾಲು ನಡಿಗೆಯೇ ಇಲ್ಲ. ಪ್ರತಿ ಮನೆಗೂ 3–4 ವಾಹನಗಳಿರುತ್ತದೆ. ಬಸ್, ರಿಕ್ಷಾ, ಬೈಕ್–ಗಾಡಿ, ವಗೈರೆ ಇಲ್ಲ. ಬೀಡಿ, ಸಿಗರೇಟ್, ಬೆಂಕಿಕಡ್ಡಿ ಉಗುಳುವಿಕೆ ಕಾಣುವುದೇ ಇಲ್ಲ. ರಸ್ತೆಯಲ್ಲಿ ಪೊಲಸನ್ನು ಕಾಣಲು ಸಾಧ್ಯವಿಲ್ಲ. ಅನುಕೂಲವಿರುವವರು ಒಂದು ಬಾರಿ ವಿದೇಶ ಪ್ರವಾಸ ಮಾಡಿದರೆ, ಅವರಿಗೂ ನಮ್ಮ ದೇಶಕ್ಕೂ ತುಂಬಾ ಪ್ರಯೋಜನವಾಗುವುದೆಂದು ಅಭಿಪ್ರಾಯ ಪಡುತ್ತೇವೆ.

ಹೀಗೆ. ಆತ್ಮೀಯತೆಯಿಂದ ಉಪಚರಿಸದ ಬಂಧುಗಳಿಗೂ ಇಷ್ಟ ಮಿತ್ರರು ನಾವು ಹೊರಡುವ ಮುನ್ನಾದಿನ, ಬೀಳ್ಕೊಡುವ ಸಮಾರಂಭವೇರ್ಪಡಿಸಿ, ಬಹು ತೃಪ್ತಿಯಿಂದ 23–9–87ರಂದು ನಮ್ಮ ಹುಟ್ಟೂರಿಗೆ ಮರಳಿದೆವು.

---



---

# ನೊಂದು ಬರೆದ ಒಂದು ಗೀತೆ

ರಚನೆ : ಬೊಳ್ಳ್ಮ ಮನೆ ತಮ್ಮಯ್ಯ ಕಾವೇರಿ ಕೊಡಗು

---

[ಶ್ರೀಮತಿ ಬೊಳ್ಳ್ಮ ಮನೆ ತಮ್ಮಯ್ಯ ಕಾವೇರಿಯವರು ಈಗಿನ ವಿದ್ಯಾವಂತ ಯುವಕ–ಯುವತಿಯರು ವಿದ್ಯಾವಂತರಾದರೂ ಉದ್ಯೋಗ ದೊರಕದೆ ಪಡುತ್ತಿರುವ ಬವಣೆಯನ್ನು ನಮ್ಮ ಕಣ್ಣು ಮುಂದೆ ಕವನ ಕಟ್ಟಿ ಚಿತ್ರಿಸಿದ್ದಾರೆ. ವಿದ್ಯಾವಂತ ಯುವಕ-ಯುವತಿಯರ ಬವಣೆಯನ್ನು ಮನಕರಗುವಂತೆ ವರ್ಣಿಸಿದ್ದಾರೆ. ಈ ಪದ್ಯವು ಅವರ ಹೃದಯದಿಂದ ಮೂಡಿ ಬಂದ ನಿಟ್ಟುಸುರಿನಂತಿದೆ. ಈ ರೀತಿಯ ಕವನ ಕಟ್ಟುವ ಶ್ರೀಮತಿ ಬೊಳ್ಳ್ಮಮನೆ ತಮ್ಮಯ್ಯ ಕಾವೇರಿಯಂತೆ ಇತರ ಯುವಕ–ಯುವತಿಯರೂ ಮುಂದಾಗಲೆಂದು ಹಾರೈಸುವೆವು ಸಂ ]

---

ನೊಂದು ನಾ ಬರೆದಿಹೆನು
ಒಂದೂ ಗೀತೆಯ ನೀಗ
ವಿದ್ಯೆ ಕಲಿತರು ನಮಗೆ ಕೆಲಸವಿಲ್ಲ ।
ಮಣ್ಣನ್ನೆ ಬಯಸಿ ನಾವ್
ದುಡಿವೆ ವೆಂದರೆ ನಮಗೆ
ಗದ್ದೆ ಹೊಲ ತೋಟ ಅದು ಏನು ಇಲ್ಲ.

ಮನುಜ ಬಾಳಿನ ಕಥೆಯ
ನೆನಸಿಕೊಂಡರೆ ಇಂದು
ಆಗುತಿದೆ ಏನಪ್ಪಾ ಏನು ಹೀಗೆಲ್ಲಾ ?
ಇದ್ದವನು ಎದ್ದನವ
ಬಿದ್ದವನು ಸತ್ತನವ
ಇಂದಿನಾಸ್ಥಿಥಿಗತಿಯು ಮತ್ತೇನು ಇಲ್ಲ.



ವಿದ್ಯೆ ಕಲಿಸಲು ತಂದೆ
ತಾಯಿಯರು ಅಂದೆಮಗೆ
ಬಂದಿಹರು ಕಷ್ಟವದು ಎಷ್ಟೊ ಎಷ್ಟು ।
ವಿದ್ಯೆ ಕಲಿತಾ ಮೇಲೆ
ಚಾ ಕರಿಯು ಎಲ್ಲಿಹುದು
ಮನುಜ ಬಾಳಿನ ಬುಡಕೆ ಇದುವೆ ಪೆಟ್ಟು

ಕದ್ದು ಜೀವನ ಬೇಡ
ವಿದ್ಯೆ ಕಲಿತಿಂದೆಮಗೆ
ಪರಿಶುದ್ಧ ಜೀವನದಿ ನಮಗೆ ಬಯಕೆ ।
ಕರುಣಾಳು ಇಹನೆಂದು
ಕಾಪಾಡು ನೀನೆಂದು
ಮನಮರುಗಿ ಮಾಡುವೆವು ಅವಗೆ ಹರಕೆ ।

ಸತ್ಯವನ್ನು ನಾವ್ ಮೆಟ್ಟಿ
ಕಪಟವೆಲ್ಲವ ಮುಚ್ಚಿ
ಬಾಳು ಸಾಗಿಸುತಿಹುದು ಬೇಡವೆಂದೇ
ಬಡವನಾದರೂ ಸರಿಯೆ
ನ್ಯಾಯವನು ನಾಮರೆಯೆ
ಎಂದೆನುತ ನಮ್ಮ ಈ ಧ್ಯೇಯ ಒಂದೆ ॥

ಅತೀ ವಿದ್ಯೆ ಕಲಿತರೂ
ಅತಿ ಶ್ರೇಷ್ಠನಾದರೂ
ಬಡ ಜನಕೆ ಮಾನ್ಯತೆಯು ಇಹುದು ಎಲ್ಲಿ ?
ಐಶ್ವರ್ಯದವನಾಗೆ
ಅಲ್ಪ ವಿದ್ಯೆಯೆ ಸಾಕು
ಆತನಿಗೆ ಮಾನ್ಯತೆಯಿದೆ ಬಯಸಿದಲ್ಲಿ ॥

ಉದ್ಯೋಗ ಕೆಂದೆನುತ
ಆಹ್ವಾನೆ ಮಾಡುವರು
ಎಲ್ಲ ಇದ ಮಾಡುವುದೆ ಕಣ್ಣು ಕಟ್ಟು ।
ಲಂಚದಲಿ ಜೀವಿಸುವ
ಲಂಚದಾ ಪ್ರಪಂಚವಿದು
ಬಡವ ಕೊಡುವನೆಲಂಚ ಎಲ್ಲಿ ಉಂಟು ?

ಅನ್ಯಾಯದಾಹಣವು
ಬಡಜನಕೆ ಬೇಕಿಲ್ಲ
ನ್ಯಾಯ ಸತ್ಯವೇ ಅವರಿಗಿರುವ ಘಂಟು ।
ಅಧಿಕಾರಿಗಿಹುದು ಆ
ಅಧಿಕಾರದಾ ಧರ್ಪ
ಅವರಿಗಿದೆ ಬಡವನಲಿ ಬಲುದೂರ ನಂಟು ॥



ಬಡವರಾ ಮೇಲೆಂದೂ
ಕನಿಕರಿಸಿ ನೀವಿಂದು
ಲಂಚವಿಲ್ಲದೆ ಕೆಲಸ ಕೊಡಿರೆಂದು ನಮಿಸಿ
ಕವನವಿದ ಮುಗಿಸಿ ನಾ
ಕೈ ಮುಗಿದು ಕೇಳುವೆನು
ಸತ್ಯ, ಧರ್ಮ, ನ್ಯಾಯಕೆಲ್ಲ ಶ್ರಮಿಸಿ.

---



---

ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ
ನೂತನ ಕಟ್ಟಡದ ಸವಿ ನೆನಪಿಗಾಗಿ ಹೊರತರಲಾಗುತ್ತಿರುವ ವಿಶೇಶಾಂಕ
"ಶ್ರೇಯಸ್"ಗೆ ಹಾರ್ದಿಕ ಶುಭಾಶಯಗಳು.

## ಸೂದನ ಸುಬ್ಬಯ್ಯ ಈರಪ್ಪ

ಸಂಪಾದಕ—ಗೌಡ ಧ್ವನಿ ಮಾಸಿಕ



ವಿಳಾಸ

ಪಾಲೂರು ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲ್ಲೂಕು
ಕೊಡಗು ಜಿಲ್ಲೆ 571 214

ನಂ. 29
ಹೊಸ ಕಟ್ಟಡದ ಮಹಡಿ ಮೇಲೆ
ಎಂ. ಎಸ್. ರಾಮಯ್ಯ ಬಿಲ್ಡಿಂಗ್
ಗೋಕುಲ
ಬೆಂಗಳೂರು–560 054

# ಶಾಲೆಯು ಹೇಗೆ ಜನಪ್ರಿಯವಾಗಬಹುದು ?

—ರಾಜ್ಯ ಪ್ರಶಸ್ತಿ ವಿಜೇತ ಶ್ರೀ ಜಿ. ರಾಮಚಂದ್ರ ಗೌಡ
ಕೊಯಿಲ ಬಂಟವಾಳ

[ಈ ಲೇಖನವು ಶಿಕ್ಷಣ ಕ್ಷೇತ್ರದ ಸಂವಿಧಾನದಂತಿದೆ—ಮನೆ—ವಿದ್ಯಾರ್ಥಿ—ಶಾಲೆಯ ಸಂಬಂಧ ಮೂರು ಮುಪ್ಪುರಿಗೊಂಡಂತೆ. ಇದರೊಡನೆ ಸರ್ಕಾರ ಮತ್ತು ಅಧಿಕಾರ ವರ್ಗದ ಸಹಕಾರ ಸಹಾನುಭೂತಿ ಇದ್ದರೇನೇ ಈ ಪ್ರಜಾಪ್ರಭುತ್ವದಲ್ಲಿ ವಿದ್ಯಾಕ್ಷೇತ್ರ— ನಿಜವಾದ ವಿದ್ಯಾಕ್ಷೇತ್ರವಾಗುವುದು. ಲೇಖಕರೇ ಹೇಳಿದಂತೆ ಇವೆಲ್ಲವೂ ವಿದ್ಯಾಭಿವೃದ್ಧಿಯ ಸಂಕಲೆಯ ಕೊಂಡಿಗಳಿದ್ದಂತೆ. ಇವುಗಳು ವಿದ್ಯಾ ದೇವತೆಯ ಅಭಿನ್ನ ಅಂಗಗಳು. ನಮ್ಮ ಸಮಾಜವು ಈ ರೀತಿಯ ಸಹಕಾರ ಸಮನ್ವಯದಿಂದ ನಡೆದರೆ ಒಂದು ಸಮಾಜ ಯಾ ದೇಶವು ಉನ್ನತ ಸ್ಥಿತಿಯನ್ನು ಹೊಂದುವುದರಲ್ಲಿ ಸಂಶಯವೇ ಇಲ್ಲವೆನ್ನುವುದನ್ನು ಶ್ರೀ ಜಿ. ರಾಮಚಂದ್ರ ಗೌಡರು ತೋರಿಸಿ ಕೊಟ್ಟಿದ್ದಾರೆ.—ಸಂ]

ಮನುಷ್ಯನು ಹುಟ್ಟಿದಂದಿನಿಂದ ಸಾಯುವ ತನಕ ಅನುಭವಗಳನ್ನು ಹೊಂದುತ್ತಲೇ ಇರುತ್ತಾನೆ. ಅವನು ಹೊಂದುವ ಎಲ್ಲಾ ಅನುಭವಗಳು ಅವನ ಸರ್ವಾಂಗಗಳ ವಿಕಾಸಕ್ಕೆ ಪೋಷಕವಾಗುತ್ತವೆ. ಅದನ್ನೆ ನಾವು ಶಿಕ್ಷಣ ಎನ್ನುತ್ತೇವೆ. ಆದುದರಿಂದ ಮನುಷ್ಯನು ಪ್ರತಿಕ್ಷಣ ಕ್ಷಣಕ್ಕೂ ಶಿಕ್ಷಣ ಪಡೆಯುತ್ತಲೇ ಇರುತ್ತಾನೆ. ಶಿಕ್ಷಣ ಎಂದರೇನೆಂಬುದನ್ನು ಹಲವರು ಹಲವು ರೀತಿಗಳಲ್ಲಿ ಪ್ರತಿಪಾದಿಸಬಲ್ಲರು. ಆದರೆ ಮನುಷ್ಯನಾಗಿ ಜೀವಿಸುವ ಬಗೆಯ ಕಲಿಕೆಯನ್ನು ತಿಳಿಸುವುದೇ ಶಿಕ್ಷಣದ ಸಿದ್ಧಾಂತ.

ಮಾನವನ ಶಿಕ್ಷಣ ಕಾರ್ಯದಲ್ಲಿ ಮುಖ್ಯವಾಗಿ ನಾಲ್ಕು ಸಂಸ್ಥೆಗಳು ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಭಾಗವಹಿಸುತ್ತವೆ. . ಅವು (೧) ಮನೆ (೨) ಸಮಾಜ (೩) ಶಾಲೆ (೪) ಸರಕಾರ.

ಮಗುವಿಗೆ ಸುಮಾರು ನಾಲ್ಕು ಅಥವಾ ಐದು ವರ್ಷ ವಯಸ್ಸಿನವರೆಗೆ ಮನೆಯಲ್ಲಿಯೇ ಶಿಕ್ಷಣ ಲಭಿಸುತ್ತದೆ. "ತೊಟ್ಟಿಲು ತೂಗಿದ ಕೈಯೇ ಸಾಮ್ರಾಜ್ಯವನ್ನು ಆಳುವ ಕೈ" ಎಂಬ ಉಚ್ಚ ಉಕ್ತಿಯು ತಾಯ್ತನದ ಹಿರಿಮೆಯನ್ನು ವ್ಯಕ್ತಪಡಿಸುತ್ತದೆ. ಉತ್ತಮ ಶೈಕ್ಷಣಿಕ ಸಂಪನ್ನತೆಯಿಂದ ಕೂಡಿದ ಮಾತೆಯೇ ಉತ್ತಮ ಪ್ರಜೆಯನ್ನು ರೂಪಿಸುವ ಮಹಾಕಾರ್ಯದಲ್ಲಿ ಅಡಿಗಲ್ಲಾಗುವಳು. ಆದರೆ ಮಕ್ಕಳಿಗೆ ಗೃಹ ಶಿಕ್ಷಣದಿಂದ ಸಮಾಜ ಜೀವನಕ್ಕೆ ಬೇಕಾದಷ್ಟು ವಿಶಾಲ ವಿಷಯ ವಿಚಾರಗಳು ದೊರಕಲಾರವು. ಇದಕ್ಕಾಗಿಯೇ ಶಾಲೆಯು ಏರ್ಪಟ್ಟಿದೆ. ಶಾಲೆಯು ಕುಟುಂಬಕ್ಕೂ ಹೊರ ಸಮಾಜಕ್ಕೂ ಮಧ್ಯವರ್ತಿಯಾಗಿರುವುದು ಶಾಲೆಯಲ್ಲಿ ಶಿಸ್ತು ವಾತಾವರಣದ ಮೂಲಕ ಅನೇಕ ಉಪಯುಕ್ತ ವಿಷಯಗಳ ಜ್ಞಾನ ಉಂಟಾಗುವುದಲ್ಲದೆ, ಮಕ್ಕಳಲ್ಲಿ ಉದಾತ್ತ ವಿಚಾರ ಭಾವನೆಗಳು ನೆಲೆಗೊಳ್ಳುತ್ತವೆ. ಸಾಮೂಹಿಕವಾಗಿ ಜೀವನದಲ್ಲಿ ಅವರಿಗಿರುವ

ಹಕ್ಕುಬಾಧ್ಯತೆಗಳ ಹಾಗೂ ಅವರು ಹೊರಬೇಕಾದ ಹೊಣೆಗಾರಿಕೆಗಳ ಕಲ್ಪನೆಯು ಅವರಿಗೆ ಉಂಟಾಗಲು ಅವಕಾಶವು ದೊರೆಯುತ್ತದೆ. ಅಂತಹ ಶಾಲೆಯು ಜನ ಪ್ರಿಯವಾಗಬೇಕಾದರೆ, ಆಡಳಿತಾ ಸಂಸ್ಥೆ, ಶಿಕ್ಷಕವರ್ಗ, ರಕ್ಷಕವರ್ಗ ವಿದ್ಯಾರ್ಥಿ ಬಳಗ, ಅಧಿಕಾರಿವರ್ಗ ಮತ್ತು ಸರಕಾರ ಮಾಡಬೇಕಾದ ಕರ್ತವ್ಯ ಭಾಗಗಳು ತುಂಬಾ ಇವೆ. ಇವು ಸಂಕಲೆಯ ಗೊಣಸುಗಳಂತೆ ಒಂದಕ್ಕೊಂದು ಹೊಂದಿಕೊಂಡೇ ಇರಬೇಕಾಗುತ್ತದೆ. ಬದಲಾಗಿ ಯಾವುದಾದರೊಂದರ ಕೊರತೆ ಕಂಡುಬಂದರೆ ಜನ ಪ್ರಿಯತೆಗೆ ಧಕ್ಕೆ ಬರಬಹುದು. ಪರಿಣಾಮವಾಗಿ ಭಾವೀ ಜನಾಂಗ ಸರಿಯಾದ ರೀತಿಯಲ್ಲಿ ರೂಪಿಸಲ್ಪಡಲಾರವು.

**ಆಡಳಿತ :**

ಶಾಲಾ ಆಡಳಿತ ಹೊಣೆಯು ಒಂದು ಉತ್ತಮ ಅಂಗವಾಗಿದೆ. ಶಾಲಾ ಹಿತ-ಅಹಿತಗಳನ್ನು ಬಹಳ ಚೆನ್ನಾಗಿ ಗಮನಿಸಬೇಕು. ಶಾಲೆಗೆ ಬೇಕಾದ ಅವಶ್ಯ ಕತೆಗಳನ್ನು ಸಕಾಲದಲ್ಲಿ ಒದಗಿಸಬೇಕು. ಕಟ್ಟಡವಕಾಶ ಪೀಠೋಪಕರಣ, ಪಾಠೋಪಕರಣ, ಆಟದ ಸಾಮಗ್ರಿ ಗ್ರಂಥಾಲಯ ಇತ್ಯಾದಿ ಸಕಲ ಪೂರೈಕೆಗಳು ನೆರವೇರ ಬೇಕು. ಪ್ರಾಥಮಿಕ ಶಾಲೆಯು ಶಿಕ್ಷಣದ ಮೂಲ ಪಂಚಾಂಗವಾಗಿದ್ದು, ಸರ್ವಶ್ರೇಷ್ಠ ಸಂಸ್ಥೆಯಾಗಿದೆ ಎಂಬುದನ್ನು ಸರಿಯಾಗಿ ಗಮನಿಸಬೇಕಾಗಿದೆ. ಯೋಗ್ಯ, ಸಮರ್ಥ ಹಾಗೂ ಪ್ರತಿಭಾವಂತ ಶಿಕ್ಷಕರನ್ನೆ ನೇಮಿಸ ಬೇಕು. ನಿಮ್ನ ಜಾತಿ ನಿಮ್ನ ವರ್ಗ, ಹಿಂದುಳಿದ ವರ್ಗ ಎಂಬ ಮತಭೇದ ಶಿಕ್ಷಕರ ನೇಮಕಾತಿ ನಿಯಮಕ್ಕೆ ಯುಕ್ತವಲ್ಲ. ಅದರಲ್ಲೂ ಪ್ರಾಥಮಿಕ ಶಾಲೆಗೆ ಈ ನಿಯಮ ಪೂರ್ಣ ನಿಷಿದ್ಧ. ಮಕ್ಕಳ ಮನಶಾಸ್ತ್ರದ ಅರಿವು, ಮಾನವೀಯ ಮೌಲ್ಯ, ಉಚ್ಚ ಅರ್ಹತೆ, ಪಾರಂಪರ್ಯ, ನಿರಾಡಂಬರ ವ್ಯಕ್ತಿತ್ವ ಮೊದಲಾದವು ಶಿಕ್ಷಕರ ನೇಮಕಾತಿ ನೆಲೆಯಲ್ಲಿ ಗಮನಿಸಬೇಕಾದ ಮುಖ್ಯ ವಿಷಯಗಳಾಗಿವೆ. ಶಾಲಾ ಭಿವೃದ್ಧಿಯ ಕುರಿತು ಶಿಕ್ಷಕ ವರ್ಗದವರೊಡನೆ ಚರ್ಚಿ ಸುತ್ತಿರಬೇಕು. ಆಗಾಗ ಶಾಲೆಯನ್ನು ಸಂದರ್ಶಿಸಬೇಕು. ಸಮಾಜದಲ್ಲಿ ಶಿಕ್ಷಕರಿಗೆ ಸ್ಥಾನಮಾನ ಸಲ್ಲುವ ರೀತಿ, ಜೀವನ ನಿರ್ವಹಣೆಗೆ ಸಾಕಾಗುವಷ್ಟು ವೇತನ ಮೊತ್ತ ನಿಶ್ಚಿತ ದಿನದಲ್ಲಿ ಅಡ್ಡಿ ಅತಂಕಗಳಿಲ್ಲದೆ ಸಲ್ಲುವಂತಾಗ ಬೇಕು.

ಶಾಲೆಯಲ್ಲಿ ಮಕ್ಕಳ ಸಂಖ್ಯೆ ಹಾಜರಿಗಳು ಪ್ರಗತಿಯಲ್ಲಿರುವಂತೆ ಅಧ್ಯಾಪಕ ವರ್ಗದೊಂದಿಗೆ ಸಹ ಕರಿಸುತ್ತಿರಬೇಕು. ಸಾರ್ವಜನಿಕ ಹಿತ ಸಂಬಂಧವಾದ ಚಟುವಟಿಕೆಗಳನ್ನು ನಡೆಸಲು ಶಾಲೆಯಲ್ಲಿ ಅನುಮತಿ ನೀಡುವುದರ ಮೂಲಕ ಸಾರ್ವಜನಿಕರ ಪ್ರೀತಿ ಸಹಕಾರ ಗಳನ್ನು ಪಡೆಯಲು ಸಾಧ್ಯವಿದೆ.

**ಶಿಕ್ಷಕವರ್ಗ :**

ಶಿಕ್ಷಣಕಾರ್ಯದಲ್ಲಿ ಶಿಕ್ಷಕನ ಪಾತ್ರ ಬಹಳ ದೊಡ್ಡದು. "ಜ್ಞಾನ ಪೆಟ್ಟಿಗೆಯ ಬೀಗದ ಕೈ ಶಿಕ್ಷಕನ ಕೈಯಲ್ಲಿದೆ. ಭಾವೀ ಜನಾಂಗವನ್ನು ರೂಪಿಸುವ ಕರ್ಮ ಶಾಲೆಯಲ್ಲಿ ಮಹಾಶಿಲ್ಪಿಯಾಗಿ ಕೆಲಸ ಮಾಡುವಾತನೇ ಶಿಕ್ಷಕ. ಶಿಕ್ಷಕನನ್ನು ವೈಮಾನಿಕನೊಂದಿಗೆ ಹೋಲೀಸಿದಾಗ ಅದರ ಅನುಭವ ಚೆನ್ನಾಗಿ ಆಗಬಲ್ಲುದು. ಅತಿ ಎತ್ತರವಾದ ವಾಯು ಮಂಡಲದಲ್ಲಿ ಹಕ್ಕಿಯಂತೆ ಹಾರುವ ವಿಮಾನದಲ್ಲಿ ನೂರಾರು ಪ್ರಯಾಣಿಕರನ್ನು ತುಂಬಿಕೊಂಡು ಸುರಕ್ಷಿತವಾಗಿ ಸಾಗಿಸುವ ಹೊಣೆ ಹೊತ್ತ ವೈಮಾನಿಕನಿಂದ ಒಂದು ವೇಳೆ ಅಲಕ್ಷವೇ ನಾದರೂ ಸಂಭವಿಸಿದರೆ, ಯಾವ ಗತಿ ಒದಗುವುದೊ ಅದೇ ಗತಿ ನೂರಾರು ಮಕ್ಕಳಿಗೆ ಶಿಕ್ಷಣ ಪೂರೈಸುವ ಹೊಣೆಹೊತ್ತ ಶಿಕ್ಷಕನಿಂದ ಅಲಕ್ಷವೇನಾದರೂ ಜರಗಿ ದರೆ ಉಂಟಾಗಬಹುದು. ಆದ್ದರಿಂದ ಶಿಕ್ಷಕರಾದವರು ಬಹಳ ಜಾಗರೂಕರಾಗಿರಬೇಕು.

ಶಿಕ್ಷಕ ವೃತ್ತಿಯನ್ನು ಜೀವನ ನಿರ್ವಹಣೆಯ ಮಾರ್ಗವೆಂದು ಪರಿಗಣಿಸದೆ, ಅದೊಂದು ಅಮೂಲ್ಯ ಸೇವಾಕಾಲವೆಂದು ಭಾವಿಸಬೇಕು. ತನ್ನಲ್ಲಿರುವ ವಿದ್ಯಾ ಭಂಡಾರವನ್ನು ಪರರಿಗೆ ಮುಖ್ಯವಾಗಿ ವಿದ್ಯಾರ್ಥಿಗಳಿಗೆ ಕಳಕಳಿಯಿಂದ ಹಂಚಬೇಕು. ತಾನು ಕಲಿಯಬೇಕಾದುದೆಲ್ಲ ಮುಗಿದಿದೆ. ಕಲಿಸುವುದು ಮಾತ್ರ ತನ್ನ ಕೆಲಸವೆಂದು ಯಾವನೇ ಶಿಕ್ಷಕನು ಭಾವಿಸಿದರೆ, ಅದು ಅವನ ಅಪೂರ್ಣ ಜ್ಞಾನದ ದ್ಯೋತಕವೇ ಸರಿ. ಕಲ್ಪನೆಗೆ ಕೊನೆಯಿಲ್ಲ ಎಂಬಂತೆ, ಕಲಿಯುವಿಕೆಗೂ ಕೊನೆಇಲ್ಲ. ಮಾಡುತ್ತಾ, ನೋಡುತ್ತ, ಕೇಳುತ್ತಾ, ಓದುತ್ತ, ಅನುಭವಿಸುತ್ತ, ಪರೀಕ್ಷಿಸುತ್ತ, ಸಂಶೋಧಿಸುತ್ತ ಕಲಿಯಬೇಕು ಮತ್ತು ಕಲಿಸಬೇಕು ಅಧ್ಯಾಪನ ಇಲ್ಲದವನು ಅಧ್ಯಾಪಕನಾಗಲಾರ

ಕೇವಲ ತರಬೇತಿಯಿಂದ, ಸೇವಾವಧಿಯ ಗಣನೆಯಿಂದ ಯಾರೂ ಸಾರ್ಥಕ ಅಧ್ಯಾಪಕನಾಗಲಾರ.

ಶಿಕ್ಷಕನು ತನ್ನಲ್ಲಿರುವ ಅಮೂಲ್ಯ ಸುಪ್ತಗುಣಗಳಿಂದ ಇತರರನ್ನು ಆಕರ್ಷಿಸಿಕೊಂಡು ಮಾನವರನ್ನು ಮಹಾಮಾನವರನ್ನಾಗಿ ಮಾಡಬಲ್ಲನು. ಇಂಥವನು ಮೊದಲು ತನ್ನ ವೈಯುಕ್ತಿಕ ಚಾರಿತ್ರ್ಯವನ್ನು ಆದರ್ಶಪ್ರಾಯವಾಗಿರಿಸಿಕೊಳ್ಳಬೇಕು; ಅನುಕರದೇಯವಾಗಿರಿಸಿಕೊಳ್ಳಬೇಕು. ಆತನು ಆಕಳಿನಂತೆ ಸಭ್ಯವಾಗಿರಬೇಕು; ಪರ್ವತದಂತೆ ಅಚಲನಾಗಿರಬೇಕು. ತುಂಬಿದ ಕೊಡದಂತೆ ಪರಿಪೂರ್ಣನಾಗಿರಬೇಕು. ಸಿಂಹದಂತೆ ಧೈರ್ಯಶಾಲಿಯಾಗಿರಬೇಕು. ಮೊಲದಂತೆ ಚುರುಕಾಗಿರಬೇಕು. ಇರುವೆಯಂತೆ ಸತತ ಕ್ರಿಯಾಶೀಲನಾಗಿರಬೇಕು, ಜೇನು ನೊಣಗಳಂತೆ ಕೂಡಿಡಬೇಕು (ಜ್ಞಾನ ಸಂಪತ್ತು). ಹಂಸದಂತೆ ನ್ಯಾಯ ನಿಷ್ಠುರನಾಗಿರಬೇಕು, ಅಲೆಗಳಂತೆ ಮುಂದುವರಿಯಬೇಕು. ವೃಕ್ಷದಂತೆ ಪರೋಪಕಾರಿಯಾಗಿರಬೇಕು. ಸಾಗರದಂತೆ ಗಂಭೀರನಾಗಿರಬೇಕು. ಆಕಾಶದಂತೆ ವಿಶಾಲ ಮನೋಭಾವನೆ ಉಳ್ಳವನಾಗಿರಬೇಕು. ಹೂವಿನಂತೆ ಮೆದು ಮನಸ್ಸಿನವನಾಗಿರಬೇಕು. ತಾಯಿಯಂತೆ ವಾತ್ಸಲ್ಯ ತೋರುವವನಾಗಿರಬೇಕು. ಕಸ್ತೂರಿಯಂತೆ ಕೀರ್ತಿ ಬೀರಬೇಕು. ಇಷ್ಟೆಲ್ಲಾ ಗುಣಗಳನ್ನು ಇರಿಸಿಕೊಂಡು, ತನ್ನ ಮೇಲಿನ ಹೊಣೆಯರಿತು, ಯಾವ ಶಿಕ್ಷಕನು ವಿದ್ಯೆ ಬೋಧಿಸುವನೋ ಅವನೇ ನಿಜವಾದ ಗುರುವಾಗಿ ಪರಿಣಮಿಸಬಲ್ಲನು, ಶಿಕ್ಷಕನು ತನ್ನ ಗಳಿಕೆ ನೋಡಿ ಬಳಸುತ್ತ ಸಾಧ್ಯವಾದಷ್ಟು ಸ್ವಾವಲಂಬನ, ನಿರಾಡಂಬರ ಜೀವನ, ಸಾಗಿಸುತ್ತ ಊರಿನ ಇಲ್ಲವೇ ಸಮಾಜದ ಯಾವ ಪಕ್ಷ ಪಂಗಡಗಳಿಗೂ ಸೇರಿಕೊಳ್ಳದೆ ಗುರುಪರಂಪರೆಯ ಮೌಲ್ಯವನ್ನೂ ಹಿರಿಮೆಯನ್ನೂ ಕಾಯ್ದುಕೊಳ್ಳಬೇಕು. ತನ್ನೊಂದಿಗೆ ಕೆಲಸ ಮಾಡುತ್ತಿರುವ ಇತರ ಸಹ ಶಿಕ್ಷಕರೊಡನೆ ಸಹಕಾರ ಭಾವನೆಯಿಂದ ವರ್ತಿಸುತ್ತಾ, ವೇಳೆಗೆ ಮಹತ್ವ ಕೊಟ್ಟು ಅಂದಿನ ಕೆಲಸಗಳನ್ನು ಅಂದೇ ಮಾಡುತ್ತಾ ಸಾಗಬೇಕು. ಶಾಲೆಯ ಅಭಿವೃದ್ಧಿ ಕಾರ್ಯಗಳಾದ ಕಟ್ಟಡ ನಿರ್ಮಾಣ, ಮಕ್ಕಳ ಸಂಖ್ಯೆ ಹಾಜರಿ ಸುಧಾರಣೆ, ವಾಚನಾಲಯದ ಅಭಿವೃದ್ಧಿ. ಮಕ್ಕಳ ಮಧ್ಯಾಹ್ನ ಉಪಾಹಾರ ಯೋಜನೆ, ಬಡಮಕ್ಕಳ ಶಿಕ್ಷಣಾಭಿವೃದ್ಧಿ ಸಂಘ, ಕ್ರೀಡಾ ಮಹೋತ್ಸವ ರಾಷ್ಟ್ರೀಯ ಮತ್ತು ಧಾರ್ಮಿಕ ಹಬ್ಬಗಳ ಆಚರಣೆ, ಶಾಲಾ ವಾರ್ಷಿಕೋತ್ಸವ, ಶಿಕ್ಷಕ — ರಕ್ಷಕರ ಸಭೆ ಇತ್ಯಾದಿಗಳನ್ನು ಕಾಲಕ್ಕೆ ಸರಿಯಾಗಿ ಜರಗಿಸಬೇಕು. ಮಕ್ಕಳ ಪೋಷಕರ ನಿಕಟ ಸಂಪರ್ಕ ಇರಿಸಿಕೊಳ್ಳಬೇಕು. ಶಾಲೆಗೆ ಸಂದರ್ಶನ ಕೊಡುವ ಅಧಿಕಾರಿಗಳನ್ನೂ ಸಂದರ್ಶಕರನ್ನೂ ಆದರದಿಂದ ಕಂಡು ಶಿಕ್ಷಣಾಭಿವೃದ್ಧಿ ಕಾರ್ಯದಲ್ಲಿ ಉಂಟಾಗುವ ಸಮಸ್ಯೆ ಸಂದೇಹಗಳನ್ನೂ ಪರಸ್ಪರ ಚರ್ಚಿಸಿ ಬಗೆಹರಿಸಿಕೊಳ್ಳಬೇಕು ಮತ್ತು ಅಗತ್ಯವಿರುವ ಸಲಹೆ ಸೂಚನೆಗಳನ್ನು ಪಡೆಯಬೇಕು. ಶಿಕ್ಷಕನು ಬೋಧಿಸುವ ವಿಷಯಗಳು ಮಗುವಿನ ಭವಿಷ್ಯತ್ತಿನ ಭವ್ಯ ಜೀವನಕ್ಕೆ ಪೂರ್ಣ ಪೋಷಕವಾಗಿರಬೇಕು.

ವಿದ್ಯಾರ್ಥಿಗಳು :

ಎಳೆಯ ಪ್ರಾಯವು ವಿದ್ಯಾಭ್ಯಾಸಕ್ಕೆ ಅನುಕೂಲ ಅವಧಿಯಾಗಿದೆ. ವಿದ್ಯಾರ್ಥಿಗಳು ತಮ್ಮ ಹೆಚ್ಚಿನ ಸಮಯವನ್ನು ವ್ಯಾಸಂಗಕ್ಕಾಗಿ ಕಾದಿರಿಸಬೇಕು. ಸುಖಾರ್ಥಿಗೆ ವಿದ್ಯೆಯೂ ವಿದ್ಯಾರ್ಥಿಗೆ ಸುಖವೂ ಎಂದೂ ಲಭಿಸಲಾರದು. ವಿದ್ಯಾರ್ಥಿಗಳು ವಿದ್ಯಾಲಂಕಾರ ಆಗಬೇಕೇ ಹೊರತು ಅಲಂಕಾರ ವಿದ್ಯಾರ್ಥಿಗಳಾಗಬಾರದು. ಇಷ್ಟು ಹೊತ್ತಿಗೆ ಏಳಬೇಕು. ಈ ವೇಳೆಗಳಲ್ಲಿ ಓದಬೇಕು ಬರೆಯಬೇಕು, ಈ ಕಾಲದಲ್ಲಿ ಇಷ್ಟೇ ಎಂದು ತಿನ್ನಬೇಕು, ಈ ಸಮಯದಲ್ಲಿ ಉಚಿತವರಿತು ವ್ಯಾಯಾಮ ಮಾಡಬೇಕು, ವಿಶ್ರಾಂತಿ ಈ ಹೊತಿಗೆ, ಇಷ್ಟು ಹೊತ್ತಿಗೆ ನಿದ್ದೆ ಎಂದು ಮುಂತಾಗಿ ವಿದ್ಯಾರ್ಥಿಗಳು ತಮಗೆ ತಾವೇ ನಿಯಮಿಸಿಕೊಳ್ಳಬೇಕು. ಅದರಂತೆ ನಡೆಯಬೇಕು. ಹೀಗೆ ಕ್ಲಿಪ್ತತೆಯನ್ನು ಪರಿಪಾಲಿಸಿದಲ್ಲಿ ಕಾಲವು ನಮಗೆ ತನ್ನಷ್ಟಕ್ಕೇನೇ ವಿಧೇಯವಾಗುತ್ತದೆ. ಯಾವ ಕೆಲಸ ನಮ್ಮ ಪಾಲಿಗೆ ಬಂದರೂ ಇದರಿಂದ ತನಗೆ ದೊರೆಯುವ ಪ್ರತಿಫಲ ಎಷ್ಟು ಎಂದು ನೋಡಬಾರದು. ಕೆಲಸ ಪರಿಷ್ಕಾರವಾಯಿತೇ, ಮಾಡಿದ್ದು ನನಗೆ ತೃಪ್ತಿಯಾಯಿತೇ ಎಂದು ನೋಡಬೇಕು. ಪಾಲಿಗೆ ಬಂದ ಕೆಲಸವನ್ನು ನಿರ್ವಹಿಸಲು ನಮಗೆ ಏನು ಅವಕಾಶ ಒದಗುತ್ತದೆಯೋ, ಅದಕ್ಕೆ ಬೇಕಾದ ಶಕ್ತಿ ನಮಗೆ ಎಷ್ಟು ಇರುತ್ತದೆಯೋ ಅದೆಲ್ಲ

ವನ್ನು ಬಳಸಿಕೊಂಡು ನಿರ್ವಂಚನೆಯಿಂದಲೂ, ಶ್ರದ್ಧೆಯಿಂದಲೂ, ಪ್ರಾಮಾಣಿಕತೆಯಿಂದಲೂ, ಆಸಕ್ತಿಯಿಂದಲೂ ನಗುಮುಖದಿಂದ ನಡೆಸಬೇಕು. ಗೊಣಗಬಾರದು. ಅಸಡ್ಡೆ, ಆಲಸ್ಯಗಳನ್ನು ಎಂದೂ ಮಾಡಬಾರದು. ಎಲ್ಲಾ ಕಾರ್ಯಗಳಲ್ಲೂ ಅಚ್ಚುಕಟ್ಟುತನ ಎದ್ದು ಕಾಣಬೇಕು. ಉಡುಪು. ಓದು ಬರಹ, ಮಾತು ಕತೆ, ಎಲ್ಲವೂ ಸ್ವಚ್ಛವಾಗಿರಬೇಕು, ಒಪ್ಪವಾಗಿರಬೇಕು. ಶಾಲೆಯಲ್ಲಿ ಗುರುಗಳ ಮೇಲೆ, ಮನೆಯಲ್ಲಿ ಹಿರಿಯರ ಮೇಲೆ, ಎಲ್ಲಾ ಸಂಧರ್ಭಗಳಲ್ಲಿ ದೇವರ ಮೇಲೆ ಅನನ್ಯವಾದ ಭಕ್ತಿ ಭಾವಗಳನ್ನಿಡಬೇಕು. ಗುರುಭಕ್ತಿಯು ವಿದ್ಯಾರ್ಥಿಗಳನ್ನು ಅತ್ಯುಚ್ಛ ಮಟ್ಟಕ್ಕೆ ಒಯ್ಯುವುದರಲ್ಲಿ ಸಂದೇಹವಿಲ್ಲ. ಮನುಷ್ಯನು ತನ್ನ ಪ್ರಾಯದ ಪ್ರಥಮ ಭಾಗದಲ್ಲಿ ವಿದ್ಯೆಯನ್ನು ಪ್ರಯತ್ನಶೀಲನಾಗಿ ಕಲಿತುಕೊಳ್ಳದಿದ್ದರೆ. ಅಂಥ ಸಂದರ್ಭವೇ ಆತನಿಗೆ ಮುಂದಕ್ಕೆ ಸಿಗಲಾರದು. ಶಾಲೆಯ ಒಳಗೂ ಹೊರಗೂ ಒಳ್ಳೆಯವರ ಸ್ನೇಹ, ಒಡನಾಟಗಳನ್ನು ಬಯಸಬೇಕು. ಕೆಲಸವಿಲ್ಲದೆ ಎಲ್ಲಿಗೂ ಹೋಗಬಾರದು. ಮಾತುಹಿತ, ಮಿತ, ಮಧುರವಾಗಿರಬೇಕು· ವಿಲಾಸಿಯಾಗಬಾರದು ನಿರಾಡಂಬರದ ಸರಳ ಜೀವನ ಅಭ್ಯಾಸ ಮಾಡಬೇಕು. ಆಟಪಾಠಗಳಲ್ಲಿ ಸಮಾನ ಉತ್ಸುಕತೆ, ವಿರಾಮಕಾಲದಲ್ಲಿ ಉತ್ತಮ ಆದರ್ಶ ನೀತಿ ಬೋಧಕ, ಪಾರಮಾರ್ಥಿಕ, ದೇಶಭಕ್ತರ ಸಾಹಿತ್ಯ ಗ್ರಂಥಗಳನ್ನು ಮಗುಚುತ್ತಿರಬೇಕು. ಶಾಲಾ ನಿಯಮೋಲ್ಲಂಘನೆ ಮಾಡಬಾರದು. ಸರಕಾರದ ಇಲಾಖಾ ಕಾನೂನುಗಳನ್ನು ಮುರಿಯಲು ಯತ್ನಿಸಬಾರದು. ರಾಜಕೀಯದಲ್ಲಿ ವಿದ್ಯಾರ್ಥಿಗಳು ಸರ್ವಥಾ ಭಾಗವಹಿಸಬಾರದು, ಪ್ರೀತಿ ಒಗ್ಗಟ್ಟುಗಳಿಂದ ಬಾಳಲು ಕಲಿಯಬೇಕು. ಸೇವಾಮನೋವೃತ್ತಿ ಅಭ್ಯಸಿಸಬೇಕು. ಒಳ್ಳೆಯ ಕೆಲಸಗಳನ್ನು ಮಾಡುತ್ತಿರಬೇಕು, ಸಮಾಜ ಕೆಲಸಗಳನ್ನು ಪ್ರೋತ್ಸಾಹಿಸಬೇಕು ಕಲಿತ ಶಾಲೆಯನ್ನು ಎಂದೂ ಮರೆಯಬಾರದು. ಕಲಿಸಿದ ಗುರುಗಳನ್ನು ನಿರಂತರ ಮನ್ನಿಸಬೇಕು. ಶಾಲಾಭಿವೃದ್ಧಿಗಾಗಿ ಹಾತೊರೆಯುತ್ತಿರಬೇಕು.

**ಅಧಿಕಾರಿ ವರ್ಗ :**

ಶಿಕ್ಷಣಾಭಿವೃದ್ಧಿ ಕ್ಷೇತ್ರದಲ್ಲಿ ಸಂಬಂಧ ಪಟ್ಟ ಅಧಿಕಾರಿಗಳ ಪಾತ್ರ ಕಿರಿದಲ್ಲ. ಮೇಲ್ವನಿಚಾರಣೆ ಅಥವಾ ಪರೀಕ್ಷೆ ಮಾಡುತ್ತಿರುವ, ಅವಶ್ಯ ಹಿತ ಸೂಚನೆಗಳನ್ನು ನೀಡುತ್ತಿರುವ ಅಧಿಕಾರಿ ವರ್ಗವೂ ಬಹಳ ದಕ್ಷತೆಯಿಂದ ಕೆಲಸ ಮಾಡಿದರೆ ನಮ್ಮ ಶಿಕ್ಷಣಾಲಯಗಳು ಅಭಿವೃದ್ಧಿ ಹೊಂದುವುದರಲ್ಲಿ ಸಂದೇಹವಿಲ್ಲ. ಶಾಲೆಗೆ ಆಗಾಗ ಸಂದರ್ಶಿಸಿ, ಶಿಕ್ಷಕರಿಗೂ ರಕ್ಷಕರಿಗೂ ವಿದ್ಯಾರ್ಥಿಗಳಿಗೂ ಶೈಕ್ಷಣಿಕ ಹಿತೋಕ್ತಿಗಳನ್ನು ಕೊಡುತ್ತಿರಬೇಕು. ಅದಕ್ಕಾಗಿ ಸಂದರ್ಭವರಿತು ಶಿಕ್ಷಕ ರಕ್ಷಕ ಸಭೆಗಳಲ್ಲಿ ಭಾಗವಹಿಸಬೇಕು. ಅಧ್ಯಾಪಕರಿಗೆ ಮಾರ್ಗದರ್ಶಕರಾಗಬೇಕು. ಇಲಾಖೆಯಿಂದ ಹಾಗೂ ಸರಕಾರದಿಂದ ಸಿಗಬಹುದಾದ ಸವಲತ್ತು ಸೌಕರ್ಯಗಳನ್ನು ಶಾಲೆಗೂ ಅಧ್ಯಾಪಕರಿಗೂ ವಿದ್ಯಾರ್ಥಿಗಳಿಗೂ ಸಿಗುವಂತೆಮಾಡಬೇಕು. ಅಧ್ಯಾಪಕರ ಮೇಲೆ ಅಧಿಕಾರ ಪ್ರಯೋಗ ಶಾಲಾಭಿವೃದ್ಧಿಗೆ ಮಾರಕ. ಒಲಿಸಿ, ಒಪ್ಪಿಸಿ, ಸ್ನೇಹ ಚರ್ಯೆಯಿಂದ ಆಗುವಷ್ಟು ಕೆಲಸ ದಬ್ಬಾಳಿಕೆಯಿಂದ ಎಂದೂ ಆಗುವುದಿಲ್ಲ. ಸರಕಾರದ ಮತ್ತು ಇಲಾಖೆಯ ಧ್ಯೇಯ ಧೋರಣೆ ಕಾನೂನುಗಳನ್ನು ಅಧ್ಯಾಪಕರಿಗೆ ಸರಿಯಾಗಿ ಸಕಾಲದಲ್ಲಿ ತಿಳಿಯಪಡಿಸಿ ಶಿಕ್ಷಣಾಭ್ಯಾಸವು ಪೂರ್ಣಯಶಸ್ವಿಯಾಗುವಂತೆ ನೆರವಾಗಬೇಕು. ಅಧಿಕಾರಿಗಳು ಶಾಲಾಡಳಿತದ ಕುರಿತಾಗಿ ಪಾಠಪ್ರವಚನಗಳ ಕುರಿತಾಗಿ ಇಲಾಖೆಯ ಹಾಗೂ ಸರಕಾರದ ಕಾನೂನು ನಿಯಮಗಳನ್ನು ಸರಿಯಾಗಿ ಅಭ್ಯಸಿಸಿ ಅರಗಿಸಿಕೊಂಡಿರಬೇಕು. ಮಕ್ಕಳಿಗೆ ಮಾದರಿ ಪಾಠವನ್ನು ಯಾವ ವಿಷಯದಲ್ಲಾದರೂ, ಯಾವ ಸಂದರ್ಭದಲ್ಲಾದರೂ ಪ್ರದರ್ಶಿಸಿ, ಅಧ್ಯಾಪಕರಿಗೆ ಮಾರ್ಗದರ್ಶನ ನೀಡಲು ಸಮರ್ಥರಿರಬೇಕು. ಶಾಲಾಭಿವೃದ್ಧಿ ದೆಸೆಯಲ್ಲಿ ಕಟ್ಟಡ ನಿರ್ಮಾಣ, ಭೋಧನೋಪಕರಣಗಳ ಪೂರೈಕೆ ಇತ್ಯಾದಿಗಳಲ್ಲಿ ಸರಕಾರದಿಂದ ಸಿಗಬಹುದಾದ ಧನಸಹಾಯ ಪಡೆಯುವಲ್ಲಿ ತಕ್ಕ ಕಾರ್ಯಕ್ರಮ ಕೈಗೊಳ್ಳಬೇಕು.

**ರಕ್ಷಕ ವರ್ಗ :**

ಶಿಕ್ಷಣ ಕ್ಷೇತ್ರದಲ್ಲಿ ಮಕ್ಕಳ ಪಾಲಕರ ಪಾತ್ರವೂ ಮಹತ್ವದ್ದಾಗಿದೆ. ಈಗಿನ ವಾತಾವರಣದಲ್ಲಿ ತಮ್ಮ ಮಕ್ಕಳಿಂದಾಗುವ ತಪ್ಪುಗಳನ್ನು ಕೆಲ ರಕ್ಷಕರು ಅರಿತುಕೊಳ್ಳದೆ ಮಕ್ಕಳ ಸಮ್ಮುಖದಲ್ಲಿ ಶಿಕ್ಷಕರನ್ನು ನಿಂದಿಸುವ ಪರಿಪಾಠವಿದೆ. ಇದು ತಿಳುವಳಿಕೆ ಇಲ್ಲದ ರಕ್ಷಕರ ವರ್ತನೆಯಾದರೂ ಇದರಿಂದ ಅವರ ಮಕ್ಕಳ ಮೇಲೆ

ಹೆಚ್ಚಿನ ದುಷ್ಪರಿಣಾಮ ಉಂಟಾಗುತ್ತದೆ. ಅಂತಹ ಮಕ್ಕಳಿಗೆ ಉಪಾಧ್ಯಾಯರ ಮೇಲೆ ಭಕ್ತಿ ವಿಶ್ವಾಸ ಇಲ್ಲದಂತಾಗಿ ವಿದ್ಯಾಭಿಮಾನ ಕುಂಠಿತವಾಗಿ ಭವಿಷ್ಯವು ಉಜ್ವಲವಾಗುವ ಬದಲು ಅಧೋಗತಿಗೆ ತಳ್ಳಲ್ಪಡುತ್ತದೆ. ಆದುದರಿಂದ ರಕ್ಷಕರು ತಮ್ಮ ಮಕ್ಕಳ ಭವಿಷ್ಯವನ್ನು ಯೋಚಿಸಿಕೊಂಡು ಶಿಕ್ಷಕರೊಡನೆ ಅನ್ಯೋನ್ಯದಿಂದಿರಬೇಕು. ತಮ್ಮ ಮಕ್ಕಳ ಅಭಿವೃದ್ಧಿ ಕುರಿತಾಗಿ ನಡೆತೆಯ ಕುರಿತಾಗಿ, ಹಾಜರಿ ಕುರಿತಾಗಿ ವಿಚಾರಿಸುತ್ತಿರಬೇಕು. ಶಾಲೆಯಲ್ಲಿ ಜರಗುವ ಹಬ್ಬ ಹರಿದಿನಗಳಲ್ಲಿ ಪಾಲಕರು ಭಾಗವಹಿಸಿ ತಮ್ಮ ಮಕ್ಕಳ ಪ್ರಗತಿಯನ್ನು ಪರಿಶೀಲಿಸಿ ಪ್ರೋತ್ಸಾಹಿಸಬೇಕು. ಶಾಲಾಭಿವೃದ್ಧಿ ಕಾರ್ಯಗಳಲ್ಲಿ ಶಿಕ್ಷಕರೊಡನೆ ಸಮಾಲೋಚಿಸಿ ದುಡಿಯುತ್ತಿರಬೇಕು. ರಕ್ಷಕರು ಶಾಲಾಭಿವೃದ್ಧಿಗಾಗಿ ಶ್ರಮಿಸಿದರೆ ತಮ್ಮ ಮಕ್ಕಳ ಅಭಿವೃದ್ಧಿಗಾಗಿ ಶ್ರಮಿಸಿದಂತೆ ಆಗುವುದರಲ್ಲಿ ಸಂದೇಹವಿಲ್ಲ. ಸರಕಾರ ಹಾಗೂ ಇಲಾಖೆಯೊಡನೆ ರಕ್ಷಕರು ಶಾಲಾಭಿವೃದ್ಧಿಗಾಗಿ ಸಂಪರ್ಕ ಇಟ್ಟುಕೊಳ್ಳಬೇಕು. ಪರ ಊರಿನಿಂದ ವರ್ಗವಾಗಿ ಬಂದ ಶಿಕ್ಷಕರಿದ್ದಲ್ಲಿ ಅನುಕೂಲ ವಾಸ್ತವ್ಯ ಸೌಕರ್ಯಗಳನ್ನು ಒದಗಿಸುವುದರ ಮೂಲಕ ಅವರನ್ನು ಪ್ರೋತ್ಸಾಹಿಸಬೇಕು. ವಿದ್ಯಾಸಂಸ್ಥೆಯ ಒಳಿತು ಕೆಡಕು ಊರ ಜನತೆಯನ್ನೇ ಅಥವಾ ಮಕ್ಕಳ ಪಾಲಕರನ್ನೇ ಹೊಂದಿಕೊಂಡಿದೆ ಎಂದರೆ ಅತಿಶಯೋಕ್ತಿಯಲ್ಲ.

ಸರಕಾರ :

ಶಿಕ್ಷಣ ಕ್ಷೇತ್ರದ ಕಾರ್ಯಭಾಗದಲ್ಲಿ ಸರಕಾರದ ಹೊಣೆಯೂ ಕಿರಿದಲ್ಲ. ಶಾಲಾ ಕಟ್ಟಡ ರಚಿಸುವಲ್ಲಿ ಆಟದ ಬಯಲಿನ ನಿರ್ಮಾಣದಲ್ಲಿ, ಶೌಚಾಗಾರ ಒದಗಿಸುವಲ್ಲಿ, ಕುಡಿಯುವ ನೀರು ಪೂರೈಸುವಲ್ಲಿ. ದುರಸ್ತಿ ಕಾರ್ಯಗಳಲ್ಲಿ, ಭೋಧನೋಪಕರಣ, ಪೀಠೋಪಕರಣ, ಗ್ರಂಥಾಲಯ ಇತ್ಯಾದಿ ಅವಶ್ಯ ಪೂರೈಕೆಗಳನ್ನು ಈಡೇರಿಸುವಲ್ಲಿ ಸರಕಾರವು ಸಾಕಷ್ಟು ಮುಂದಾಗಬೇಕು. ಅಧ್ಯಾಪಕರ ನೇಮಕಾತಿ, ವರ್ಗಾವಣೆ ಮುಂತಾದುವುಗಳನ್ನು ಶಾಲಾ ಹಿತವರಿತು ಗಮನಿಸಬೇಕು, ಶಾಲಾಭಿವೃದ್ಧಿ ದೆಸೆಯಲ್ಲಿ ಶಿಕ್ಷಣ ತಜ್ಞರ ಸಮಿತಿಯ ಸಲಹೆ ಪಡೆಯುತ್ತಿರಬೇಕು. ಕಾಲಕ್ಕನುಗುಣವಾಗಿ ಶಿಕ್ಷಣ ವಿಷಯಗಳನ್ನು ಬದಲಿಸುತ್ತಿರಬೇಕು. ಜೀವನ ಸಾಗಿಸಲು ಅಗತ್ಯವಾದ ವೃತ್ತಿ ಶಿಕ್ಷಣವನ್ನು ಬಳಕೆಗೆ ತರುವಲ್ಲಿ ಯೋಚಿಸಬೇಕು. ಯಾವುದೇ ಶಿಕ್ಷಣ ಪದ್ಧತಿಯು ಜೀವನ ನಿರ್ವಹಣೆಯ ಗುರಿಯಾಗಿರಬೇಕು. ವಿವಿಧ ವಿಷಯಗಳಿಗೆ ಸಂಬಂಧಿಸಿದ ಯೋಗ್ಯ ಪಠ್ಯ ಪುಸ್ತಕಗಳು ಸಕಾಲದಲ್ಲಿ ಒದಗುವಂತಾಗಬೇಕು. ಸುಧಾರಿತ ಶಿಕ್ಷಣ ಪದ್ಧತಿ ಜಾರಿಗೆ ತರುವಾಗ ಮುಂದುವರಿದ ರಾಷ್ಟ್ರಗಳ ಶಿಕ್ಷಣ ಕ್ರಮಗಳನ್ನು ಗಮನಿಸುವುದು ಅನಿವಾರ್ಯ. ಪಠ್ಯ ಪುಸ್ತಕ ರಚನಾ ಸಮಿತಿಯಲ್ಲಿ ಅಧ್ಯಾಪಕ ಪ್ರತಿನಿಧಿಗಳಿಗೆ ಅವಕಾಶ ಇರುವುದು ಉತ್ತಮ. ಪ್ರತಿಭಾವಂತರು ಪರದೇಶಗಳಲ್ಲಿ ಉದ್ಯೋಗಿಗಳಾಗುವುದನ್ನು ಸರಕಾರವು ನಿಷೇಧಿಸಬೇಕು.

ಈ ಮೇಲಿನ ವಿಷಯಗಳನ್ನು ಕೂಲಂಕುಶವಾಗಿ ಗಮನಿಸಿ ಕಾರ್ಯಪ್ರವೃತ್ತರಾಗುವುದರಿಂದ ಶಾಲೆಯು ಜನಪ್ರಿಯವಾಗುವುದರಲ್ಲಿ ಸಂದೇಹವಿಲ್ಲ.



# ವಿಚಿತ್ರ ಸತ್ಯ

—ಟಿ. ಎಮ್. ಪೊಣ್ಣಪ್ಪ
ಬಿ. ಇ. ಎಲ್. ಬೆಂಗಳೂರು

---

ಕಳ್ದ ವರ್ಷ ನಾವು ನಾಲ್ಕ್ ಜನ ಫ್ರೆಂಡ್ಸ್‌ಗ ಒಟ್ಟಿಗೆ ಸೇರಿ ಮಾತಾಡಿಕಂಡೊ ನಾವು ನಾಲ್ಕ್ ಜನನೂ ಒಂದ್ ವರ್ಷ ಗಡ್ದ ಬುಡೊವೊ. ಒಂದು ವರ್ಷದವರೆಗೆನೂ ಗಡ್ಡ ಮೀಸೆ ತೆಗೆಕೆ ಬೊತ್ತ್. ಈ ಒಪ್ಪಂದಲಿ ನಾಲ್ಕ್ ಜನನೂ ಗಡ್ಡ ತೆಗಿಯದೆ ಹಂಗೆನೆ ಇದ್ದೊ. ಅಂತೂ ಒಂದ್ ವರ್ಸ ಆದ ಕೂಡ್ಲೆ ಪುನ ಮಾತಾಡಿಕಂಡೊ ಫೋಟೊ ಒಂದ್ ಒಟ್ಟಿಗೆ ತೆಗ್ಸ್ಯೊವೊಂತ. ಈ ಗಡ್ಡ ಬುಟ್ಟದಕ್ಕೆ ನಮ್ಮ ಮನೆ ಹೆಂಗ್ಸ್‌ಗಳ್ಂದ ಬೇಕಾದಸ್ಟ್ ನಾವು ಬೇರೆ ಬೊಯಿಸಿ ಕಂಡೊಳೊ. ಅಂತೂ ಇಂತೂ ಒಂದ್ ವರ್ಷ ಆದ ಕೂಡ್ಲೆನೆ ಎವಿನ್ಯೂ ರೋಡ್‌ಲಿದ್ದ ಒಂದ್ ಫೋಟೊ ಸ್ಟುಡಿಯಕ್ಕೆ ಹೋದೊ. ಅಲ್ಲಿ ಫೋಟೊತೆಗಂವಂಗೆ ಹೇಳ್ದೊ, ನಮ್ಮ ಗಡ್ಡ ಮೀಸೆ ಫೋಟೊಲಿ ಬಾರಿ ಲ್ಯಾಕ್ ಬರೊಕುಂತ. ಅಂವ ಒಪ್ಪಿಕಂಡ್ ಹಾಂಗೆ ಕುದ್ರಿ. ಹೀಂಗೆ ಕುದ್ರಿ, ಮೇಲೆ ನೋಡಿ, ಅಲ್ಲಿ ನೋಡಿಂತ ಹೇಳಿ ನಾವ್ಗ ಬೊಚ್ಚುವಲ್ಲಿವರೆಗೆ ಹೇಂಗೊ ಕುದ್ರಿಸಿ ಬಂದು ಲೈಟ್ ಹಾಕಿ ಬಂದ್ ಫೋಟೊ ಹೊಡ್ತ್. ಎಡ್ವಾನ್ಸ್ ಬೇರೆ 20 ರೂ ತಕಂಡಿತ್ತ್ ನಮ್ಮ ಕೈಂದ ಇನ್ನ್ ಐದ್ ದಿನ ಬುಟ್ ಬಂದರೆ ಫೋಟೊ ನಾಲ್ಕ್ ಕೋಪಿನೂ ಕೊಟ್ಟವೆಂತ ಹೇಳ್ತ್. ಹಾಂಗೆ ಐದ್ ದಿನನೆ ಬುಟ್ಟ್ ಫೋಟುತಾಕೆಂತ ಬಸ್ ಹತ್ತಿ ನಾವೆಲ್ಲವೂ ಹೋದೊ. ಆದರೆ ನಾವು ಫೋಟೊ ತೆಗ್ದ ಮೂರಣೆ ದಿನನೆ ಗಡ್ಡ ತೆಕ್ಕೊಂಡೊಳೊ. ಇಲ್ಲದಿದ್ದರೆ ಮನೆವರ ಬ್ಯೊಗಳ್ಳಿ ಬೊತ್ತ್.

ಸ್ಟೊಡಿಯಕ್ಕೆ ಹೋಕನ ನಮ್ಮ ಕಂಡ ಕೂಡ್ಲೆ ಸ್ಟುಡಿಯೊದಂವ ಮೋರೆ ಕಪ್ಪ್ ಮಾಡಿಕಂಡ್ ಕುದ್ದಿತ್ತ್, ನಾವ್ಗೊ ಎಂತಕೆಂತ ಆಗ ಗೊತ್ತಾತ್ಲೆ. ಮತ್ತೆ ಅಂವನೇ ಹೇಳ್ತ್ ಬೇಜಾರ್ ಮಾಡಿಕೋಳ್ ಬೇಡಿ ಸಾರ್ ಮೊನ್ನೆ ಫೋಟೊ ತೆಗೆಯುವಾಗ ಕೆಮರದ ಒಳಗೆ ರೀಲ್ ಹಾಕಕ್ಕೆ ಮರೆತ್ತು ಬಿಟ್ಟಿದೆ ಸಾರ್‌ಂತ ಹೇಳ್ತ್. ನಮ್ಮ ಅಸೆ ನಿರಾಸೆ ಆತ್ತೊ ?



# ಹರಟೆ

ಯಂ. ಯಂ. ಗಿರಿ ಮಲ್ಲಾರ
ಸುಳ್ಯ ದ. ಕ.

ಶ್ರೀ ಗಿರಿಯವರು ಈ ಲೇಖನವನ್ನು ಹರಟೆಯೆಂದು ಕರೆದಿರಬಹುದು. ಆದರೆ ಶ್ರೀ ಗಿರಿಯವರ ಒಂದೊಂದು ಶಬ್ಧವೂ ಅರ್ಥ ಗರ್ಭಿತವಾಗಿದ್ದು ಸಮಾಜದಲ್ಲಿ ವ್ಯಕ್ತಿಯ ಮನಸ್ಸಿನ ಕಲ್ಪನೆಯೇ ಎಲ್ಲದಕ್ಕೂ ಕಾರಣವೆಂಬ ಸಾರಾಂಶದಲ್ಲಿ ಈ ಲೇಖನ ವನ್ನು ಬರೆದಿದ್ದಾರೆ. ನಮ್ಮ ಸಮಾಜದಲ್ಲಿ ಈ ರೀತಿಯಾಗಿ ಚಿಂತನೆ ಮಾಡುವವರು ಬಹಳ ವಿರಳವಾಗಿದ್ದಾರೆ. ಎಲ್ಲಿ ನೋಡಿದರೂ ಆಸ್ತಿ ಪಾಸ್ತಿ ಸಮಾಜದಲ್ಲಿ ಸ್ಥಾನ ಮಾನ ಅಧಿಕಾರದ ಕಡೆಗೇ ಗಮನಹರಿಸುವವರೆ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ ಹೊರತು, ಶ್ರೀ ಯಂ. ಯಂ. ಗಿರಿಯವರಂತೆ ಅಧ್ಯಾತ್ಮಿಕ ಹಾಗೂ ಆತ್ಮ ಜ್ಞಾನದ ಬಗ್ಗೆ ಚಿಂತಿಸುವವರು ಬಹಳ ವಿರಳವಾಗಿದ್ದಾರೆ. ಶ್ರೀ ಗಿರಿಯವರ ಈ ರೀತಿಯ ಪ್ರಜ್ಞಾಪೂರ್ವಕವಾದ ಲೇಖನ ಸಮಾಜದ ಎಲ್ಲಾ ಸದಸ್ಯರಿಗೆ ಮಾರ್ಗದರ್ಶನ ವಾಗಲಿ.—ಸಂ]

---

ಹರಟೆಗೆ, ವಸ್ತು ವಿಷಯಗಳಾಗಲೀ, ಜಾತಿವರ್ಣ ಗಳಾಗಲೀ, ಸ್ಥಾನ ಮಾನವಾಗಲೀ ಇಂತಿಂಥದೇ ಆಗ ಬೇಕೆಂದೇನೂ ಇಲ್ಲ. ಪ್ರಾಯಶಃ ಪ್ರಪಂಚದಲ್ಲಿ ಹರಟೆಯೊಂದೇ ಜಾತ್ಯಾತೀತ, ನಿಯಮಾತೀತವಾಗಿ ಇದ್ದರೂ ಇರಬಹುದು. ನಾವು ಕಣ್ಣು, ಕಿವಿ, ತೆರೆದಿ ಟ್ಟಾಗ ನಮ್ಮ ಸುತ್ತಲಿನ ವಾತಾವರಣದಿಂದ ನಮಗೆ ಆಕ್ರಮಣಗಳಾಗುತ್ತವೆ. ನಾವೆಷ್ಟು ಆಮದು, ರಫ್ತು ಮಾಡುತ್ತಿದ್ದೀವಂತ ಒಂದೊಮ್ಮೆ ಚಿಂತಿಸಿಕೊಂಡಿ ದ್ದೀರಾ? ನಾವು, ಬೇಡ—ನಾನೆಂತಲೇ, ನನ್ನನ್ನು ನಾನು ಕರೆದುಕೊಳ್ಳುತ್ತೇನೆ. ಏಕೆಂದರೆ, ಈ ಲೋಕ ದಲ್ಲಿ ನಾನೇ ನನ್ನ ಮೊದಲ ಕೇಂದ್ರ — ಇಲ್ಲಿಂದ ಎಲ್ಲಾ ಅಲೆಗಳೂ ವಿಸ್ತರಿಸಬಲ್ಲುದಷ್ಟೆ. ನಾನಾದ ಮೇಲೆ ನನ್ನ ಮನೆಯವರು—ಪರಿಸರದವರು—ಊರಿ ನವರು—ರಾಜ್ಯದವರಂತೆ ಪರಿಗಣನೆ—ಈಗ ನೋಡಿ, ನನ್ನನ್ನು ವ್ಯಕ್ತಿಯೆಂತಲೂ—ಸುತ್ತಲಿನವರನ್ನೆಲ್ಲಾ ಸಮಾಜವೆಂತಲೂ, ಹಿಂದೆ, ಎಂದೋ? ಯಾರೋ? ನಾಮಕರಣ ಮಾಡಿರುವುದು ಸರಿಯೋ? ತಪ್ಪೋ? ಪ್ರತಿತವಾಗಿರುವುದಂತೂ ನಿಶ್ಚಿತ—ಹುಟ್ಟಿನಿಂದ—ಹಿಡಿದು ಮರಣದವರೆಗೂ, ಈ ಸಂಕೀರ್ಣತೆ ಜನ ಜೀವನ ದಲ್ಲಿ ಹಾಸು ಹೊಕ್ಕಾಗಿರುವುದು ಸತ್ಯ—ನಾವು ಬಚ್ಚಲು ಮನೆಯಲ್ಲಿ ಹುಟ್ಟುಡುಗೆಯಲ್ಲಿದ್ದವರು, ಭಾಗಿಲು ದಾಟಿ ಬೀದಿಗಿಳಿಯುವಾಗ ಬಟ್ಟೆ ತೊಟ್ಟು, ಮೈ ಮುಚ್ಚಿಕೊಳ್ಳಬೇಕಾಗಿದೆ. ಸಮಾರಂಭಗಳ ಸೇರ್ಪಡೆಗೆ ಸಾಕಷ್ಟು ಸಿಂಗರಿಸಿಕೊಂಡೇ ಹೋಗಬೇಕಾಗಿದೆ. ಇದಕ್ಕೆ ಸಾಮಾಜಿಕ ನಡತೆ, ಸಭ್ಯತೆ, ಗೌರವ ಇತ್ಯಾದಿ ವಿಶೇಷಣ ಶಬ್ಧಗಳನ್ನು ನಾವೇ ಹುಟ್ಟು ಹಾಕಿರುತ್ತೇವೆ. ಒಟ್ಟಿನಲ್ಲಿ ವ್ಯಕ್ತಿ ಮತ್ತು ಸಮಾಜವೆಂಬ ಎರಡು ದಡ ಗಳ ಮಧ್ಯೆ ನಮ್ಮ ಜೀವನದ ತೊರೆ ನಿರಂತರ ಹರಿಯು

ತ್ತದೆ. ಇದು ವಾಸ್ತವಿಕ. ಎರಡು ಇದ್ದಲ್ಲಿ ಸಹಜವಾಗಿಯೇ ಅವುಗಳಿಗೆ ಸಂತಾನ, ಸೌಭಾಗ್ಯವಿದ್ದೇ ಇರುತ್ತದೆ. ಪ್ರೀತಿ, ಅಸೂಯೆ_ದ್ವೇಷಗಳೇ ಅವುಗಳ ಸಂತತಿ. ಇದು ಎಷ್ಟು ತುಂಬಿದೆಯೆಂದರೆ, ನೀವು ಒಂದು ಕ್ಷಣ ನಿರ್ಲಿಪ್ತರಾಗಿ ಚಿಂತಿಸಿದರೆ ಕಾಣಬಹುದು. ಪ್ರತಿ ವ್ಯಕ್ತಿಯೂ ಬೆಳೆಯುತ್ತಾ ಬಂದಂತೆ; ತಂದೆ ತಾಯಿಯರದ್ದೊ, ಗುರು ಭೋದನೆಯಿಂದಲೋ, ಧರ್ಮವೇತರದ್ದೋ? ಸರಕಾರದ ನಿಬಂಧನೆಗಳಿಂದಲೋ ಪ್ರಭಾವಿಸಲ್ಪಟ್ಟ ಭಾವನೆಗಳೇ ಅವನಲ್ಲಿ ತುಂಬಿರುವುದಲ್ಲದೆ, ಆ ವ್ಯಕ್ತಿಯ ನೈಜ ಭಾವನೆ ದೊರಕುವುದು: ದುರ್ಲಭವೆನ್ನುವಷ್ಟು ಕಲೆಬೆರಕೆಯಾಗಿರುವುದನ್ನು ನಾವು ಒಪ್ಪಿಕೊಳ್ಳಲೇ ಬೇಕು. ಇದನ್ನು ವೈಜ್ಞಾನಿಕರು, ವಿಕಾಸವೆನ್ನಬಹುದು. ದಾರ್ಶನಿಕರು ಪ್ರಕೃತಿಯ ಒಳುತಂಬುವಿಕೆಯಂತ ಹೇಳಬಹುದು. ಸಾಮಾನ್ಯ ನಾಗರಿಕರು ಸಭ್ಯತೆಯಂತ ಕರೆಯಬಹುದು. ಇಂತಾದರೆ ವ್ಯಕ್ತಿಯ ವೈಶಿಷ್ಟ್ಯ, ಕೇವಲ ಸಮಾಜವು ತಯಾರಿಸುವ ಮೇಣದ ಬೊಂಬೆಗಳ ಪಾತ್ರವೋ? ವ್ಯಕ್ತಿ_ವ್ಯಕ್ತಿಗಳ ಬದುಕು, ಬಾಳಿನ ಛಾಯೆಯೇ ಸಮಾಜವೋ? ಎಂಬ ಸರಳ ಪ್ರಶ್ನೆಯನ್ನು ನೀವೊಮ್ಮೆ ಪ್ರಶ್ನಿಸಿ ಕೊಳ್ಳುವಿರಾ? ವ್ಯಕ್ತಿಗಳ ಏಳು, ಬೀಳುಗಳನ್ನನುಸರಿಸಿಯೇ ಸಮಾಜದ ಅಸ್ತಿತ್ವದ ಅಂಗೀಕಾರವಾದರೆ ವ್ಯಕ್ತಿಗಳ ಸಮೂಹದ ನೆರಳಿನ ಛಾಯೆಯೇ ಸಮಾಜ ಎನ್ನಬೇಕಾಗಿದೆ. ಹಾಗಿದ್ದರೆ ಸಮಾಜಕ್ಕೆ ಚಲನೆಯಿಲ್ಲ ವ್ಯಕ್ತಿಗಳ ಚಲನೆಯ ಅನುಕರಣೆ ಮಾತ್ರ. ಇದಲ್ಲದೆ ಸಮಾಜವೋ, ಸರಕಾರವೋ ವಿಕಾಸವಾಗುತ್ತಾ ಅಭಿವೃದ್ಧಿಯಾಗುವಂತಿದ್ದರೆ ಅವುಗಳ ಕಟ್ಟು ಪಾಡುಗಳ ಕಾರಾಗೃಹದ ಆವರಣದೊಳಗೇನೇ ಈ ವ್ಯಕ್ತಿಗಳ ಆಟ-ಪಾಠ–ಓಟಗಳ ಕಾರ್ಯ ನಡೆಯಬೇಕಾಗಿದೆ. ಹಾಗಿದ್ದರೆ ಸಮಾಜದಲ್ಲೋ, ದೇಶದಲ್ಲೋ. ಜನಜೀವನ ಇನ್ನಷ್ಟು ಸುಧಾರಣೆಯಾಗಬೇಕಿದ್ದರೆ ಯಾವ ಸ್ಥಳದಿಂದ ಕ್ರಾಂತಿಮೂಡಬಿಡಬೇಕು. ಈ ವಾದ ಪ್ರತಿವಾದಗಳ ಜಿಜ್ಞಾಸೆಗೆ ತೀರ್ಪು ಕೊಡುವವರು ಯಾರು? ಈ ತೆರನ ಸುತ್ತು ಸರಪಳಿಯ ಕುಣಿಕೆಗಳನ್ನು ಗಣಿಸಲು, ನನ್ನಂತಹ, ಹರಟೆ ಮಲ್ಲನಿಗಲ್ಲದೆ ನಿಮ್ಮಂತಹ ಕಾರ್ಯಶೀಲರಿಗೆ ಸಮಯ ಸಾಕಾಗದಂತೆ ಭಾವಿಸಿಯೇ ಈ ಜನ ಜೀವನದ ಅಭಿವೃದ್ಧಿ ನಿಶಾನಿಯ ಒಳ ಗುಟ್ಟನ್ನು ಹರಡಲಿಚ್ಛಿಸುತ್ತೇನೆ. ಈಗ ನೋಡಿ ನಮ್ಮ ಪೂರ್ವಜರು ನಡೆದು ಬಂದ ಹಾದಿಯನ್ನು ಅವಲೋಕಿಸುತ್ತಾ ಇಂದು ನಾವಿರುವ ಸ್ಥಳಕ್ಕೆ ಮುಟ್ಟಿದಾಗ, ಋಜು ದೃಶ್ಯಗಳಿಂದ ವ್ಯಕ್ತಿ ವೈಶಿಷ್ಟ್ಯತೆಗನುಸರಿಸಿಯೇ ಸಮಾಜದ ರೂಪು ರೇಖೆಗಳು ಬದಲಾಗಿರುವುದನ್ನು ಕಾಣಬಹುದು. ಹಿಂದೆ ಎಂದೋ ಒಬ್ಬ ಚಿಂತನ ಶೀಲ ವ್ಯಕ್ತಿಗೆ ತನ್ನ ಶರೀರದ ಉಳಿವಿಗಾಗಿ ನಿರಂತರ ಉಸಿರಿನ ಗಾಳಿ, ನೀರು ಆಹಾರ. ನಿದ್ರೆಗಳ ಅನಿವಾರ್ಯತೆಗಳನ್ನು ಕಂಡು ಈ ಶ್ರಮದಿಂದ ಬಿಡುಗಡೆಯಾಗಿ ಪ್ರಕೃತಿ ನಿಯಮಗಳನ್ನು ಮೀರಿದ ಕರ್ತನೊಬ್ಬ ಇರುತ್ತಾನೆಯೋ ಯೆಂಬ ತೀವ್ರ ಹುಡುಕಾಟವೆ. ದೇವರನ್ನು ಮನುಷ್ಯ ಸೃಷ್ಟಿಸಿಕೊಳ್ಳಲು ಸಾಧ್ಯವಾಯ್ತು. ಬರಬರುತ್ತಾ ಅದು ಸಮಾಜದಲ್ಲಿ ತಮ್ಮ ಎಲ್ಲಾ ಕಷ್ಟ_ನಷ್ಟಗಳ ಬಿಡುಗಡೆಗೆಂದು ನಂಬಿಸುತ್ತಾ ನಂಬುತ್ತಾ ದೇವರ–ಚರ್ಚು_ಮಸೀದಿ-ವಿಹಾರ–ಗುರುದ್ವಾರಗಳಲ್ಲಿ ನಿತ್ಯ ಪೂಜಾ ವಿಧಾನದವರೆಗೆ ಸಮಾಜದಲ್ಲಿ ಪ್ರತಿರೂಪ ಪಡೆದು ಬೆಳೆಯಿತು. ಅಷ್ಟೇಕೆ? ಇಂದು ಕಾಣಲಾರವೇ? ಪಟ್ಟಣದ ಸಿನೇಮಾ, ನಟ, ನಟಿಯುವರು ಮನರಂಜನೆಗಾಗಿ ಪ್ರದರ್ಶಿಸುವ ವೇಷ ಭೂಷಣಗಳು, ನಗರದ ತರುಣ, ತರುಣಿಯಲ್ಲಿ ಎಷ್ಟು ಬೇಗ ಉಡುಗೆ. ತೊಡುಗೆಗಳಿಗಾಗಿ ಸೇರಿಕೊಂಡು ಸಮಾಜದ ಒಪ್ಪಿಗೆಯನ್ನು ಗಳಿಸುತ್ತದೆ. ಅಷ್ಟೆ ಅಲ್ಲ ಒಂದೊಮ್ಮೆ ಮೂಲಭೂತ ನಂಬಿಕೆಗಳಂತ ಭಾವಿಸಿದ್ದ ನಡೆನುಡಿಯು ಕಾಲದೊಂದಿಗೆ ಸೇರಿ ಬದಲಾಗುತ್ತದೆ. ನಮ್ಮ ಪೂರ್ವಜರು ಹೊಸದಾಗಿ ಹುಟ್ಟುವ ಮಕ್ಕಳ ಆಹಾರಕ್ಕಾಗಿಯೇ ತಾಯಂದಿರ ಎದೆಯಲ್ಲಿ ಹಾಲಿನ ಚೀಲಗಳನ್ನು ಪ್ರಕೃತಿ ನಿರ್ಮಿಸಿದೆಯೆಂತ ಭಾವಿಸಿದ್ದರೋ ಅದು ಇಂದು ನವಸುಧಾರಣೆಯ ಹೊಡೆತಕ್ಕೆ ತಿರುಗಿ, ಮಗುವಿಗೆ ದನದ ಕೆಚ್ಚಲಿನ ಹಾಲೋ–ಪೌಷ್ಟಿಕ ರಸಾಯನವೋ? ಆಹಾರವಾಗಿ ಉಪಯೋಗಿಸಲ್ಪಡುವುದನ್ನು ನಾವಿಂದು ಕಾಣುತ್ತೇವೆ. ಮಾತ್ರವಲ್ಲ, ಸಮಾಜವೂ ತಪ್ಪಿಗೆ ಒಪ್ಪಿಕೊಳ್ಳುತ್ತದೆ. ಇಂತು ವ್ಯಕ್ತಿ ವ್ಯಕ್ತಿಗಳ ಏಳು ಬೀಳುಗಳೇ ಸಮಾಜದಲ್ಲಿ ತದ್ರೂಪು ಪಡೆಯುವಂತಿದ್ದರೆ ವ್ಯಕ್ತಿ ವೈಶಿಷ್ಟ್ಯತೆಗೆ ಪ್ರಥಮ ಪ್ರಾಶಸ್ತ್ಯ ದೊರಕಲೇ ಬೇಕೆಂದಾಯ್ತು. ಆಗ ಪ್ರತ್ಯೆ ಪ್ರತ್ಯೇಕ ವ್ಯಕ್ತಿಗಳ ಸಂಸ್ಕಾರ ಪರಿಸರ

ಅಭಿವೃದ್ಧಿಗನುಸರಿಸಿ ವಿವಿಧತೆಯ ವಿಕಾಸವೇ ಸಾಧ್ಯ. ಅದನ್ನು ಯಾರು ಅಲ್ಲಗಳೆಯಲಾಗದು. ವಿವಿಧತೆಯಿದ್ದಲ್ಲಿ ಈರ್ಷೆ ಪ್ರೀತಿ ಅಸೂಯೆ ಆದಾಗಿಯೇ ಹುಟ್ಟಿ ಬೆಳೆಯುವುದರಿಂದ ಪ್ರತಿಯೊಬ್ಬನೂ ಅವರವರ ಮೂಗಿಗೆದುರಾಗಿ ಮಾಡುವ ಪ್ರಯತ್ನಗಳೆಲ್ಲಾ ಗಾಳಿಯನ್ನು ಗುದ್ದಿದಂತಾಗುತ್ತದೆ. ಪ್ರತಿಯೊಬ್ಬನಿಗೆ ಒಂದೊಂದು ವಿಧದ ದೃಷ್ಟಿ ಸಾಧನೆ–ಶಕ್ತಿ ಅಂತಿದ್ದ ಒಬ್ಬನಿಗೇನೇ ಬಾಲ್ಯ, ಯೌವನ–ಮುಪ್ಪಿನಲ್ಲಿ–ಬೇರೆ ಬೇರೆ ವಿಧದ ಮನಸ್ಸಿನ ಒಡ್ಡೋಲಗ ನಡೆಯುವ ದರ್ಬಾರಿನಲ್ಲಿ ಯಾರು ಸರಿ? ಯಾರು ತಪ್ಪು? ಹೇಳುವವರಾರು? ಕೇಳುವವರಾರು? ಹಾಗಿದ್ದರೆ ಇದು ಕೇವಲ ಹರಟೆಯಾಗಿಯೇ ಅನ್ವರ್ಥವಾಗಬಹುದು. ಅದಕ್ಕಾಗಿ ಇನ್ನೂ ಅದರ ಒಳಗಿನ ಗುಟ್ಟನ್ನು ನಿಮ್ಮೆದುರು ಬಿಚ್ಚಿಡುತ್ತೇನೆ. ನಿಜವಾಗಿ ಮನುಷ್ಯನ ಎಲ್ಲಾ ಬಾಹ್ಯಾಚರಣೆಗಳು ಅವನವನ ಮನೋಗತಿಯನ್ನಸರಿಸಿಯೇ ನಡೆಯುವಂತಾದ್ದು ಅಂತಹ ಚಾಲಕ ಸ್ಥಾನದಲ್ಲಿರುವ ಮನಸ್ಸನ್ನು ಆ ಸ್ಥಾನದ ಅರ್ಹತೆ ಪಡೆಯುವಷ್ಟು ಸತತ ತರಬೇತುಗೊಳಿಸಿಕೊಳ್ಳಬೇಕಾದ. ಪ್ರತಿಯೊಬ್ಬ ಪ್ರೌಢ ಮನುಷ್ಯರ ಆದ್ಯ ಕರ್ತವ್ಯ ಆಮೇಲೆ ತಮ್ಮ ತಮ್ಮ ನಿರ್ಲಿಪ್ತ ಮನಸ್ಸು ಏನು ಸೂಚಿಸುತ್ತದೆಯೋ ಅದರಂತೆ ನಡೆದರಾಯ್ತು.

ಆದರೆ ಈಗ ನಮ್ಮಲ್ಲಿರುವ ಆಚರಣೆ ಏನಾಗಿದೆ? ಹೊರಗಿನವರು ಏನು ಹೇಳುತ್ತಾರೋ? ಎಂಬ ನಾಚಿಕೆಯಿಂದ ಸಮಾಜವು ಹಿಯ್ಯಾಳಿಸಬಹುದೆಂಬ ಭಯದಿಂದ ಸಮುದಾಯದಲ್ಲಿ ಘನಸ್ತಿಕೆಯನ್ನು ಕಾಣಿಸಿಕೊಳ್ಳುವ ಕೀರ್ತಿ ಕಾಮನೆಯಿಂದ ನಾವೆಷ್ಟು ಸರ್ತಿ ನಮ್ಮ ಮನಸ್ಸಿಗೇನೇ ಮೋಸ ಮಾಡಿಕೊಂಡು ಸುಳ್ಳು ನಡತೆ ಹೊರಗೆ ನಟಿಸುವುದಿಲ್ಲ. ಪರಿಸರ ಪರಿಸ್ಥಿತಿಯ ಒತ್ತಡ ಆ ಬಗೆಯಲ್ಲಿ ಬಲಾತ್ಕಾರಿಸುತ್ತದೆ, ಇದರಿಂದ ನಮ್ಮಲ್ಲೇ ನಾವು ನಂಬಿಗೆ ಕಳಕೊಳ್ಳುತ್ತೇವೆ. ಇದೇ ದೌರ್ಬಲ್ಯತೆ ಇದ್ದಲ್ಲಿ ಈರ್ಷಾಸೂಯೆಗಳ ಉತ್ಪತ್ತಿ ಈ ಎಲ್ಲಾ ವಿಷತತ್ವಕ್ಕೆ ನಮ್ಮ ಮನಸ್ಸಿನ ಅಲ್ಲೋಲ. ಕಲ್ಲೋಲವೇ ಕಾರಣವಂತೆ ನಾವು ಕಂಡು ಕೊಂಡು ಋಜುವಾಗಿ ನಡೆದಾಗ ನಾವು ಮತ್ತು ನಮ್ಮ ಸಮಾಜ ಸಮೀಪಕ್ಕೆ ಬರಬಹುದು, "ರೂಪ್ಯಕದ ನಾಣ್ಯದಾ–ಬಿಡಿಗಾಸಿಗೊಂದು ಬೆಲೆ ಕಾಸುಬೆಲೆ ಒಪ್ಪಹುದು ರೂಪ್ಯದಿಂದೆ ಪ್ರಾಪ್ಯರಿಂತನ್ಯೋನ್ಯ ಜನದೊಟ್ಟು ಬಿಡಿಮಾಡಿ ಸುಪ್ರೀತ ರಾಜ್ಯವದು ಮಂಕು ತಿಮ್ಮ" ಎಂಬ ಮಾನ್ಯ ಡಿ. ಪಿ. ಜಿ. ಯವರ ವಾಕ್ಯವನ್ನು ಉಚ್ಚರಿಸಿ ಹರಟೆಗೆ ಅಂತ್ಯವನ್ನೀಯುವೆ.

# ॥ ಗೌಡರೊಂದೆ ॥

ರಚನೆ :–ಹೊದಟ್ಟಿ ಭವಾನಿ ಶಂಕರ್ ಬಿ. ಇ. ಎಲ್. ಬೆಂಗಳೂರು

[ಭಾರತೀಯ ಸಂಸ್ಕೃತಿಯು ಅನೇಕತೆ ಏಕತೆಯಿಂದ ಕೂಡಿದಂತೆ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಗೌಡರಲ್ಲೂ ಅನೇಕತೆ ಏಕತೆ ಕಂಡು ಬರುತ್ತದೆ. ಪುತ್ತೂರಿನ ಗೌಡರ ಭಾಷೆ ತುಳು ಭಾಷೆಯಾದರೆ ಸುಳ್ಯ ಸಂಪಾಜೆ, ಮಡಿಕೇರಿಯ ಗೌಡರ ಭಾಷೆ ಅರೆಭಾಷೆ. ಕೊಡಗಿನ ಗೌಡರ ಪದ್ಧತಿಗಳ ಆಚರಣೆಗೂ ದಕ್ಷಿಣ ಕನ್ನಡ ಗೌಡರ ಪದ್ಧತಿಗಳ ಆಚರಣೆಗೂ ವ್ಯತ್ಯಾಸಗಳಿವೆ. ಆದರೆ ಈ ಎಲ್ಲಾ ಗೌಡರೂ ಹತ್ತು ಕುಟುಂಬ ಹದಿನೆಂಟು ಗೋತ್ರಕ್ಕೆ ಸೇರಿದವರಾದುದರಿಂದ ಅವರ ಸಂಸ್ಕೃತಿಯಲ್ಲಿ ಏಕತೆ ಇದೆ. "ಗೌಡರೆಲ್ಲಾ ಒಂದೇ" ಎಂಬ ಕವನವು ಕೊಡಗು ಮತ್ತು ದ. ಕ. ಗೌಡ ಸಮಾಜದ ಉದ್ಘಾಟನೆ ಸಮಾರಂಭದ ಸಂದರ್ಭಕ್ಕೆ ಸಮಯೋಜಿತವಾದ ಕೊಡುಗೆ ಯಾಗಿದೆ. ಸಂ]

ಮಂಗ್ಳೂರು ಗೌಡರೂ ಮಡಿಕೇರಿ ಗೌಡರೂ
ಅರೆಭಾಷೆ ಗೌಡ ನಾವೆಲ್ಲರೊಂದೇ
ತುಳುನಾಡಿನಿಂ ಬಂದು ನೆಲಸಿಹೆವು ಕೊಡಗಿನಲಿ
ಇಂದಲ್ಲ ಬಂದಿಹುದು ಬಹಳ ಹಿಂದೆ ॥

ಹಿಂದಿನಾ ಕಥೆ ನೆನೆದು ಇಂದೀಗ ಒಲವಿನಲಿ
ಒಂದಾಗಿ ನಾವಿಹೆವು ಬೆಂಗ್ಳೂರಿನಲ್ಲಿ ।
ನಮ್ಮ ನಮ್ಮಲಿ ಭೇಧಭಾವವನು ಮಾಡದೆಯೆ
ಕಟ್ಟಿಹೆವು ನಾವೊಂದು ಸಂಘವಿಲ್ಲಿ ॥

ಆ ಗೌಡ ಈ ಗೌಡ ಬೇರೆಂದು ಅರಿತವನು
ಗೌಡ ತಾ ನಲ್ಲ ಸಂದೇಹ ಬೇಡ
ಹತ್ತು ಕುಟುಂಬ ಹದಿನೆಂಟು ಗೋತ್ರವದು ನಮದೆನುತ
ಅರಿತು ನಾ ಬರೆದಿಹೆನು ಒಂದು ಹಾಡಾ॥

ಅತಿ ಚಿಕ್ಕದಾಗಿದ್ದ ಈ ಸಂಘ ಬೆಳೆ ಬೆಳೆದು
ಬಂದಿಹುದು ಈ ಊರ ಹೆಸರು ತಳೆದು ।
ಗೌಡರೀ ಸಂಘಕ್ಕೆ ಗೌಡರಾ ಯತ್ನದಲಿ
ಕಟ್ಟಡವು ನಿಂತಿಹುದು ಮನವ ಸೆಳೆದು ॥

ನಮ್ಮ ಸಂಘಕೆ ಒಂದು ಕಟ್ಟಡವು ಬೇಕೆಂದು
ಊರೂರು ನಮ್ಮವರ ಮನೆಗಳಿಗೆಯೆಲ್ಲಾ ।
ಸುತ್ತಾಡಿ ಸುಳಿದಾಡಿ ವಂತಿಗೆಯ ತಂದಿಹೆವು
ಮನುಜ ಯತ್ನಕೆ ಬೇರೆ ಸಾಠಿ ಇಲ್ಲ ॥

ಕಿರಿದಾದ ಕಾಣಿಕೆಯು ಹಿರಿದೆಂದು ಸ್ವೀಕರಿಸಿ
ತಂದಿಹೆವು ಬಡ ಜನರು ತೆತ್ತ ಹಣವ ।
ತುಂಬು ಹೃದಯದ ನಮ್ಮ ಜನ ಬಡವರಾದರೂ
ಅಳೆಯ ಬಲ್ಲರೆ ಹಳ್ಳಿ ಜನರ ಗುಣವ ॥

ಇದ್ದವರು ಕೊಡಬೇಕು ಎಂಬ ನಿಯಮೇನಿಹುದು
ಆದರೂ ಕೆಲಜನರು ಹಿರಿತನವ ತೋರಿ
ತಮ್ಮ ಘನತೆಗೆ ಸಮದಿ ನೀಡಿಹರುದಾನವನು
ಮಂಗ್ಳೂರು ಬೆಂಗ್ಳೂರೂ ಕೊಡಗಲ್ಲಿ ನೋಡಿ ॥

ಹಣವಂತರಿಹರಿನ್ನೂ ಗೌಡರಲಿ ಇನ್ನೆಷ್ಟೊ
ಆದರೂ ಅವರು ದಯ ತೋರುತಿಲ್ಲ ।
ಎಲೆ ಮರೆಯ ಕಾಯಂತೆ ಮುಸುಗಿನಲಿ ಇಹರವರು,
ಗೌಡ ಜನರಾ ಚಿಂತೆ ಅವರಿಗಿಲ್ಲ ॥

ನಮ್ಮ ಸಂಘಕೂ ಅದರ ಕಟ್ಟಡಕೂ ದುಡಿದಿರುವ
ಭಂಧುಗಳೆಲ್ಲರಿಗೂ ವಂದನೆಯ ಮಾಡಿ ।
ಕೊಡಗು ದಕ್ಷಿಣ ಗೌಡ ಸಂಘದೇಳಿಗೆಯನ್ನು
ಬಯಸುತಲಿ ಮುಗಿಸುವೆನೀ ಕವನ ನೋಡಿ ॥

# ಕರ್ನಾಟಕ ರಾಜ್ಯದ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡರು

ಕೊಟೇರ ಕಾರ್ಯಪ್ಪ ಬಲ್ಲಮಾವಟ.

---

ಶ್ರೀ ಕೊಟೇರ ಕಾರ್ಯಪ್ಪನವರು ತಮ್ಮದೇ ಆದ ರೀತಿಯಲ್ಲಿ ಗೌಡರ ಬಗ್ಗೆ ಗೌಡರ ಇತಿಹಾಸವನ್ನು ಸಂಗ್ರಹಿಸಲು ಪ್ರಯತ್ನ ಪಟ್ಟಿದ್ದಾರೆ. ಈ ಹಿಂದೆಯೂ ಕೊಡಗು ರಾಜರುಗಳ ಕಾಲದ ದಾಕ್ಲೆಗಳನ್ನು ಪತ್ತೆ ಹಚ್ಚಿ ಲೇಖನವನ್ನು ಕಳುಹಿಸಿ ಕೊಟ್ಟಿದ್ದರು. ಈ ಹಿರಿಯರ ಉತ್ಸಾಹ ಯುವಕರಿಗೆ ಮಾರ್ಗದರ್ಶನವಾಗಲಿ ಸಂ]

---

ಕ್ರಿ. ಶ. 1-11-1956ರಂದು ಸಿ. ಪ್ರಾಂತ್ಯವಾಗಿದ್ದ ಕೊಡಗು ಕರ್ನಾಟಕ ರಾಜ್ಯದ ಒಂದು ಜಿಲ್ಲೆಯಾಗಿ ಮಾರ್ಪಟ್ಟಿತು. 1600ನೇ ಸಮಾರು ಇಸವಿಯಿಂದ 1834ನೇ ಇಸವಿಯವರೆಗೆ ಕೊಡಗು ಒಂದು ಸಂಸ್ಥಾನ ವಾಗಿದ್ದು ಕೊಡಗಿನ ಹಾಲೇರಿ ಮನೆತನದ ಲಿಂಗಾ ಯಿತ ಆಳಿದ ದಾಖಲೆಗಳಿವೆ. ಒಬ್ಬಳು ಸ್ತ್ರೀ ರಾಣಿ ದೇವಮ್ಮಾಜಿ ಸೇರಿ ಒಟ್ಟು ಹದಿಮೂರು ಮಂದಿ ರಾಜರು ಕೊಡಗನ್ನು ಆಳಿದ ದಾಖಲೆಗಳಿವೆ. ಈ ಹಾಲೇರಿ ವಂಶದ ಕಡೆಯ ರಾಜ ಚಿಕ್ಕವೀರ ರಾಜೇಂದ್ರ ಒಡೆಯನ ಆಳ್ವಿಕೆ ಯಲ್ಲಿ 1834ರಲ್ಲಿ ಬ್ರಿಟೀಷರು ದುರುದ್ದೇಶದಿಂದ ಮತ್ತು ಕುಟಿಲ ನೀತಿಯಿಂದ ಯಾವುದೇ ಪ್ರತಿಭಟನೆಯನ್ನು ಎದುರಿಸದೆ ರಾಜ್ಯವನ್ನು ಬ್ರಿಟಿಷ್ ಅಧಿಕಾರಿ ಕರ್ನಲ್ ಫ್ರೇಜರ್ ವಶಪಡಿಸಿಕೊಳ್ಳುತ್ತಾನೆ.

ಕೊಡಗಿನಲ್ಲೆ 1834ನೇ ಇಸವಿ ಏಪ್ರಿಲ್ ತಿಂಗಳು ಹನ್ನೊಂದರಂದು ಬ್ರಿಟೀಷ್ ಸರಕಾರದ ಆಜ್ಞೆ ಜಾರಿ ಗೊಳಿಸಲ್ಪಡುತ್ತದೆ. ಅದೇ ವರ್ಷ ಅಕ್ಟೋಬರ್ ತಿಂಗಳಲ್ಲಿ ಆಡಳಿತದ ನೆಪವನ್ನು ಹೇಳಿ ಅಷ್ಟರವರೆಗೆ ಕೊಡಗಿನ ಭಾಗವೇ ಆಗಿದ್ದ ಅಮರ ಸುಳ್ಯ ಪುತ್ತೂರು ಸೀಮೆಗಳನ್ನು ಅಂದಿನ ಮದ್ರಾಸು ಪ್ರಾಂತ್ಯದಲ್ಲಿ (ಇಂದಿನ ದಕ್ಷಿಣ ಕನ್ನಡ ಜಿಲ್ಲೆಗೆ) ಸೇರಿಸಿದರು. ಈ ವರ್ಗಾವಣೆಯಿಂದ ಸುಳ್ಯ ಪಂಜ ಬೆಳ್ಳಾರೆ ಪುತ್ತೂರು ಜನರಿಗೆ ತುಂಬಾ ಅನಾನುಕೂಲಗಳು ಅದವಲ್ಲದೆ ತಮ್ಮ ಮೆಚ್ಚಿನ ರಾಜನಿಂದ ರಾಜ್ಯವನ್ನು ದುರುದ್ದೇಶದಿಂದ ಬ್ರಿಟಿಷರು ರಾಜ್ಯಪಡೆದು ಕೊಂಡದನ್ನು ಸಹಿಸಲು ಸಾಧ್ಯವಾಗದೆ ಜನರು ರೊಚ್ಚಿಗೇಳುವ ಸ್ಥಿತಿಗೆ ಬಂದು 1837ರಲ್ಲಿ ಬ್ರಿಟೀಷರ ವಿರುದ್ಧ ದಂಗೆ ಏಳುತ್ತಾರೆ. ಈ ದಂಗೆಯು ಸುಳ್ಯದಿಂದ ಪ್ರಾರಂಭಗೊಳ್ಳುತ್ತದೆ. ಸುಳ್ಯದಿಂದ ಹೊರಟ ವೀರಯೋಧರ ಸೈನ್ಯದ ಮುಖಂಡ ಕೆ ದಂಪಾಡಿ ರಾಮಯ್ಯಗೌಡ, ಗುಡ್ಡೆಮನೆ ಅಪ್ಪಯ ಗೌಡರು ಮುಂತಾದವರು ಹೊಂದಿರುತ್ತಾರೆ. ಸುಳ್ಯ ದಿಂದ ಹೊರಟ ಸ್ವಾತಂತ್ರ್ಯ ಹೋರಾಟಗಾರರ ಸೈನ್ಯ ಪುತ್ತೂರನ್ನು ಹಿಡಿದು ಮಂಗಳೂರನ್ನು ಪ್ರವೇಶಿಸಿ ಮಂಗಳೂರಿನಿಂದ ಬ್ರಿಟೀಷರನ್ನು ಓಡಿಸಿ ಕೊಡಗಿನ ರಾಜ ಪ್ರತಿನಿಧಿ ಕಲ್ಯಾಣಪ್ಪನ ಹೆಸರನ್ನು (ಶನಿವಾರ ಸಂತೆಯ ಪುಟ್ಟ ಬಸಪ್ಪನನ್ನು) ಮುಂದಿಟ್ಟುಕೊಂಡು

ಹದಿಮೂರು ದಿನಗಳ ತನಕ ರಾಜ್ಯಭಾರ ಮಾಡುತ್ತಾರೆ. ಬಲಿಷ್ಠ ಬ್ರಿಟೀಷ್ ಸೈನ್ಯದ ಮುಂದೆ ಈ ಸಣ್ಣ ವೀರಯೋದರ ಹೋರಾಟ ನಡೆಯುವುದಿಲ್ಲ. ಬ್ರಿಟೀಷರು ಈ ಬಂಡಾಯದ ಮುಖಂಡತ್ವವನ್ನು ವಹಿಸಿದ ಪ್ರಮುಖರನ್ನು ಬಂದಿಸಿ ಸೈನ್ಯ ಕಾನೂನಿನಂತೆ ವಿಚಾರಣೆ ನಡೆಸಿ ಕೆಲವರಿಗೆ ಗಲ್ಲು ಶಿಕ್ಷೆ ವಿದಿಸಿದರೆ ಇನ್ನು ಕೆಲವರಿಗೆ ಏಳರಿಂದ ಹದಿನಾಲ್ಕು ವರ್ಷಗಳ ಕಾಲ ಸೆರೆವಾಸವನ್ನು ವಿಧಿಸುತ್ತಾರೆ. ಶಿಕ್ಷೆಗೆ ಗುರಿಯಾಗಿರುವ ಗೌಡ ಮುಖಂಡರು ಕೆದಂಪಾಡಿ ರಾಮಯ್ಯಗೌಡರು ಗುಡ್ಡೆಮನೆ ಅಪ್ಪಯ್ಯ ಗೌಡರು ಗುಡ್ಡೆಮನೆ ತಮ್ಮಂಯ್ಯನವರು ಕೂಜಿಗೋಡು ಅಪ್ಪಯ್ಯನವರು ಮತ್ತು ಮಲ್ಲಪ್ಪನವರು ಕುರುಂಜಿ ಮನೆ ಸುಬ್ಬಯ್ಯನವರು ಕುಕ್ಕನೂರು ಚೆನ್ನಯ್ಯನವರು, ಶಾಂತಳ್ಳಿ ಮಲ್ಲಯ್ಯನವರು ಮುಂತಾದವರು ಈ ಹೋರಾಟದಲ್ಲಿ ನೂರರಲ್ಲಿ ತೊಂಭತ್ತು ಜನರು ಗೌಡರೇ ಇದ್ದು ಇನ್ನಿತರರು ಕೇವಲ ಅಲ್ಪ ಸಂಖ್ಯೆಯಲ್ಲಿದ್ದರೆಂದು ಆಧಾರಗಳಿಂದ ತಿಳಿದು ಬರುತ್ತದೆ.

ಈ ಬ್ರಿಟೀಷರ ವಿರುದ್ಧದ ಹೋರಾಟವನ್ನು ಚರಿತ್ರಕಾರರು ಅಮರ ಸುಳ್ಯಕಾಟಕಾಯಿ ಕೊಡಗು ಕೆನರಾ ಬಂಡಾಯವೆಂದು ಕರೆದಿರುವರು.

ಈ ಹೋರಾಟದಲ್ಲಿ ಈ ಗೌಡ ಜನಾಂಗದ ಕೇಂದ್ರವಾದ ಸುಳ್ಯದ ಸುತ್ತಮುತ್ತಲಿನ ಪ್ರದೇಶದ ಜನರು ಆಸ್ತಿ ಮನೆ ಮುಂತಾದವುಗಳನ್ನು ಕಳೆದುಕೊಂಡು ಚೇತರಿಸಿಕೊಳ್ಳಲು ತುಂಬಾ ಸಮಯವನ್ನು ತೆಗೆದುಕೊಳ್ಳುವಂತಾಗಿ ಭಾರತ ಸ್ವಾತಂತ್ರ್ಯಗೊಂಡ ನಂತರ ತನ್ನ ಶ್ರಮದ ಫಲವಾಗಿ ಎಚ್ಚೆತ್ತು ಇಂದು ರಾಷ್ಟ್ರ ಮಟ್ಟದಲ್ಲಿ ವ್ಯವಹರಿಸುವ ಚೈತನ್ಯವುಳ್ಳ ಒಂದೆರಡು ವ್ಯಕ್ತಿಗಳಾದರೂ ಸಿಕ್ಕಬಹುದೆಂದು ತೃಪ್ತಿಪಟ್ಟುಕೊಳ್ಳಬಹುದೆಂದು ತೋರುತ್ತದೆ.

ಈ ಗೌಡ ಜನಾಂಗದ ಸಂಸ್ಕೃತಿ ಹಿಂದೂ ಧರ್ಮಶಾಸ್ತ್ರಕ್ಕೆ ಬುನಾಧಿಯಾಗಿರುವ "ಮನುಸ್ಮೃತಿ"ಯೇ ಮೂಲಾಧಾರವಾಗಿದ್ದು, ಭಾರತದಲ್ಲಿ ವಾಸಿಸುವ ಹಿಂದೂ ಧರ್ಮಕ್ಕೆ ಸೇರಿದ ವಿವಿಧ ಕೋಮಿನವರು ಒಂದಾಗಿ ವಿಶ್ವ ಹಿಂದು ಪರಿಷತ್ತಿನ 1964ರ ಉಡುಪಿ ಸಮ್ಮೇಳನದಲ್ಲಿ ಘೋಷಿಸಿದ ಏಕಾಭಿಪ್ರಾಯವಾದ ಹಿಂದವ : ಸೋದರಾ : ಸರ್ವೇ ಎಂಬ ತತ್ವವನ್ನು ನಡೆ ನುಡಿ ಕೃತಿಯಲ್ಲಿ ತಂದು ವಿಶ್ವದ ಹಿಂದುಗಳಿಗೇ ಒಂದು ಮದುವೆ ಪದ್ಧತಿ ಮತ್ತು ಶವ ಸಂಸ್ಕಾರ ಪದ್ಧತಿ ಜಾರಿಗೆ ಬರುವುದಾದರೆ ನಾವು ಎಲ್ಲರೊಂದಿಗೆ ಬೆರೆತು ಭವ್ಯ ಭಾರತ ನಿರ್ಮಾಣ ಕಾರ್ಯದಲ್ಲಿ ಪಾಲುಗೊಳ್ಳಬೇಕಾದರೆ ನಮ್ಮ ಸಂಸ್ಕೃತಿಯನ್ನು ಅಭಿವೃದ್ಧಿ ಪಡಿಸುವುದಕ್ಕೆ ತಕ್ಕ ತಜ್ಞರನ್ನು ನೇಮಿಸಿ ಅವರು ಕೊಡುವ ಸಲಹೆಯ ಮೇರೆಗೆ ಅದನ್ನು ಚರ್ಚೆ ಬರುವ ತೀರ್ಮಾನವನ್ನು ಅಗ್ಗದ ಬೆಲೆಯಲ್ಲಿ ದೊರೆಯುವಂತೆ ಮುದ್ರಿಸಿ ಜನ ಜಾಗೃತಿಗೊಳ್ಳುವ ಅಭಿಪ್ರಾಯ ಮಾಡಿದರೆ ಉತ್ತಮವಾಗಬಹುದೆಂದು ತೋರುತ್ತದೆ.

ಈ ಗೌಡರ ಬಾಷೆಯನ್ನು ತೆಗೆದುಕೊಂಡರೆ ಈ ಗೌಡರು ಕೊಡಗು ರಾಜರ ಅಧೀನದಲ್ಲಿ ಹಲವಾರು ಶತಮಾನಗಳವರೆಗೆ ಬಾಳಿದ ಪ್ರದೇಶವಾದ ಕೊಡಗಿನ ಶ್ರೀಮಂಗಲನಾಡಿನಿಂದ ಇಂದು ದಕ್ಷಿಣ ಕನ್ನಡ ಜಿಲ್ಲೆಗೊಳಪಟ್ಟಿರುವ ಪುತ್ತೂರು ತಾಲ್ಲೂಕಿನ ನೇತ್ರಾವತಿ ನದಿವರೆಗೆ ವಾಸಿಸುವವರು ಮಾತ್ರ ಮಾತಾಡುವಂತೆ ತೋರುತ್ತದೆ. ಅಲ್ಲದೆ ಸುಳ್ಯ ಸೀಮೆಯ ಸುತ್ತ ಮುತ್ತಲ ಪ್ರದೇಶಗಳು ಸೇರಿದ ಒಂದು ರಾಜ್ಯವಿತ್ತೆಂದೂ ಅದನ್ನು ಉತ್ತರದಿಂದ ಬಂದ ಕರಿಯಣ್ಣ ನಾಯಕ ಎಂಬುವರು ಕಾಯರತೋಡಿ ವಿಷ್ಣು ದೇವರನ್ನು ಮುಂದಿಟ್ಟುಕೊಂಡು ಕಾಯರತೋಡಿ ರಾಜ್ಯವನ್ನು ಕಟ್ಟಿ ಆಳುತ್ತಿದ್ದರೆಂದು ಹಿರಿಯರು ಹೇಳಿದುಂಟು. ಈ ಕರಯಣ್ಣ ನಾಯಕನ ಮನೆತನದವರೇ ಸುಳ್ಯದ ದೇಂಗೋಡಿ ಮನೆಯವರೆಂದು ಹೇಳುತ್ತಾರೆ.

ಈ ಬಾಷೆಯನ್ನು ಕುರಿತು ಆಂಗ್ಲ ಭಾಷೆಯಲ್ಲಿ ಕೊಡಗಿನ ಪೆರಾಜೆ ಗ್ರಾಮದ ಕೋಡಿಮನೆ ಡಾ॥ ಕುಶಾಲಪ್ಪ ಗೌಡರವರು ಅಣ್ಣಾಮಲೈ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದಾಗ 1975 ರಲ್ಲಿ ಬರೆದ ಪುಸ್ತಕದ ಬಗ್ಗೆ ಭಾಷೆಯನ್ನು ಕುರಿತು ಅಮೇರಿಕದ ಸಂಶೋಧಕ ರೋರ್ವರು ಇದು ಅನಂತ ಪ್ರಾಚೀನ ಸ್ವರೂಪದ ಅನಂತರದ ಅಂದರೆ ಚಾರಿತ್ರಿಕ ಶ್ರೇಣಿಯಲ್ಲಿ ಎರಡನೇ ಸ್ಥಾನದಲ್ಲಿದೆ ಎಂದು ತೋರುತ್ತದೆ ಎಂದಿದ್ದಾರೆ ಎಂದು ಡಾ॥ ಕುಶಾಲಪ್ಪ ಗೌಡರು ಬರೆದಿರುತ್ತಾರೆ.

1929 ನೇ ಇಸವಿ ನವಂಬರು ತಾ. 29ರಂದು ಕೊಡಗಿನ ರಾಜಧಾನಿ ಮಡಿಕೇರಿಗೆ ಬೇಟಿ ಕೊಟ್ಟಿದ್ದ ಭಾರತದ ಅಂದಿನ ವೈಸರಾಯ್ ಆಗಿದ್ದ ಲಾರ್ಡ್ ಇರ್ವಿನ್‌ರವರಿಗೆ ಕೊಡಗಿನ ಗೌಡ ಜನಾಂಗದ ಪರವಾಗಿ ದಿವಂಗತ ನಿಡ್ಯಮಲೆ ಮುದ್ದಪ್ಪ ವಕೀಲರ ಮುಖಂಡತ್ವದಲ್ಲಿ ಶಿರಕಜೆ ಪೊನ್ನಪ್ಪ ಕುಂಬು ಗೌಡನ ಕುಶಾಲಪ್ಪ ಯಂಕನ ಅಣ್ಣಯ್ಯ, ಕೆದಂಬಾಡಿ ಅಪ್ಪಚ್ಚ ದಂಬೆಕೋಡಿ ಅಪ್ಪಚ್ಚ ಉಳುವಾರನ ಕುಶಾಲಪ್ಪ ಈ ಏಳು ಜನ ಪ್ರತಿನಿಧಿಗಳು ತಲೆಗೆ ರುಮಾಲು ಹೆಗಲಿಗೆ ಶಾಲು ಕಪ್ಪನೆ ಮುಚ್ಚುಕೋಟು. ಬಿಳೀ ಷರಾಯಿ (ಪ್ಯಾಂಟ್) ಧರಿಸಿ ಒಂದು ಮನವಿ ಪತ್ರವನ್ನು ಅರ್ಪಿಸಿದ ದಾಖಲೆಗಳಿವೆ.

ಅವರ ಸಾರಾಂಶ ಈ ರೀತಿ ಇದೆ–ನಾವು ದಕ್ಷಿಣದ ಕನ್ನಡದಿಂದ ಬಂದವರು ಅರೆಭಾಷೆ ಮಾತಾಡುವ ಬುಡಕಟ್ಟಿನಿಂದ ಬಂದವರು ವಿಜಯನಗರ ಸಾಮ್ರಾಜ್ಯದ ಪತನದ ನಂತರ ಈ ಕನ್ನಡಿಗರು ತೀರ ದಕ್ಷಿಣಕ್ಕೆ ಬಂದು ಆಗಿನ ಬೊಂಬಾಯಿ, ಮದ್ರಾಸು ಪ್ರದೇಶಗಳ ನಿವಾಸಿಗಳಾದರೆಂದೂ, ಅವರಲ್ಲಿ ಅನೇಕರು ಈ ಘಟ್ಟದ ಪ್ರದೇಶಗಳನ್ನು ಆಕ್ರಮಿಸಿಕೊಂಡರೆಂದೂ ಹೇಳಿದೆ.

"ಗೌಡ" ಎನ್ನುವುದು ಗ್ರಾಮದ ಒಡೆಯ ಎಂಬ ಅರ್ಥ ಪಡೆದಿದೆ. ಮೂಲತ : ಗೌಡರು ಕೊಡಗು ದಕ್ಷಿಣ ಕನ್ನಡದ ನೇತ್ರಾವತಿ ನದಿಯವರೆಗೂ ಇದ್ದ ಪ್ರಮುಖ ಜನಾಂಗವಾಗಿದ್ದರು. ಅಮರ ಸುಳ್ಯ ಪುತ್ತೂರು ಸೀಮೆಯನ್ನು ದಕ್ಷಿಣ ಕನ್ನಡವೆಂದು ಮಾಡಿದಾಗ ನಮ್ಮವರನೇಕರು ಮದ್ರಾಸ್ ರಾಜ್ಯಕ್ಕೆ ಒಳಪಟ್ಟರು. ನಮ್ಮದು ಸೈನ್ಯಕ್ಕೆ ಪರಂಪರೆಯಾಗಿದ್ದು ಮಹಾಯುದ್ಧದಲ್ಲಿ ಸ್ವಇಚ್ಛೆಯಿಂದ ಸೈನ್ಯಕ್ಕೆ ಸೇರಿಕೊಂಡಿದ್ದಾರೆ. ಹಿಂದಿನ ಕಾಲದಲ್ಲಿ ಕೂಡಾ ಭಾರತೀಯ ಸೇನಾ ಪಡೆಯಲ್ಲಿರುವ ಕೂರ್ಗ್ ಬೆಟಾಲಿಯನ್‌ನಲ್ಲಿ ನಮ್ಮವರೇ ಒಂದು ಕಂಪೆನಿಯಿದ್ದು ಅದು ಅತೀ ದಕ್ಷವಾದ ಕಂಪೆನಿಯೆಂದು ಹೆಸರು ಪಡೆದಿತ್ತು ಮುಂತಾಗಿ ದಾಖಲೆಗಳಿವೆ.

---



---

# ನಗೆ ಹನಿ

ಹೆಚ್. ಬಿ. ದಾಮೋದರ    ಬೆಂಗಳೂರು

[ಸಮಾಜದ ಸಂಸ್ಕೃತಿ ಎಂದರೆ ಚರಿತ್ರೆ ಪದ್ಧತಿ ಹಾಡುಗಾರಿಕೆ ಸೋಬಾನೆಗಳು ಮಾತ್ರ ವಲ್ಲ-ಜೀವನದಲ್ಲಿ ಆದ ಘಟನೆಗಳೂ ಜನರಲ್ಲಿ ಬಾಯಿಂದ ಬಾಯಿಗೆ ಹೋಗಿ ಅವು ಕೆಲವು ಸಲ ಗಾದೆಗಳಾಗುತ್ತವೆ. ಕೆಲವೊಮ್ಮೆ ನೆರೆದ ಜನರನ್ನು ನಗಿಸುವ ನಗೆಹನಿ ಗಳಾಗುತ್ತವೆ. ಆ ರೀತಿ ಅರೆ ಭಾಷೆಯಲ್ಲಿ ಶ್ರೀ ಹೆಚ್. ಬಿ. ದಾಮೋದರರವರು ಸಂಗ್ರಹಿಸಿದ ನಗೆ ಹನಿಗಳು ಅರೆ ಭಾಷೆಯ ಸಾಹಿತ್ಯಕ್ಕೆ ಹೆಚ್ಚಿನ ಮೆರಗುಕೊಟ್ಟಿದೆ.
—ಸಂ.]

### ಅಪ್ಪನ ಯಾಕೆ ಬೇಸಿಕೆ ಬೊತ್ತ್

ಗೂಡೆನ ಅಪ್ಪಂಗೆ ಜರಬಂದ್ ಮಲ್ಗಿತ್ತ್
ಗೂಡೆನ ಅಪ್ಪ ಕುಡಿಯಕೆ ನೀರ್ ಕಾಸಿಕ್ಂಡ್ ಇತ್ತ್,
ಗೂಡೆ ಯಾಕೆ ನೀರ್ ಕಾಸುತ್ತಾ ಒಳತೇಳಿ
ಅವ್ವನ ಕೇಳಿತ್. ಅಪ್ಪಂಗೆ ಜರಬಂದ ಕಾರಣ
ನೀರ್ ಕುದಿಸಿ ಕೊಡೊಕು ಇಲ್ಲರೆ ನೀರ್‌ಲಿ
ಇರುವ ಹುಳುಗ ಎಲ್ಲಾ ಹೊಟ್ಟೆ ಒಳಗೆ ಹೋದವೆ.
ಗೂಡೆ ಕೂಡ್ಲೇ ಹೇಳಿತ್, ಅಪ್ಪನನ್ನೇ
ಕುದಿವ ನೀರಿಗೆ ಹಾಕಿರೆ ಹುಳುಗಳ ಎಲ್ಲಾ
ಒಮ್ಮೆನೇ ಕೊಲ್ಲಕ್ಕಲ್ಲಾ.

### ಹಗಲ್ ನಾವುಗೆ ಲೈಟೇ ಬೇಡ

ಇಬ್ರೊರು ಹಳ್ಳಿಯೊವು, ಒಬ್ಬ ಚಂದ್ರು
ಮುಖ್ಯ ಇನ್ನೊಬ್ಬ, ಅಲ್ಲ ಸೂರ್ಯ ಮುಖ್ಯ
ತೇಳಿಕಂಡ್ ಚರ್ಚೆಮಾಡಿಕೆ ಸುರುಮಾಡಿದೊ.
ಸಮಸ್ಯೆ ತೀರ್ಮಾನ ಮಾಡಿಕೆ ಇಬ್ರೊರೂ
ಗ್ರಾಮದ ಪಟೇಲರ ಹಕ್ಕಲೆ ಹೋದೊ ಈ
ವಿಷಯಲಿ ಭಾರಿ ಯೋಚನೆ ಮಾಡಿ ಪಟೇಲ್‌ರ್
"ಚಂದ್ರ ಮುಖ್ಯ" ತೇಳಿ ತೀರ್ಮಾನ ಕೊಟ್ರೊತ್
ಕಾರಣ ಚಂದ್ರ ಇಲ್ಲದೆ ಇರ್‌ತ್ತಿದ್ದರೆ ನಾವುಗೆ
ರಾತ್ರೆ ಕಾಂಬಕ್ಕಿತ್ತ್‌ಲೆ, ಸೂರ್ಯ ಇದ್ರ್ ಹಗಲ್
ಮಾತ್ರ. ಹಗಲ್ ನಾವುಗೆ ಲೈಟ್ ಬೇಡ.

**ಮರ್ತ್ ಹೋಗುವ ಮಾಸ್ಟ್ರ**

ಬಾರಿ ಮರ್ತ್ ಹೋಗುವ ಒಬ್ಬ ಮಾಸ್ಟ್ರ
ದಾರಿಲಿ ಸಿಕ್ಕಿದ ಗುರ್ತದವನೊಬ್ಬನೊಟ್ಟಿಗೆ ಕೇಳಿದೊ,
ಅರೆ! ಅರೆ! ನೀವು ಸತ್ತ್ ಹೋತ್ಲ್‌ಯೋ ?
**ಅಂವ ಹೇಳಿತ್** ಇಲ್ಲೆ, ನಿಮ್ಗೆ ಹೇಳಿದ್ ಯಾರ್
ನಾ ಇನ್ನೂ ಜೀವಲಿ ಒಳೆ.
**ಮಾಸ್ಟ್ರ ಹಿಂದಕೆ ಹೇಳಿದೊ,** ನನ್ನ ಫ್ರೆಂಡ್ ಹೇಳಿತ್
ನೀವು ಸತ್ತ್ ಹೋಗಲ್ದ್ ತೇಳಿ. ನಂಗೆ ಗೊತ್ತ್‌ಲ್ಲೆ
ಯಾರ ನಂಬುದು ತೇಳಿ. ನಂಗೆ ಹೇಳಿದವ
ಸುಳ್ಳೀ ಹೇಳವನೇ ಅಲ್ಲ.

**ತಣ್ಣಂಗೆಂದ ಬಿಸಿ ಒಳ್ಳೆದ್**

ಒಬ್ಬ ಉಷ್ಣ ಕಾಯಿಲೆ ಆದವಂಗೆ ಡಾಕ್ಟರ್
ಬಿಸಿನೀರ್‌ನ ಶಾಖ ಕೊಡಿಕೆ ಹೇಳಿದೊ.
**ಕಾಯಿಲೆಂವ ಡಾಕ್ಟರ್‌ಗೆ ಹೇಳಿತ್** ಸರಿ ಡಾಕ್ಟರೆ.
ಆದರೆ, ನನ್ನ ಹೆಣ್ಣ್ ಹೇಳುತ್ತಾ ಉಟ್ಟು ತಣ್ಣೀರ್
ಮುಡ್ಸಿರೆ ಒಳ್ಳೆದ್ ತೇಳಿ.
**ಡಾಕ್ಟರ್ ಪುನಃ ಹೇಳಿತ್** ಒಳ್ಳೆದ್ ನೀವು ನಿಮ್ಮ
ಹೆಣ್ಣಿಗೆ ಹೇಳಿ ನನ್ನ ಹೆಣ್ಣ್ ಹೇಳುತ್ತಾ ಉಟ್ಟು
ಬಿಸಿ ನೀರ್‌ನ್ ಶಾಖನೇ ಒಳ್ಳೆದ್ ತಾ.

**ನಾ ಬೀಗದ ಕೈ ಮರ್ತ್‌ಬಂದೆ**

ಮೂರ್ ಕೆಲಸದೊವು 99ನೇ ಮಾಳಿಗೆಲಿ
ಇರುವ ಅವರ ಮನೆಗಳಿಗೆ ವಾಪಸ್ ಬಾತಿದ್ದೊ.
ಅಂದ್, ಲಿಫ್ಟ್ ಹಾಳಾಗಿತ್ತ್. ದಾರಿ ಸಾಗಿಕ್ಕಾಗಿ ಮೂರ್
ಜನರಲಿ ಒಬ್ಬ ಪದ್ಯ ಹೇಳುದು, ಇನ್ನೊಬ್ಬ ಜೋಕ್ ಹೇಳುದು
ಮತ್ತೊಬ್ಬ ಬೇಜಾರದ ಕಥೆ ಹೇಳುದು
ತಾ ತೀರ್ಮಾನ ಮಾಡಿಕೊಂಡೊ.
ಸುರುಸ ಇಬ್ಬೊರು ಹೇಳಿ ಮುಗ್ಸಿಕನ ಅವು 99ನೇ
ಮಾಳಿಗೆಗೆ ಮುಟ್ಟಿದೊ. ಮೂರನೆಯುವ ಹೇಳಿತ್,
"ನನ್ನ ಬೇಜಾರದ ಕಥೆ ತೇಳಿರೆ, ನನ್ನ ಮನೆ
ಬೀಗದ ಕೈ ತಾಕೆ ಮತ್ತೋಗದೆ.

### ಇಬ್ರೊರು ಕಿವುಡ್‌ರ್

ಇಬ್ರೊರು ಕಿವುಡ್‌ರ್ ದಾರಿಲಿ ಒಬ್ಬಂಗೊಬ್ಬ
ಕಾಂಬಕೆ ಸಿಕ್ಕಿದೊ
**ಸುರುನವ :** ಹೇಳಿತ್ 'ನಮಸ್ಕಾರ' ನೀವು ಮಾರ್ಕೆಟಿಂದ
ವಾಪಾಸ್ ಬರುತ್ತಾ ಒಳೊರಿಯೊ ?
**ಎರಡನೆಯವ :** ಕಣ್ ಪಿಳಿ ಪಿಳಿ ಮಾಡಿ, ಇಲ್ಲೆ ನಾ
ಮಾರ್ಕೆಟಿಂದ ವಾಪಾಸ್ ಬರುತ್ತಾ ಒಳೆ ತೇಳಿತ್
**ಸುರುನವ :** ಮೇಲೆ ಕೆಳಗೆ ನೋಡಿ ಹೇಳ್‌ತ್
ಹೌದೊ ಒಳ್ಳೊದ್, ನಾ ಗ್ರಹಿಸಿದೆ ನೀವು
ಮಾರ್ಕೆಟಿಂದ ವಾಪಸ್ ಬರುತ್ತಾ ಒಳೊರಿ ತೇಳಿ.

### ಎರಡಕ್ಕೆ ಎರಡ್ ಸೇರ್ರ್ಸಿರೆ ಐದ್

ಶಾಲೆಂದ ಗೂಡೆ ಬಂದಾಂಗೆ ಅಪ್ಪ
ಯಾಗೊಳು ಕೇಳುವಾಂಗೆ ಕೇಳಿತ್
ಮಗಳೆ, ಇಂದ್ ಶಾಲೆಲಿ ಏನ್ ಕಲ್ತ,
**ಗೂಡೆ ಹೇಳಿತ್ :** ಎರಡಕ್ಕೆ ಎರಡ್ ಸೇರ್ರ್ಸಿರೆ
ಐದ್ ತೇಳಿ ಕಲ್ತೆ
**ಅಪ್ಪ ಹೇಳಿತ್ :** ನೀ ಕಲ್ತ್‌ದ್ ತಪ್ಪು
**ಗೂಡೆ ಹೇಳಿತ್ :** ಅಂದರೆ ನಾ ಇಂದ್ ಏನೂ
ಕಲ್ತ ತೇಲೆ.

### ನಂಗೆ ಆಲ್ ಇಂಡಿಯಾ ರೇಡಿಯೋ ಕೊಡಿ

ರೇಕೋಜಿ ತೇಳುವ ಒಬ್ಬ ಪೆದ್ದ ಒಂದ್
ರೇಡಿಯೋ ತಕ್ಕಂಬಕ್ಕೆ ಅಂಗಡಿಗೆ ಹೋತ್,
ಅಂಗಡಿನವನೊಟ್ಟಿಗೆ ಕೇಳಿತ್ ಅಣ್ಣ, ಅಣ್ಣ ನಿಮ್ಮಲ್ಲಿ
ಒಳ್ಳಒಂದ್ ರೇಡಿಯೋ ಸಿಕ್ಕುದೊ ?
**ಅಂಗಡಿನವ ಹೇಳಿತ್ ಖಂಡಿತಾ ಕೊಡ್‌ಕ್.**
ಮರ್ಫಿ, ಫಿಲಿಪ್ಸ್, ಬುಶ್, ನೆಲ್ಕೋ ಯಾವುದು ಬೇಕು
ಹೇಳಿ.
**ರೇಕೋಜಿ ಹೇಳಿತ್·** ಅಣ್ಣಾ ನೀವು ಮೋಸ
ಮಾಡಿಕೆ ನೋಡ್‌ಬೇಡಿ. ನಂಗೆ ಎಲ್ಲಾ ಗೊತ್ತುಟು.
ನಂಗೆ ಆಲ್ ಇಂಡಿಯಾ ರೇಡಿಯೋ ಕೊಡಿ.



# ಕಿವಿ ಮಾತು

—ಕೋಳಿವಾಡ ಎ. ತಮ್ಮಯ್ಯ
ಬೆಂಗಳೂರು

[ಸಮಾಜದಲ್ಲಿ ಒಗ್ಗಟ್ಟು ಮುಖ್ಯ ಎಂಬುದು ಎಲ್ಲರ ಅಭಿಪ್ರಾಯ ಆದರೆ ಈ ಅಭಿಪ್ರಾಯದಂತೆ ನಡೆಯದಿರುವುದರಿಂದ ನಮ್ಮ ಸಮಾಜ ಹಿಂದಿದೆ ಎಂಬ ಶ್ರೀ ತಮ್ಮಯ್ಯನವರ ಅಭಿಪ್ರಾಯ ಸತ್ಯ ಸಮ್ಮತ. ಇದನ್ನು ಸಮಾಜದ ಎಲ್ಲಾ ಸದಸ್ಯರು ಕಾಯಾ–ವಾಚಾ–ಮನಸ್ಸಿನಿಂದ ಅನುಷ್ಠಾನಕ್ಕೆ ತಂದರೆ ಸಮಾಜದ ಪ್ರಗತಿಗೆ ದಾರಿಯಾಗುವುದು. ಸಂ]

---

ನಮ್ಮ ಸಮಾಜ ಹಾಗೂ ಜನಾಂಗದ ಯುವಕ ಯುವತಿಯರ ಬಗ್ಗೆ ಹೇಳಬೇಕೆಂದರೆ ನಾವುಗಳು 21ನೇ ಶತಮಾನದತ್ತ ಮುನ್ನಗ್ಗುತ್ತಿದ್ದರೂ, ನಮ್ಮ ಸಮಾಜ ಹಾಗೂ ಜನಾಂಗ ಇನ್ನೂ ಹಿಂದೆ ಉಳಿಯುತ್ತಿದೆ. ಈ ಹಿನ್ನಲೆಗೆ ಕಾರಣ ಮುಖ್ಯವಾಗಿ ಒಗ್ಗಟ್ಟು, ಒಂದೇ ಮನೋಭಾವ ಆತ್ಮ ವಿಶ್ವಾಸ ನಮ್ಮಲ್ಲಿ ಮೂಡಿ ಬಂದಿಲ್ಲ. ನಮ್ಮ ಜನಾಂಗದವರು ಮೂರು ಲಕ್ಷ ಜನರಿದ್ದರೂ ಸಂಖ್ಯೆಯಲ್ಲಿದೆಯಷ್ಟೆ. ಇವರಲ್ಲಿ ಬೆಂಗಳೂರಿಗೆ ಬಂದು ವಿಧ್ಯಾಭ್ಯಾಸ, ಉದ್ಯೋಗ, ವ್ಯಾಪಾರ ಎಂದು ನೆಲೆಸಿದ್ದಾರೆ.ನಮ್ಮಲ್ಲಿ ಕೆಲವರು ಆದರ್ಶ ಹಾಗೂ ಬಹುಮುಖ ಪ್ರತಿಭೆ ಗಳಿದ್ದಾರೆ. ಆದರೆ ಅವರನ್ನು ಈ ವತ್ತಿಗೂ ಗುರುತಿಸುವವರಿಲ್ಲ ಇನ್ನೂ ಕುಲಂಕುಶವಾಗಿ ತಿಳಿಸಬೇಕೆಂದರೆ ನಮ್ಮಲ್ಲಿ ಆದರ್ಶ ವಿದ್ಯಾವಂತರಿದ್ದಾರೆ, ರಾಜಕೀಯವಾಗಿ ಹೇಳಬೇಕೆಂದರೆ ನಮ್ಮಲಿ ಕೆಲವು ಉದಾಹರಣೆ ವ್ಯಕ್ತಿಗಳಿದ್ದಾರೆ. ಕೆಲವರು ಮುಂದೆ ಬಂದರೆ ಅವರಿಗೆ ನಮ್ಮ ಜನಾಂಗದವರಿಂದ ತಿರಸ್ಕಾರ, ಒಬ್ಬವ್ಯಕ್ತಿ ಮುಂದುವರಿಯಬೇಕಾದರೆ ಆ ಜನಾಂಗದ ಜನರಿಂದ ಪ್ರೋತ್ಸಾಹ ಮುಖ್ಯ ಎಂಬುದನ್ನು ನಾವು ಮರೆಯಬಾರದು, ಉದಾಹರಣೆ ನಮ್ಮ ಅಕ್ಕ ಪಕ್ಕದ ಜನಾಂಗದವರನ್ನಾದರು ನೋಡಿ ಕಲಿಯಬೇಕು. ನಮ್ಮ ಯುವಕ ಯುವತಿಯರಲ್ಲಿ ಇಂತಹ ಉತ್ಸಾಹ ಬರಬೇಕು ಹಾಗೂ ಕ್ರಾಂತಿಕಾರಿಯಾಗಿರಬೇಕು. ನಮ್ಮ ಸಮಾಜ ಹಾಗೂ ನಮ್ಮ ಯುವಕ ಯುವತಿಯರಲ್ಲಿ ತಮ್ಮಲ್ಲಿ ಮೂಡಿಬರಬೇಕು, ಜನಾಂಗಕ್ಕಾಗಿ ದುಡಿಯಬೇಕು ಎಂಬುದು ನಮ್ಮ ಹಾಗೂ ಇದರಲ್ಲಿ ನಮ್ಮ ಪಾತ್ರ ಬಹುಮುಖ್ಯ ಎಂಬುದನ್ನು ಪ್ರತಿಯೊಬ್ಬರೂ ಮರೆಯಬಾರದು, ಇದರಲ್ಲಿ ಹಲವು ಅಡೆತಡೆಗಳು ಬರಬಹುದು. ಸಮಾಜ ಎಂದಾಗ ಇದೆಲ್ಲವನ್ನು ಸರ್ವ ಸಾಮಾನ್ಯ ದಿಟ್ಟತನದಿಂದ ಎದುರಿಸಬೇಕು. ಆರ್ಥಿಕವಾಗಿ ನಮ್ಮ ಕೆಲವು ವ್ಯಕ್ತಿಗಳು ಸಮಾಜಕ್ಕೆ ದಾರಿ ದೀಪವಾಗಬೇಕು. ನಮ್ಮ ಕೆಲವು ಬಡಬಹುಮುಖ ಪ್ರತಿಭೆಗಳಿಗೆ ನಮ್ಮ ಸಮಾಜ ಪ್ರಯೋಜನಕಾರಿಯಾಗಬೇಕು, ಇನ್ನು ಭಿನ್ನಾಭಿಪ್ರಾಯ ಇದು ಒಂದು ರೀತಿಯ "ಕ್ಯಾನ್ಸರ್" ಇದ್ದ ಹಾಗೆ, ಈ ಭಿನಾಭಿಪ್ರಾಯ ಎಂಬುವನ್ನು ತೊಡೆದು ಹಾಕಿ ಎಲ್ಲರೂ ಒಗ್ಗಟ್ಟಾಗಿ ದುಡಿದರೆ ನಮ್ಮ ಗೌಡ ಸಮಾಜ ಮುಂದುವರಿಯುತ್ತದೆ ಎಂಬುದರಲ್ಲಿ ಸಂದೇಹವೇಯಿಲ್ಲ, ಹೀಗಾಗದಿದ್ದಲ್ಲಿ ನಮ್ಮ ಸಮಾಜ ಬೇರೆ ಜನಾಂಗದ ಸಮಾಜಕ್ಕೆ ಮಾದರಿಯಾಗುವುದು ಒಂದು ಕನಸಷ್ಟೆ. ಹೀಗಾಗಬಾರದೆಂದು ನಮ್ಮ ಬೆಂಗಳೂರು ಘಟಕದ ಗೌಡ ಸಮಾಜದ ಏಳಿಗೆಗಾಗಿ ಎಲ್ಲರೂ ಒಗ್ಗಟಾಗಿ ಒಂದೇ ಮನಸ್ಸಿನಿಂದ ಎಲ್ಲರೂ ಸೇರಿ ದುಡಿಯುವ ಎಂಬುದು ನನ್ನ ಅಭಿಪ್ರಾಯ.

# ಶ್ರೇಯಸ್ಸು ಯಾರಿಗೆ ಸಲ್ಲಬೇಕು?

ಮೂಲೆಮಜ್ಲು ಚಿಣ್ಣಪ್ಪ
ಬೆಂಗಳೂರು.

( ಸಮಾಜದ ಕೆಲಸ ಒಬ್ಬ ವ್ಯಕ್ತಿಯಿಂದಾಯಿತೆಂದು ಹೇಳಿ ಕೊಳ್ಳುವುದು ಸಲ್ಲದು. ವ್ಯಕ್ತಿ ಸೇವಾ ಮನೋಭಾವದಿಂದ ಸೇವೆ ಸಲ್ಲಿಸಬೇಕು.

ಶ್ರೀ ಮೂಲೆಮಜ್ಲು ಚಿಣಪ್ಪನವರು ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದಲ್ಲಿ ದುಡಿದ ವ್ಯಕ್ತಿಗಳ ಪರಿಚಯವನ್ನು ಈ ಲೇಖನದಲ್ಲಿ ಮಾಡಿದ್ದಾರೆ.

ಸಂ.)

ನಮ್ಮ ಜನಾಂಗದಲ್ಲಿ ಘನೋದ್ದಾತ ಧೀರರು, ಬುದ್ಧಿ ಜೀವಿಗಳು, ಸಾಹಿತಿಗಳು, ಕವಿಗಳು, ವಿದ್ವ ಜನರು, ಸಮಾಜ ಸೇವಾ ಧುರೀಣ ಕಾರ್ಯಕರ್ತರು ಇದ್ದಾರೆ. ಅಂಥವರ ಸಾಲಿನಲ್ಲಿ ಪೂಜಾರಿ ಮೊಣ್ಣಪ್ಪ ಲಾಯರೂ ಒಬ್ಬರು.

ಇವರ ಭಾತೃ ಪ್ರೇಮಕ್ಕೆ ಬೆಂಗಳೂರಿನಲ್ಲಿರುವ ಕೊಡಗು ಮತ್ತು ದ.ಕ. ಗೌಡ ಸಮಾಜ ಮತ್ತು ಕೆಂಪೇಗೌಡ ರೂರಲ್ ಹೌಸ್ ಬಿಲ್ಡಿಂಗ್ ಕೋ– ಆಪರೇಟೀವ್ ಸೊಸೈಟಿಯೇ ಸಾಕ್ಷಿ. ನಮ್ಮ ಗೌಡ ಸಮಾಜಕ್ಕೆ ಇವರೇ ಬೆನ್ನೆಲುಬು. ಈ ಸೊಸೈಟಿಗೆ ಇವರೇ ಹದೃಯ ಎಂದರೆ ಅತಿಶಯೋಕ್ತಿ ಯಾಗಲಾರದು.

ಏಕೆಂದರೆ 1964ರಲ್ಲಿ ಬೆಂಗಳೂರಿನಲ್ಲಿ ಮೊಟ್ಟ ಮೊದಲು "ಗೌಡ ಸಮಾಜ" ಪ್ರಾರಂಭವಾದಾಗಿನಿಂದ ಇಂದಿನವರೆಗೂ ಅವರ ಅವಿಶ್ರಾಂತ ಶ್ರಮವನ್ನು ನಾವೆಲ್ಲರೂ ಕೊಂಡಾಡುವಂತದ್ದು. ಮೊದಲು ಸಮಾಜ ಸ್ಥಾಪನೆಯಾಗಬೇಕಾದರೆ ಸಮಾಜದ ಕಾರ್ಯಕಾರಿ ಸ್ಥಾಪಕ ಸದಸ್ಯರಾಗಿ ಪಟ್ಟ ಪಾಡು ದೇವರಿಗೇ ಅರ್ಪಿತವಾಗಬೇಕು. ಬೆಂಗಳೂರಿನಲ್ಲಿ ಜೀವನವನ್ನು ಸಾಗಿಸಲು ತುಂಬಾ ಕಷ್ಟಕರವಾದ ಆ ಸಂದರ್ಭದಲ್ಲಿ ಕೈಯಿಂದಲೇ ಸ್ವಂತ ಹಣ ಖರ್ಚು ಮಾಡಿಕೊಂಡು ನಮ್ಮವರ (ಕೊಡಗು ಮತ್ತು ದ.ಕ. ಗೌಡ ಜನರ) ವಿಳಾಸಗಳನ್ನು ಹುಡುಕಿ ಹಿಡಿದು ಅವರೆಲ್ಲರ ಮನೆ ಮನೆಗಳಿಗೆ ಹೋಗಿ ಸಮಾಜ ಸ್ಥಾಪನೆ ಬಗ್ಗೆ ತಿಳುವಳಿಕೆ ನೀಡಿ ಸದಸ್ಯರನ್ನಾಗಿ ಮಾಡಬೇಕಾದರೆ ಅವರ ಶ್ರಮದ ಬಗ್ಗೆ ಹೇಳಲು ಸರಿಯಾದ ಪದಗಳೇ ಸಿಗುವುದಿಲ್ಲ.

1964ರಲ್ಲಿ "ಕೊಡಗು ಗೌಡ ಸಮಾಜ"ವೂ ಈ ಸಮಾಜದಿಂದ ಬೇರ್ಪಟ್ಟರೂ ದಕ್ಷಿಣ ಕನ್ನಡದ ಗೌಡರೂ ಕೊಡಗಿನ ಗೌಡರೂ ಒಂದೇ ವಂಶಸ್ಥರು ಎಂದು ಪ್ರತಿಪಾದಿಸಿ 1968 ರಲ್ಲಿ ಕೊಡಗು ಗೌಡ ಸಮಾಜದ ಅಧ್ಯಕ್ಷರಾಗಿ ಸೇವೆ ಸಲ್ಲಿಸುವಷ್ಟರಲ್ಲೆ ಬಹು ಜನರಿಂದ ಅವಹೇಳನಕ್ಕೆ ಒಳಗಾದರು. ಇದಾವುದನ್ನೂ ಲೆಕ್ಕಿಸದೆ 1970 ರಲ್ಲಿ ಶ್ರೀಯುತರ ಸಂಪಾದಕತ್ವದಲ್ಲಿ "ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಂಸ್ಕೃತಿ" ಎಂಬ ಅತ್ಯಮೂಲ್ಯವಾದ ವಿಶೇಷ ಸಂಚಿಕೆಯನ್ನು ಹೊರ ತರಲು ಅವಿರತ ಶ್ರಮ ಪಟ್ಟರು. ಸಮಾಜದ ಖಜಾನೆಯಲ್ಲಿ ಹಣವಿಲ್ಲದಿದ್ದ ಈ ಸಂದರ್ಭದಲ್ಲಿ ಮುದ್ರಣಕಾರರ ಸಹಕಾರದೊಂದಿಗೆ ಪುಸ್ತಕ ಬಿಡುಗಡೆ ಮಾಡಿ ಮಾರಾಟ ಮಾಡಿ ಬಂದ ಹಣದಲ್ಲಿ ಮುದ್ರಕರ ಸಾಲ ತೀರಿಸ ಬೇಕಾದರೆ ಪಟ್ಟ ಶ್ರಮ ಅಷ್ಟಿಷ್ಟಲ್ಲ.

ತದನಂತರ ಸಮಾಜಕ್ಕೆ ತನ್ನದೇ ಆದ ಸ್ವಂತ ಕಟ್ಟಡ ಬೇಕು. ಅದಕ್ಕಾಗಿ ಒಂದು ನಿವೇಶನವನ್ನು ಕೊಂಡುಕೊಳ್ಳಬೇಕು ಎಂಬ ಆಸೆ ಚಿಗುರಿತಾದರೂ ತಾವಾಗಿ ಕೈ ನೀಡಿ ಧನಸಹಾಯ ಮಾಡುವ ಮಹನೀಯರಾರೂ ಮುಂದೆ ಬರಲಿಲ್ಲಿ. ಆಗ ಬಿ.ಇ.ಎಲ್. ನಲ್ಲಿ ನೌಕರರಾಗಿದ್ದ ಟಿ. ಎಂ. ಬಾಬು ಎಂಬುವರಿಂದ ಶ್ರೀ ದಂಬೆಕೋಡಿ ಆನಂದರವರೊಡಗೂಡಿ ಶ್ರೀಯುತ ಮೊಣ್ಣಪ್ಪನವರು ಸಾಲವಾಗಿ ಪಡೆದು ಗಂಗೇನಹಳ್ಳಿಯ ಬಡಾವಣೆಯಲ್ಲಿ ಒಂದು ನಿವೇಶನವನ್ನು ಕೊಂಡು ಕೊಳ್ಳಬೇಕಾದರೆ ಅವರು ಎದುರಿಸಬೇಕಾದ ನಮ್ಮವರ ಹಲವಾರು ಅವಹೇಳನಗಳನ್ನು ಲೆಕ್ಕಿಸದೆ ಪ್ರಯತ್ನದಲ್ಲಿ ಸಫಲರಾದರು. ಬಳಿಕ ಕಟ್ಟಡವನ್ನು ಕಟ್ಟುವ ಸಲುವಾಗಿ ಊರುರೂ ಅಲೆದಾಡಿ ತಮ್ಮ ಸಮಾಜ ಅಭಿವೃದ್ಧಿಯ ಬಗ್ಗೆ ಜನರಿಗೆ ಕೂಲಂಕುಶವಾಗಿ ವಿವರನೀಡಿ ಹಣವಂತಿಗೆ ವಸುಲಾತಿಯಲ್ಲಿ ಸೊಂಟ ಕಟ್ಟಿ ನಿಂತರು. ಎಷ್ಟು ಹಣ ಸಂಗ್ರಹಿಸಿದರೂ ಅದಕ್ಕಿಂತ ವೇಗವಾಗಿ ಕಟ್ಟಡ ಕಟ್ಟಲಿಕ್ಕೆ ತಗಲುವ ವೆಚ್ಚವು ದಿನೇ ದಿನೇ ಇಮ್ಮಡಿಯಾಗಿ ಏರಿದುದರಿಂದ ಕಟ್ಟಡ ಕಟ್ಟುವ ಹಂಬಲ ಕನಸಾಗಿಯೇ ಉಳಿಯಿತು. ಈ ಮಧ್ಯೆ ಇಬ್ಭಾಗವಾದ ಎರಡು ಸಮಾಜದವರನ್ನು ಒಟ್ಟು ಗೂಡಿಸುವ ಸಂಧಾನಕ್ಕೆ ಪ್ರಯತ್ನಿಸಿದ್ದಾರೆ. ಇದರ ಪರವಾಗಿ ಮಾತುಕತೆಗಳು ಹಲವು ಬಾರಿ ನಡೆಯಿತಾದರೂ ಇಬ್ಬಗೆಯಾಗಿಯೇ ಉಳಿಯಿತು. ಇನ್ನು ಅದನ್ನೇ ಪ್ರತಿಪಾದಿಸುವ ನಮ್ಮ ಬಂಧುಗಳಿಗೆ ದೇವರು ಇನ್ನಾದರೂ ಒಂದಾಗುವ ಮನಸ್ಸು ಕೊಡಲೆಂದು ಹಾರೈಸುತ್ತೇನೆ.

ಆದರೂ ದಿಟ್ಟತನದಿಂದ ಇನೊಂದು ಮಹತ್ತಾದ ಕಾರ್ಯದಲ್ಲಿ ಧುಮಿಕಿದರು. ಅದೇನೆಂದರೆ ನಮ್ಮ ಸಮಾಜದ ಬಂಧು ಬಳಗದವರಿಗೆ ಕಡಿಮೆ ವೆಚ್ಚದಲ್ಲಿ ಒಂದೇ ಕಡೆಯಲ್ಲಿ ನಿವೇಶನಗಳನ್ನು ಒದಗಿಸುವುದು. ಹಣ ದುಬ್ಬರವು ಗಗನಕ್ಕೇರಿದ ಈ ದಿಸೆಯಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಮನೆ ಅಥವಾ ನಿವೇಶನ ಕೊಂಡು ಕೊಳ್ಳುವುದಂತೂ ನಮ್ಮವರಿಗೆ ಕೈಗೆಟಕದ ವಿಚಾರ. ಈ ವಿಚಾರವನ್ನು ನಮ್ಮ ಸಮಾಜದ ಕಾರ್ಯಕಾರಿ ಮಂಡಳಿ ಸಭೆಯ ಮುಂದಿಟ್ಟಾಗ "ನೀರಿಳಿಯದ ಗಂಟಲೊಳಗೆ ಕಡಬು ತುರುಕಿದಂತಾಯ್ತು" ಎಂದು ಅಪಹಾಸ್ಯ ಮಾಡಿದರು. ಆದರೂ ಶ್ರೀಯುತರು ನಿರುತ್ಸಾಹಗೊಳ್ಳದೆ ಟೀಕೆ ಟಿಪ್ಪಣಿ ದೋಷ ದೂಷಣೆಗಳಿಗೆ ಇಂಬುಗೊಡದೆ ಕಾರ್ಯ ಪ್ರವರ್ತರಾದರು. ಇವರ ಪ್ರಾಮಾಣಿಕ ವಕೀಲ ವೃತ್ತಿಯಲ್ಲಿ ಅಪಾರ ವಿಶ್ವಾಸ ಹೊಂದಿದ ಇಲ್ಲಿಯ ಜಮೀನ್ದಾರರು, ಶ್ರೀ ಮೊಣ್ಣಪ್ಪ ಲಾಯರ ಅಲೆದಾಟ ಪರದಾಟ ಆತುರ ಆಕಾಂಕ್ಷೆಗಳನ್ನು ಕಂಡು ಮನನೊಂದು ತಾವಾಗಿಯೇ ಲಗ್ಗೆರೆ ಎಂಬ ಸ್ಥಳಗಳಲ್ಲಿ ಸುಮಾರು 13 ಎಕರೆ ವಿಸ್ತೀರ್ಣವುಳ್ಳ ಜಾಗವನ್ನು ಕೊಡಲು ಮುಂದೆ ಬಂದರು. ಅಂತೆಯೇ ಜಮೀನ್ದಾರರಿಗೆ ಕಂತು ಕಂತಾಗಿ ಹಣ ಪಾವತಿ ಮಾಡುತ್ತಾ ಜನರಿಂದ ಹಣ ವಸೂಲಿ ಕೆಲಸ ಆರಂಭವಾಯಿತು.

ಹಿಂದಿನಂತೆಯೇ ನಗರ, ಪಟ್ಟಣ, ಹಳ್ಳಿಗಳೆನ್ನದೇ ಮನೆ ಮನೆಗೂ ಲಾಯರ ದರ್ಶನ ಆರಂಭವಾಯ್ತು. ಸಮಾಜಕ್ಕೆ ಹಣ ವಂತಿಗೆ ಕೇಳಲು ಬಂದರೆಂದೂ ಜನರು ಅವರನ್ನು ನೋಡಿದಾಕ್ಷಣ ಮುನಿಸಿಕೊಳ್ಳುತ್ತಿದ್ದರು. ನಿವೇಶನದ ಬಗ್ಗೆ ತಿಳಿಸಿ ತಾವುಗಳೆಲ್ಲರೂ ಸದಸ್ಯರಾಗಿ ನಿವೇಶನಗಳನ್ನು ಕೊಂಡುಕೊಳ್ಳಲು

ಮುಂದೆ ಬರಬೇಕೆಂದು ತಿಳಿಸಿದರೂ ಸತ್ಯಾಂಶ ತಿಳಿಯಲು ಜನರಿಗೆ ಸ್ವಲ್ಪ ಸಮಯವೇ ಹಿಡಿಯಿತು. ಯಾಕೆಂದರೆ ಸಮಾಜದ ಕಟ್ಟಡ ಕಟ್ಟಲೆಂದು ವಂತಿಗೆ ವಸೂಲು ಮಾಡಿದರೂ ಕಟ್ಟಡ ಕಟ್ಟಲಾಗದವರು ನಿವೇಶನವನ್ನು ಕೊಡಿಸುವುದಾದರೂ ಹೇಗೆ ? ಇದರ ಕೈಲಾಗದ ಕೆಲಸವೆಂದು ಸಂಶಯ ಪಡುತ್ತಿದ್ದರು. ಹೀಗೆ ನಮ್ಮವರು ಹೆಚ್ಚಿನ ಸಂಖ್ಯೆಯಲ್ಲಿ ಹಣ ಕೊಡಲು ಹಿಂಜರಿಯುತ್ತಿದ್ದುದರಿಂದ ಪರಜಾತಿಯವರಾದ ಬಂಟರು ಬಲ್ಲವರಿಂದಲೂ ನಿವೇಶನದ ಬಗ್ಗೆ ಹಣ ಪಡೆದು ಸದಸ್ಯರನ್ನಾಗಿ ಮಾಡಿ ಜಮೀನ್ದಾರರಿಗೆ ತಕ್ಕ ಅವಧಿಗೆ ಸರಿಯಾದ ಹಣ ಪಾವತಿ ಮಾಡಬೇಕಾಗಿತ್ತು. ಅಲ್ಲದೆ ನಿವೇಶನದ ರಿಜಿಸ್ಟ್ರೇಷನ್ ಮತ್ತು ನಗರಾಭಿವೃದ್ಧಿ ಪ್ರಾಧಿಕಾರದ ಅಪ್ಪಣೆ ತುರ್ತು ಹಣ ಬೇಕಾಗಿದ್ದುದರಿಂದ ಬೇರೆಯವರ ಸದಸ್ಯತ್ವವನ್ನು ಪಡೆದು ಹಣ ಸಂಗ್ರಹಿಸಲಾಯ್ತು. ಇಷ್ಟರಲ್ಲಿ ಶ್ರೀಯುತರು ಪಟ್ಟ ಪಾಡು" ವೈರಿಗಳ ಕೈಗೆ ಸಿಕ್ಕಿಕೊಂಡ ಸೈನ್ಯಾಧಿಕಾರಿ"ಯಂತಾಯ್ತು.

ಅಧಿಕಾರ ಲಾಲನೆಯನ್ನು ತೊರೆದು ಅಧ್ಯಕ್ಷ ಸ್ಥಾನಕ್ಕೆ ರಾಜಿನಾಮೆಯಿತ್ತು. ಕಾನೂನು ಸಲಹೆಗಾರರಾಗಿ ವಕೀಲ ವೃತ್ತಿಯನ್ನು ಮುಂದುವರಿಸುತ್ತಾ ಕಾನೂನು ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಗೌಡ ಜನಾಂಗವನ್ನು ಮುಂದುವರಿದ ಪಂಗಡಕ್ಕೆ ವರ್ಗಾಯಿಸುವುದನ್ನು ವಿರೋಧಿಸುವಲ್ಲಿ ಕೊಡಗು ಮತ್ತು ದ. ಕ. ಗೌಡ ಸಮಾಜದ ಪ್ರತಿನಿಧಿಯಾಗಿ "ಜಟ್ಟಿ ಕುಪ್ಪಸ ತೊಟ್ಟು" ವೀರಾವೇಶದಿಂದ ಹೋರಾಟ ನಡೆಸಿದರು.

ಇವರು ಬಹು ಸರಳ ಜೀವಿ, ಸ್ನೇಹ ಮಯಿ, ನಮ್ಮವರಿಗಾಗಿ ಮಾಡಿದ ಇವರ ತ್ಯಾಗ ಚಿರಸ್ಮರಣೀಯ. ನಮ್ಮವರಿಗಾಗಿ ಅವರು ದುಡಿಯುವ ಬದಲು ಜಾತ್ಯಾತೀತವಾಗಿದ್ದಿದ್ದರೆ ಸರಕಾರವು ಇವರನ್ನು ಗಮನಿಸಿ ಪದ್ಮಭೂಷಣ ಪ್ರಶಸ್ತ ನೀಡಿ ಗೌರವಿಸುತ್ತಿತ್ತೋ ಅನ್ನಿಸುತ್ತದೆ. ಅಂತೂ "ಸತ್ತ ಎಮ್ಮೆಗೆ ಹತ್ತು ಕುತ್ತಿ ಹಾಲಿತ್ತು" ಎಂಬುದಾಗಿ ಕಾಲ ಮಿಂಚಿ ಹೋದ ಬಳಿಕ ಕೊಂಡಾಡುವುದಕ್ಕಿಂತ ಇದನ್ನು ಗೌಡ ಸಮಾಜ ಸ್ಮರಿಸಬೇಕು.

ಇವರು ಇನ್ನೂ ಹತ್ತಾರು ಆಶೆ ಆಕಾಂಕ್ಷೆಗಳನ್ನು ಹೊತ್ತುನಿಂತ 58ರ ಹರೆಯದ ವೀರ ತರುಣ. ಅವರ ಮುಖ್ಯ ಮುಂದಿನ ಆಶೆ ಅಕಾಂಕ್ಷೆಗಳು ಇವೇ ಮುಂತಾದವುಗಳು.

1) ವರದಕ್ಷಿಣೆ ಪದ್ಧತಿ ನಿರ್ಮೂಲನೆ,
2) ಎಳೆ ವಯಸ್ಸಿನ ವಿಧವೆಯರ ಮರು ವಿವಾಹಕ್ಕೆ ಪ್ರೋತ್ಸಾಹ.
3) ನೂತನ ವಧು — ವರಾನ್ವೇಷಣಾ ಕೇಂದ್ರದ ಸ್ಥಾಪನೆ.
4) ಕಡು ಬಡ ಮಕ್ಕಳ ವಿದ್ಯಾಭಿವೃದ್ಧಿಯೋಜನೆ.
5) ನಿರ್ಗತಿಕ ಯಾ ಕಡು ಬಡವ—ವಯೋವೃದ್ಧಾಶ್ರಮ ಸ್ಥಾಪನೆ
6) ಕಡು ಅಂಗವಿಕಲ — ಮನೋವಿಕಲರಿಗೆ ತರಬೇತಿ ಮತ್ತು ಆಶ್ರಯ.

ಇವನ್ನೆಲ್ಲಾ ಕಾರ್ಯಗತಗೊಳಿಸಲು ಸಾಧ್ಯವೇ ಎಂದು ಕೇಳಿದರೆ ಅವರು "ಕೈಲಾಗದು ಎಂದು ಕೈ ಕಟ್ಟಿ ಕುಳಿತರೆ. ಸಾಗಿತೆ ಕೆಲಸವು ಮುಂದೆ" ಮನಸಿದ್ದರೆ ಮಾರ್ಗವಿದೆ. ಎಂಬುದೇ ಅವರ ರಾಗದ ದಾಟಿ, 18 ವರ್ಷಗಳಿಂದ ಕಟ್ಟಡ ಕಟ್ಟಲಾಗದೆ ಬಿದ್ದಿದ್ದ ನಿವೇಶನದಲ್ಲಿ ಕಟ್ಟಡ ಹೇಗೆ ಬಂತು ? ಮಾತ್ರವಲ್ಲ ಈಗ ಲಕ್ಷಂತರ ರೂಪ್ಯಾಗಳು ನಮ್ಮ ಲೆಕ್ಕದಲ್ಲಿ ಜಮೆಯಾಗಿ ಉಳಿದಿದೆಯಲ್ಲ ಹೇಗೆ ? ಕಟ್ಟಡವನ್ನು ಕಟ್ಟುವ ಕೆಲಸವು ನಮ್ಮ ಜನಾಂಗದವರಿಂದಾಗುವಂತಹಃದಲ್ಲವೆಂದು ನಿವೇಶನವನ್ನು ಮಾರಾಟ ಮಾಡುವ ಯೋಜನೆ ಮಾಡಿರಲಿಲ್ಲವೇ ? ನಿವೇಶನವನ್ನು ಮಾರುತ್ತಿದ್ದರೆ ಗೌಳಿಗನು ಹಾಲಿನ ಆಸೆಗೆ ಹಸುವಿನ ಕೆಚ್ಚಲನ್ನೇ ಕೊಯ್ದಂತಾಗುತ್ತಿರಲಿಲ್ಲವೇ ? ಇವರ ಈ ರೀತಿಯ ಹುರುಪನ್ನು ಕಂಡು ಸಮಾಜದ ಈಗಿನ ಅಧ್ಯಕ್ಷರು ಡಾ॥ ವೀರಪ್ಪ ಗೌಡರು ಈ ಇಳಿ ವಯಸ್ಸನ್ನು ಲೆಕ್ಕಿಸದೆ ಕೊಡಗು ಮತ್ತು ದಕ್ಷಿಣ ಜಿಲ್ಲೆಗಳಿಗೆ ಚಂದಾ ವಸೂಲಾತಿಗೆ ಊರೂರು ಸುತ್ತಿ ಹಣ ಸಂಗ್ರಹಣ ಮಾಡಿದ್ದಾರೆ. ಶ್ರೀ ತೋಟಂಬೈಲು ನಾಣಯ್ಯ, ದಂಬೆಕೋಡಿ ಆನಂದ ಮತ್ತು ಅವರ ಸಹೋದರರು ಶ್ರೀ ಬಾರನದೇವಯ್ಯ ಐಯ್ಯಂಡ್ರ ಭೀಮಯ್ಯನವರು ಉತ್ಸಾಹ ಬರಿತವಾಗಿ ಸಮಾಜದ

ಕೆಲಸಗಳಿಗೆ ಭಾಗಿಯಾಗಿದ್ದಾರೆ. ಇದರೊಡನೆ ಯುವಕರಾದ ಶ್ರೀ ಪೊದ್ದೆಟ್ಟಿ ಭವಾನಿ ಶಂಕರ್, ಶ್ರೀ ಪೂಜಾರಿ ಬೋಪಯ್ಯ ಶ್ರೀ ಪೂಜಾರಿ ಪೂವಯ್ಯ ಶ್ರೀ ತಳೂರು ಮೊಣ್ಣಪ್ಪ ಶ್ರೀ ಕುರುಂಜಿ ಭೀಮಯ್ಯ ಶ್ರೀ ಪಾಂಬಾಡಿ ತಮ್ಮಪ್ಪ ಶ್ರೀ ದೇವಜನ ಗಣಪತಿ ಮುಂತಾದವರು ತಮ್ಮ ಕೆಲಸಗಳಿಗೆ ರಜ ಹಾಕಿ ಊರೂರು ಸುತ್ತಿ ಸೆಣಸಿದ್ದಾರೆ. ಡಾ॥ ಪಂಡಬೈಲು ಮುದ್ದಪ್ಪಗೌಡರು ಶ್ರೀ ಕೆ. ವಿ. ರವೀಂದ್ರನಾಥರು ಬೆಂಗಳೂರಿನ ನಮ್ಮ ಸಮಾಜದವರನ್ನು ಭೇಟಿ ಮಾಡಲು ಶ್ರಮಿಸಿದ್ದಾರೆ. ಪುರುಷರೊಡನೆ ಸರಿಸಮಾನವಾಗಿ ದುಡಿಯಲು ಶ್ರೀಮತಿ ಚಂದ್ರಾವತಿ ಚಾಮಯ್ಯನವರು ದುಡಿದಿದ್ದಾರೆ. ಇದಲ್ಲದೆ ಹಲವಾರು ಮಹಾನೀಯರೂ ಸಂದರ್ಭೋಚಿತ ಕೆಲಸ ಮಾಡಿದ್ದಾರೆ. ಇವರೆಲ್ಲರೂ ಸಮಾಜದ ಹಣ ಸಂಗ್ರಹಣೆ ಕೆಲಸದಲ್ಲಿ ಹೆಚ್ಚಿನ ಆಸಕ್ತಿತೋರಿಸಿ ಕೆಲಸ ಮಾಡಿದ್ದಾರೆ. ಈ ಮೇಲ್ಕಂಡ ಮಹನೀಯರಲ್ಲದೆ ಎಲ್ಲಾ ಕಾರ್ಯಕಾರಿ ಮಂಡಲಿಯ ಸದಸ್ಯರು ತಾವು ಕಾರ್ಯಕಾರಿ ಮಂಡಲಿಯ ಸದಸ್ಯರಾಗಿದ್ದಾಗ ಮನೆ ಮನೆಗಳಿಗೆ ಭೇಟಿ ಕೊಟ್ಟು ಚಂದಾ ವಸೂಲಾತಿ ಮಾಡಿ ಸಮಾಜದ ಕಾರ್ಯಕ್ರಮಗಳಿಗೆ ಸಹಾಯಕರಾಗಿದ್ದಾರೆ.

ನಮ್ಮ ಅದೃಷ್ಟಕ್ಕೆ ಎಂಬಂತೆ "ರೋಗಿ ಬಯಸ್ಸಿದ್ದೂ ಹಾಲುವೈದ್ಯ ಕೊಟ್ಟಿದ್ದೂ ಹಾಲು" ಎಂದ ಹಾಗೆ ಲಕ್ಷ್ಮಣ ಗೌಡರು ನಮಗಿಂದು ದೇವರು ಕೊಟ್ಟ ವರವಾಗಿದ್ದಾರೆ, ಇಂದಿನ ಈ ಪ್ರಗತಿಯು ಶ್ರೀ ಲಕ್ಷ್ಮಣ ಗೌಡರ ಜಾಣ್ಮೆಯ ಪ್ರತೀಕ ನಾವೇನೂ ಆರಂಭ ಶೂರರೇ ಹೊರತು ಕೆಲಸ ಪೂರೈಸುವಷ್ಟರಲ್ಲಿ ಕಚ್ಚಾಡುವ ಪ್ರವೃತ್ತಿಯೇ ಆಗಿತ್ತು. ಶ್ರೀಯುತರಾದ ಡಾ॥ ವೀರಪ್ಪಗೌಡರು ಶ್ರೀಯುತ ಲಕ್ಷ್ಮಣ ಗೌಡರು, ಶ್ರೀಯುತ ರಾಮಣ್ಣ ಗೌಡರು ಶ್ರೀಯುತ ಕೆ. ಆರ್. ಚಾಮಯ್ಯನವರು ತರುಣ ಸಾಹಸಿ ಎನ್. ನಾಣಯ್ಯನವರೇ ಮುಂತಾದ ಕಾರ್ಯಕಾರೀ ಸದಸ್ಯರೆಲ್ಲರ ಅಪಾರವಾದ ಶ್ರಮದ ಫಲವೇ ಇಂದಿನ ಸಮಾರಂಭ.

ಶ್ರೀ ಮೊಣ್ಣಪ್ಪನವರಂತೆ ಶ್ರೀಯುತ ಲಕ್ಷ್ಮಣ ಗೌಡರು ನಮ್ಮ ಸಮಾಜದ ಸ್ಥಾಪನೆಯಾದಾಗಿನಿಂದಲೇ ಕಾರ್ಯಕಾರಿ ಮಂಡಳಿಯಲ್ಲಿರುತ್ತಿದ್ದರೆ, ಸುಮಾರು ಹತ್ತು ವರ್ಷಗಳ ಹಿಂದೆಯೇ ಈ ಭವ್ಯ ಭವನ ಎದ್ದು ನಿಂತು ನಮ್ಮವರೆಲ್ಲರೂ ತಮ್ಮ ಸ್ವಂತಃ ನಿವೇಶನ ಪಡೆದು ತಮ್ಮ ಸ್ವತಃ ಮನೆಯಲ್ಲಿ ವಾಸಿಸುತ್ತಿದ್ದರೇನೋ ಎನ್ನಿಸುತ್ತದೆ.

ಶ್ರೀಯುತ ಲಕ್ಷ್ಮಣಗೌಡರ ವ್ಯಕ್ತಿತ್ವ, ಜಾಣ್ಮೆಯನ್ನು ಎಲ್ಲರೂ ಮನಗಂಡದ್ದು ಅವರು ನಮ್ಮ ಸೊಸೈಟಿಯ ಅಧ್ಯಕ್ಷ ಪೀಠವನ್ನೇರಿ ಈ ಮಹಾತ್ಕಾರ್ಯವನ್ನು ಪೂರೈಸಿದ ಬಳಿಕವೇ ಸರಿ. ಈವರೆಗೆ ಅವರ ವ್ಯಕ್ತಿತ್ವವನ್ನು ಗುರ್ತಿಸುವಷ್ಟು ಜಾಣ್ಮೆಯಾರಿಗೂ ಇರದಾಯ್ತು. ನಮ್ಮ ಜನಾಂಗದಲ್ಲಿ ಇನ್ನೆಷ್ಟು ಪ್ರತಿಭಾವಂತರು, ಮಹಾನುಭಾವರು ಮೇಧಾವಿಗಳು ನೈಪುಣ್ಯ ಶೀಲರು, ಬುದ್ಧಿ ಜೀವಿಗಳು — ಶ್ರಮ ಜೀವಿಗಳೂ ಇರಬಹುದೇನೋ "ತುಂಬಿದ ಕೊಡ ತುಳುಕುವುದಿಲ್ಲವಂತೆ" ಹಾಗೆಯೇ ಇಂತಃ ಅಪಾರ ದ್ರವ್ಯ ರಾಶಿಗಳಿಂದ ತುಂಬಿದ ಕೊಡಗಳನ್ನು ಗುರ್ತಿಸಿ ಹೊರತೆಗೆದು ಸದುಪಯೋಗಗೊಳಿಸಿ ಕೊಂಡಲ್ಲಿ ನಮ್ಮ ಎಲ್ಲಾ ರಂಗಗಳಲ್ಲೂ ಹುಡುಕಿದರೆ ಈ ಅಪಾರ ಸಂಪತ್ತು ತುಂಬಿ ಮೆರೆದಾಡುವುದರಲ್ಲಿ ಸಂದೇಹವಿಲ್ಲ. (ಉದಾ : ಕೋಡಿ ಕುಶಾಲಪ್ಪಗೌಡ (ಮದ್ರಾಸು ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರು) ಕೆ. ಚಿನ್ನಪ್ಪ ಗೌಡರು (ಮಂಗಳ ಗಂಗೋತ್ರಿಯಲ್ಲಿ ಕನ್ನಡ ಪ್ರಾಧ್ಯಾಪಕರು, ಕೊಳಂಬೆ ಚಿದಾನಂದ(ಮೈಸೂರಿನಲ್ಲಿ) ಅದಕ್ಕೆ ಬದಲಾಗಿ ಅಧಿಕಾರ ಲಾಲಸೆಯಿಂದ ಅರ್ಹರನ್ನು ಕಡೆಗಣಿಸಿ ಬದಿಗೊತ್ತಿ ತಾನು ಮುಂದು ನಾನು ಮುಂದು ಎಂದು ಸೆಣಸಾಡಿದರೆ ಎಲ್ಲ ಬಣ್ಣ ಮಸಿ ನುಂಗಿತು ಎನ್ನುವಂತೆ ನಮ್ಮವರೇ ಹೆಚ್ಚಾಗಿರುವ ಸುಳ್ಯದಲ್ಲಿ ಮಹಾ ಸಮ್ಮೇಳನವನ್ನು ವಿಜೃಂಭಣೆಯಿಂದ ಮಾಡಿ ಕೊನೆಗೆ ಚುನಾವಣೆಯಲ್ಲಿ ಮಾಪಿಳ್ಳೆಗೆ ಪಟ್ಟ ಕಟ್ಟಿದಂತಾದೀತು. ಇನ್ನಾದರೂ ಎಚ್ಚೆತ್ತು ನಮ್ಮವರ ಪ್ರತಿಭೆಯನ್ನು ಬೆಳಗುವುದರಲ್ಲಿ ಶ್ರಮಿಸೋಣ.



# ವರದಕ್ಷಿಣೆ

—ಹೊದ್ದೆಟ್ಟಿ ಭವಾನಿ ಶಂಕರ್
ಬೆಂಗಳೂರು

[ಶ್ರೀ ಯಂ. ಯಂ. ಗಿರಿಯವರು ತಮ್ಮ "ಕಂಡಿರಿ ಮಕ್ಕಳ ಮಾರ್ಕೇಟ್" ಲೇಖನ ಬಗ್ಗೆ ಯುವಕರಿಗೆ ಕಡಾ ಖಂಡಿತವಾದ ಮಾತಿನಲ್ಲಿ ಬುದ್ಧಿವಾದ ಹೇಳಿದ್ದಾರೆ. ಶ್ರೀ ಹೊದ್ದೆಟ್ಟಿ ಭವಾನಿ ಶಂಕರ್‌ರವರು ವರದಕ್ಷಿಣೆಯು ಸಮಾಜದಲ್ಲಿ ಎಷ್ಟೊಂದು ಹೀನ ರೀತಿಯ ಭಿಕ್ಷೆ ಎಂಬದಾಗಿ ಅರ್ಥ ಗರ್ಭಿತವಾಗಿ ಅರೆ ಭಾಷೆಯಲ್ಲಿ ಕವನವನ್ನು ರಚಿಸಿದ್ದಾರೆ ಹಾವು ಕುಡಿದ ವಿಷದಂತೆ ಕ್ಷಣ ಕ್ಷಣಕ್ಕೂ ಹೆಚ್ಚಾಗುತ್ತಿರುವ ಈ ಪಿಡುಗನ್ನ ಈ ರೀತಿ ಲೇಖನ ಕವನಗಳನ್ನು ಬರೆದು ಸಮಾಜದಲ್ಲಿರುವ ಈ ಜಾಡ್ಯವನ್ನು ತೊಡೆದು ಹಾಕುವುದಕ್ಕೆ ಒಂದು ಸಾಧನ ವಾದೀತು ಸಂ]

ಮೊದುವೆ ಆಕೆ ವರದಕ್ಷಿಣೆ ಬೇಕಡ
ಇಂದ್‌ನ ಪ್ರಾಯದ ಹುಡ್‌ಗರಿಗೆ ।
ವಿಷಯುನ ನೆನ್ನಿರೆ ಬೇಜಾರ ಅಲ್ಲದೆ
ನಾಚಿಕೆ ನಂಗಾದೆ ಮನ್ನೊಳಗೆ ॥

ಹೆಣ್ಣ್‌ನ ಜೊತೆಗೆ ವರದಕ್ಷಿಣೆ ಬೇಡಂವ
ಭಿಕ್ಷೆನೂ ಬೇಡಕ್ ಪೇಟೊಳೆಗೆ ।
ಹೆಣ್ಣ್‌ನ ಕಡೆಂದ ದುಡ್ಡ್‌ನ ತಕಂಬವ
ಹೆಣ್ಣ್‌ಗೆ ಗುಲಾಮು ಮನೆ ಒಳಗೆ ॥

ದಕ್ಷಿಣೆ ಕೊಡುವಂವ ದಕ್ಷಿಣೆ ತಕಂಬವ
ಇವರಿಬ್ಬರ್ದೂ ತೊಪ್ಪುಟ್ಟು ಇದರೊಳೆಗೆ ।
ಪಿರ್ಯಾದಿ ಕೊಟ್ಟರೆ ಪೊರ್ಯಾದಿ ಹೋದಂತ
ಈ ಸಂಗತಿ ನಡ್ದದೆ ಒಳೆಗೊಳಗೆ ॥

ಹಂಞ ಜನ ಹೈದಂಗ ಡೌರಿನ ಕೇಳ್ದುಲೆ
ಅವರಪ್ಪನು ಅವ್ವನು ಕೆಬಿ ಒಳಗೆ ।
ಮಂಜಂಗೆ ಹೇಳಿವೆ ಡೌರಿನ ತಕಣದೆ
ಕಾಲಿಸಬಡ ನೀ ಮನೆ ಒಳಗೆ ॥

ಕೆಲವೆಲ್ಲ ಹೇಳಿವೆ ಡೌರಿನೆ ಬೇಡ
ಸ್ಕೂಟರ್ ಜೊತೆಗೆ ಮನೆ ಮಂಜಂಗೆ ।
ಕೊಟ್ಟರೆ ಸಾಕ್ ಒಪ್ಪಿಒಪ್ಪಿರೆಂತಾದರೆ
ಭರವಸೆ ಕೊಟ್ಟನೆ ನಾ ನಿವುಗೆ ॥

ಇನ್ನೆಚ್ಚಿನ ಜನ ಚಿನ್ನದ ಒಡವೆಗ
ಹಾಕೊಕುಂತೇಳಿವೆ ಹೊಸ ಹೆಣ್ಣ್‌ಗೆ ।
ಪೌನು ಹದಿನೆಂಟರ ಮೇಲೆನೆ ಇರೊಕು
ಮೊದೊಳಿಗೆ ಬಾಕನ ನಮ್ಮನೆಗೆ ॥

ಹಾಂಗೂ ಡೌರಿನೆ ಹೀಂಗೂ ಬದಿನೆ
ಹೇಂಗೆ ಮಾಡಿರೊ ವರದಕ್ಷಿಣೆನೆ ।
ಇದ್ದರೆಲ್ಲ ಇದ್ದಾಂಗೆ ಬರ್ದೊಳಿ
ನಂಗಿಲ್ಲೆ ಕಂಡಿತ ದಾಕ್ಷಿಣನೆ ॥

ಹೆಣ್ಣೇ ಲೋಕಕೆ ಕಾರಣಂತಾಕನ
ಹೆಣ್ಣ್‌ಗೆ ತೋರ್ರೊಕು ಆಭಿಮಾನ ।
ಹೆಣ್ಣ್ ಜಗತ್ತ್‌ಗೆ ಕಣ್ಣ್‌ಂತಾದರೂ
ಹೆಣ್ಣ್‌ಗೆ ಮಾಡಿವೆ ಅಪಮಾನ

ಹೆಣ್ಣ್ನ ಸ್ಥಾನನ ತಿಳಿಯುದೆ ಇದ್ದಂವ
ಈ ನಾಡ್‌ಲಿ ಇರ್ದೇ ಅವಮಾನ ।
ಹೆಣ್ಣೇ ಕೊಟ್ಟ ಈ ಉಸಿರಿದ್ ನಮ್ಮ
ಅವ್ವನ ಮಾಡೋಕು ದಿನಾಗ್ಯಾನ ॥

ಹೆಣ್ಣ್ರದಿದ್ದರೆ ಜನ ಇರಿಕಿತ್ತ್ಲೆ
ಅಂಥಾ ಹೆಣ್ಣ್ಗೆ ಬೆಲೆಕಟ್ಟಿ ।
ಮದುವಾಗುವ ಜನಕ್ಕೆ ಎಲ್ಲಾ
ಸಿಲ್ಲುದು ಹೆಣ್ಣ್ ಶಾಪನೆ ತಟ್ಟಿ ॥

ಮಾನನೂ ಇಲ್ಲದ ಮರ್ಯಾದಿ ಇಲ್ಲದೆ
ವರದಕ್ಷಿಣೆ ಭಿಕ್ಷೆನ ಬೇಡುತೋಳೊ ।
ಪವಿತ್ರ ಹೆಣ್ಣ್ನ ಜೀವನ ಅಲ್ಲದೆ
ಎರಡೂ ಮನೆ ಹಾಳ್ ಮಾಡುತೋಳೊ ॥

ನಮ್ಮೊ ಪುಣ್ಯದ ಭೂಮಿನ ಎಲ್ಲೊವು
ಭೂಮಿ ತಾಯಿಂತೇಳುತೋಳೊ ।
ಜನ್ಮ ಕೊಡುವ ಹೆಣ್ಣ್ನ ಮಾತ್ರ
ಜನ ಬೆಲೆ ಕಟ್ಟಿದ್ ಮಾರುತೋಳೊ ॥

ಪೌರಿನ ಕಮ್ಮಿ ಕೊಟ್ಟರೆ ಹೆಣ್ಣ್ಗೆ
ಹೇಳಿವೆ ಹೋಕು ನಿ ಮನೆ ಬುಟ್ಟ್ ।
ಕೆಲಜನ ಬ್ಯೊದ್ ತಿಂಬಕೆ ಕೊಡದೆ
ಹೊಡಿತಿದ್ಧವೆ ದಿನಾ ಬರೀ ಪೆಟ್ಟ್ ॥

ಪೌರಿನ ತಕಂಡೇ ಮದುವವು ಆದರೂ
ಹೆಣ್ಣ್ಗೆ ಸುಖ ಅಲ್ಲಿ ಎಲ್ಯುಟ್ಟು ? ।
ಇನ್ನೊ ಹೆಚ್ಚಿಗೆ ತರೂಕುಂತ ನೂಕಿ
ಹೆಣ್ಣ್ನ ಹಾಕಿವೆ ಅವು ಸುಟ್ಟ್ ॥

ಏನೇ ಆಗಲಿ ಸತ್ತರೂ ಹೋಗಲಿ
ಹೆಣ್ಣ್ಗೆ ಮರ್ಯಾದಿ ನೀವ್ ಕೊಟ್ಟ್ ।
ದುಡ್ಡ್ನ ತಕಂಡ್ ಮದುವಾವ ಕ್ರಮನು
ಬುಡೋಕು ನೀವೆಲ್ಲೊವು ಮನ್‌ಸಿಟ್ಟ್ ॥

ಇಂದ್‌ನ ಸರ್ಕಾರ ಮಾಡ್‌ದ ಕಾನೂನ
ವರದಕ್ಷಿಣೆ ತಕವಂಗೆ ಲ್ಯಾಕುಟ್ಟ್ ।
ದಕ್ಷಿಣೆ ತಕಡಂದ್ ಗೊತ್ತಾದರವನೆ
ಕಂಬಿ ಎಣಿಸೊಕು ಜೈಲ್‌ಲಿ ಎಷ್ಟುಟ್ಟು ॥

ಬಡಮನೆಲಿಂದ್ ಹುಟ್ಟಿರೆ ಹೆಣ್ಣ್ಗೆ
ವರದಕ್ಷಿಣೆ ಕೊಡ್ಡವು ಹೇಂಗಪ್ಪಾ?।
ಸಂಕಟ ನಂಗಿದ್ ತಡಿಯಕೆ ಬೊತ್ತದೆ
ದೇವುರೆ ಕಣ್‌ಬುಟ್ಟ್ ನೋಡಪ್ಪಾ ॥

ಹೆಣ್ಣ್ನ ಸಾಂಕಿಕೆ ಬೊತ್ತದ ಗಂಡಂವ
ಮದುವೆನೆ ಆಕೆ ಅಂವ ಬೊತ್ತ್‌ತ್ತ್ ।
ಹೆಣ್ಣ್ನ ದಾಸಪ್ಪ ನಾಗಿರುವವನೆ
ಕೇಳದು ಮಾವನ ಮನೆ ಸೊತ್ತು ॥

ವರದಕ್ಷಿಣೆ ಸಂಗತಿ ಗೊತ್ತುಟು ನಿವುಗೆಲ್ಲ
ಎಂತಕೆ ಬರ್ಯೆಲಿ ತಲೆ ಹರ್ಟೆ ।
ಬದರ್ಾ ತೊಪ್ಪಿಗೆ ಮುಗ್ಸಿದ್ ಇದರ
ಕೆಲ್ಸಕೆ ಹೋಕಟ್ಟು ನಾ ಹೊರ್ಟೆ

ವರದಕ್ಷಿಣೆ ತಕಣದೆ ಮದಿವಾಕುಂತೇಳುದೇ
ಈ ಪದ್ಯನಾ ಬರ್ದದರುದ್ದೇಶ ।
ಮುಂದೆನ ಏಳಿಗೆ ಪೀಳಿಗೆಗೆಲ್ಲಾ
ಈ ಪದ್ಯಲಿ ಮಾಡ್ಯಳೆ ಸಂದೇಶ ॥



# ಶಿಶು ಶಿಕ್ಷಣ ಅಥವಾ ಪೂರ್ವ ಪ್ರಾಥಮಿಕ ಶಿಕ್ಷಣ

ಎಸ್ಸಾರ್. ಯಶೋದಮ್ಮ
ಮೂಲೆಮಂಜು. ಬೆಂಗಳೂರು

[ ಲೇಖಕಿಯೇ ಹೇಳಿದಂತೆ ಒಬ್ಬ ವ್ಯಕ್ತಿಯ ಭವಿಷ್ಯದ ನಿರ್ಧಾರ ಎಳೆವಯಸ್ಸಿನಲಿಯೇ ತೀರ್ಮಾನವಾಗುತ್ತದೆ. ಬ್ರಹ್ಮನಿಂದ ಹಣೆ ಬರಹವೂ ಈ ವಯಸ್ಸಿನಲ್ಲಿ ನಿರ್ಧಾರವಾಗುತ್ತದೆನ್ನಬಹುದು. "ಬೆಳೆಯು ಗುಣ ಎಳೆಯುದರಲ್ಲಿ" "ಗಿಡವಾಗಿ ಬಗ್ಗದು ಮರವಾಗಿ ಬಗ್ಗೀತೇ ?" ಎಂಬ ಗಾದೆಗಳು ಸಂದರ್ಭೋಚಿತವಾಗಿವೆ. ಈ ವಿಷಯವನ್ನು ಶ್ರೀಮತಿ ಯಶೋದಮ್ಮನವರು ಸವಿಸ್ತಾರವಾಗಿ ತಕ್ಕ ಉದಾಹರಣೆಗಳಿಂದ ವಾಚಕರ ಮನಸ್ಸಿಗೆ ನಾಟುವಂತೆ ವಿವರಿಸಿದ್ದಾರೆ. ಸಮಾಜದ ಮುಂದಿನ ಪೀಳಿಗೆಯಾದ ಮಗುವಿನ ಶಿಕ್ಷಣದ ವಿಷಯ ನಮ್ಮ ಸಮಾಜದ ಬಂಧು ಭಗಿನಿಯರು ಅರಿತುಕೊಂಡು ತಮ್ಮ ಮಕ್ಕಳನ್ನು ಮುಂದಿನ ಸುಸಂಸ್ಕೃತ ಪ್ರಜೆಗಳನ್ನಾಗಿ ಮಾಡಿದರೆ ಸಮಾಜಕ್ಕೆ ಮಾತ್ರವಲ್ಲ ಇಡಿ ದೇಶಕ್ಕೇನೇ ತಮ್ಮ ಕರ್ತವ್ಯವನ್ನು ಮಾಡಿದಂತಾಗುತ್ತದೆ.

ಸಂ ]

ಹಿಂದೆ ನಮ್ಮ ಪೂರ್ವಜರು ತಮ್ಮದೇ ಆದ ಸಂಪ್ರದಾಯದ ಚೌಕಟ್ಟಿನಲ್ಲಿ ತಮ್ಮದೆ ಅದ ರೀತಿಯಲ್ಲಿ ಜೀವಿಸುತ್ತಿದ್ದರು. ತ್ಯಾಗ ಮನೋಭಾವನೆಯಿಂದ, ಪ್ರತಿಫಲಾಪೇಕ್ಷೆಯಿಲ್ಲದ ಸೇವೆ ಕಾರ್ಯಗಳು ಜರಗುತ್ತಿದ್ದವು. ಯಾವುದೇ ರಂಗದಲ್ಲಿ ಪೈಪೋಟಿ ಎಂಬುದು ಇಲ್ಲದೆ ಅವಿರೋಧವಾಗಿ ಆಯ್ಕೆಯೇ ನಡೆಯುತ್ತಿತ್ತು.

ಆದರೆ ಕಾಲ ಬದಲಾದಂತೆ ಜನ ಜೀವನದಲ್ಲಿ ಮಾರ್ಪಾಡುಗಳು ಆದಂತೆ ಬರ ಬರುತ್ತಾ "ಮಾನವನ ಜೀವನವೇ ಒಂದು ಹೋರಾಟ" ಎಂಬಲ್ಲಿಗೆ ಬಂದಿದೆ. ಈಗ ಯಾವುದೇ ರಂಗದಲ್ಲೇ ಆಗಲಿ, ಎಷ್ಟೇ ಅರ್ಹತೆಗಳಿದ್ದರೂ ಸಹ ಪೈಪೋಟಿ ಹೆಚ್ಚೆಚ್ಚಾಗುತ್ತಿವೆ. ಎಷ್ಟು ಬುದ್ಧಿಯನ್ನು ಉಪಯೋಗಿಸಿದರೂ ಸಾಲದು. ಸ್ವಾವಲಂಬಿಯಾಗಿ, ನಿರ್ಭೀತಿ, ನಿಶ್ಚಿಂತತೆಯಿಂದ ಬಾಳುವೆ ನಡೆಸಲು ಸಾಧ್ಯವೇ ಇಲ್ಲ ಎನ್ನಬಹುದೇನೋ ಎನ್ನಿಸುತ್ತದೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ತೊಳಲಾಡುತ್ತಿರುವ ನಮ್ಮ ಜನಾಂಗಕ್ಕಂತೂ ಈ ಪೂರ್ವ ಪ್ರಾಥಮಿಕ ಶಿಕ್ಷಣವು ಭಾರೀ ಪ್ರಮಾಣದ ಪ್ರಯೋಜನವಾಗ ಬಲ್ಲುದೆಂಬುದನ್ನು ಮನಗಂಡಿದ್ದೇನೆ.

ನಾವು ಯಾವುದೇ ಅಭಿವೃದ್ಧಿ ಕಾರ್ಯದ ಮುಂದೆ "ಆರ್ಥಿಕ ಮುಗ್ಗಟ್ಟು" ಎಂಬ "ಧ್ವಜಪತಾಕೆ"

ಯನ್ನೇ ಹಿಡಿದು ಹಿಂಜರಿಯುತ್ತೇವೆ. ತಮ್ಮ ಸ್ವಂತ ಮಕ್ಕಳನ್ನೇ ನಮ್ಮ ಚಿಕ್ಕಪುಟ್ಟ ಕೆಲಸಗಳಿಗೆ ನೇಮಿಸಿ, ನಮ್ಮ ಏಳಿಗೆಯ ಚಿಗುರನ್ನೇ ಚಿವುಟುವುದನ್ನು ನಾವೆಷ್ಟು ಕಲಿತಿದ್ದೇವೆ. ಹೆಚ್ಚೇಕೆ ನಾವೇ ಅನುಭವಿಸಿದ್ದೇವೆ. ಕುಡಿದು ಅಮಲೇರಿದಾಗ ಇಲ್ಲವೇ ಜೇರೆಯುವರೊಂದಿಗೆ ಹೆಗ್ಗಳಿಕೆಯ ಮಾತನಾಡುವಾಗ "ನನ್ನ ಮಗ ದೈವ ಸಮಾನ (ಮಕ್ಕಳೇ ದೇವರು) ಮಕ್ಕಳೇ ಆಸ್ತಿ, ಮಕ್ಕಳೇ ಸರ್ವಸ್ವ, ಮಕ್ಕಳಿಗೆ ಇಲ್ಲದ್ದು ಇನ್ಯಾರಿಗೆ ಬೇಕು? ಎಂಬಿತ್ಯಾದಿ ಮಕ್ಕಳೆದುರು ಮಕ್ಕಳನ್ನೇ ಹೊಗಳಿ ಕೊಂಡಾಡಿ, ಲಂಗು–ಲಗಾಮು ಇಲ್ಲದ ಕುದರೆಯಂತೆ ಬೆಳೆಸಿ, ಬಳಿಕ ಎಲ್ಲ ಜವಾಬ್ದಾರಿಯನ್ನು ಹೊರಿಸಿ, ಕೊನೆಗೆ ದಿಕ್ಕು ದೆಸೆಯಿಲ್ಲದೆ ಎಲ್ಲವನ್ನೂ ಕಳೆದುಕೊಂಡವರಿಗಂತೂ ಲೆಖ್ಖವಿಲ್ಲ. ನಾವು ಇವುಗಳನ್ನೆಲ್ಲಾ ವಿವೇಚನೆಮಾಡಿ ಇನ್ನಾದರೂ ಎಚ್ಚೆತ್ತು ನಮ್ಮ "ವಂಶ–ವೃಕ್ಷ" ಸುಸಮೃದ್ಧವಾಗಿ ಬೆಳೆಯುವಂತೆ ಮಾಡಬೇಕಾಗಿದೆ. ಆದಾರಿಯೇ ಈ "ಪೂರ್ವ ಪ್ರಾಥಮಿಕ ಶಿಕ್ಷಣ" ಇದನ್ನು ಪೋಷಕರು ಪಾಲಕರು ಮನನದಲ್ಲಿಟ್ಟು ತಮ್ಮ ಮನೆಯಲ್ಲೇ ಮಗುವಿಗೆ ಶಿಕ್ಷಣ ನೀಡಿದರೂ ಮಗುವಿನ ಶ್ರೇಯೋಭಿವೃದ್ಧಿಗೆ ಪೂರಕವಾಗುವುದು.

ನಮ್ಮ ದೇಶದಲ್ಲಿ, ಪೂರ್ವ ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಇತ್ತೀಚೆಗೆ ಅಲ್ಪಸ್ವಲ್ಪ ಬೆಳವಣಿಗೆ ಕಂಡು ಬಂದಿದೆ. ಮನೋವಿಜ್ಞಾನಿಗಳು ಶಿಕ್ಷಣ ತಜ್ಞರು ಮಕ್ಕಳ ಶಿಕ್ಷಣಾಭ್ಯಾಸಕ್ಕಾಗಿ ಹೆಚ್ಚು ಗಮನ ನೀಡುತ್ತಿದ್ದಾರೆ.

ಪ್ರಪ್ರಥಮ ಬಾರಿಗೆ ಶಿಶುವಿಹಾರವು ಇಂಗ್ಲೆಂಡ್ ದೇಶದಲ್ಲಿ 1816ರಿಂದ ರಾಬರ್ಟ್ ಓವೆನ್ ಎಂಬ ತಜ್ಞನಿಂದ ಆರಂಭವಾಯ್ತು. ಹಾಗೆಯೇ ಭಾರತದಲ್ಲಿ ಪ್ರಪ್ರಥಮವಾಗಿ ಕ್ರಿಶ್ಚಿಯನ್ ಮಿಶನರಿಗಳಿಂದ ಪ್ರಾರಂಭಗೊಂಡವು.

ಪೂರ್ವ ಪ್ರಾಥಮಿಕ ಶಿಕ್ಷಣವು 2 ವರ್ಷದಿಂದ 6 ವರ್ಷದ ವಯಸ್ಸಿನ ಮಕ್ಕಳಲ್ಲಿ ಮುಂದಿನ ಅವಧಿಗೆ "ಭವ್ಯ ಬುನಾಧಿ"ಯನ್ನು ಹಾಕುವಂತಹ ಸೂಕ್ತ ಶಿಕ್ಷಣವನ್ನು ಕೊಡಲು ಉತ್ತಮವಾದ ಕಾಲ. ಈ ವಯಸ್ಸಿನ ಎಲ್ಲಾ ಮಕ್ಕಳಿಗೂ ಇದು ಸಂಬಂಧಿಸಿದ್ದು. ಇತ್ತೀಚಿನ ದಿನಗಳಲ್ಲಿ ಈ ರೀತಿಯ ಶಿಕ್ಷಣದ ಬಗ್ಗೆ ಪ್ರಪ್ರಂಚದಾದ್ಯಂತ ಆಸಕ್ತಿ ವಹಿಸಲಾಗುತ್ತಿದೆ.

ಏಕೆಂದರೆ ಮಾನವನ ಜೀವನದಲ್ಲಿ ಮೊದಲ 6 ವರ್ಷಗಳು ಎಲ್ಲಾ ದೃಷ್ಟಿಯಿಂದಲೂ ಅತ್ಯಂತ ಪರಿಣಾಮಕಾರಿ ಎಂದು ತಿಳಿಯಲಾಗಿದೆ. ನಮ್ಮ ಶಿಕ್ಷಣ ಕ್ಷೇತ್ರದಲ್ಲಿ ಬಹಳವಾಗಿ ನಿರ್ಲಕ್ಷಿಸಲ್ಪಟ್ಟ ಹಂತವೆಂದರೆ ಪೂರ್ವ ಪ್ರಾಥಮಿಕ ಶಾಲಾ ಹಂತ. ಈ ಶಿಕ್ಷಣದ ಮೂಲ ಸಿದ್ಧಾಂಥವೆಂದರೆ ಮಕ್ಕಳಿಗೆ ಚಟುವಟಿಕೆಗಳ ಮೂಲಕ, ಕ್ರೀಡಾ ಮಾಧ್ಯಮದ ಮೂಲಕ ಅವರ ಸರ್ವತೋಮುಖ ಬೆಳವಣಿಗೆಗೆ ಅವಕಾಶ ಮಾಡಿಕೊಡುವುದೇ ಆಗಿದೆ. ದೈಹಿಕ ವಿಕಾಸ, ಬೌದ್ಧಿಕ ವಿಕಾಸ ಹಾಗೂ ಸಾಮಾಜಿಕ ಸಂವೇಧನಾತ್ಮಕ, ಭಾವನಾತ್ಮಕ ಮತ್ತು ಕ್ರಿಯಾತ್ಮಕ ಬೆಳವಣಿಗೆಗೆ ಪೂರ್ವ ಬಾಲ್ಯಾವಧಿಯು ಅತ್ಯಂತ ಪ್ರಮುಖ ಪಾತ್ರವನ್ನು ವಹಿಸುತ್ತದೆ.

'ಇಂದಿನ ಮಕ್ಕಳೆ ನಾಳಿನ ಪ್ರಜೆಗಳು' ಆದ್ದರಿಂದ ಈ ಅವಧಿಯಲ್ಲಿ ನೀಡುವ ಶಕ್ತಿ ಉತ್ಸಾಹ ಮತ್ತು ಆರೋಗ್ಯ ಬಹಳ ಪ್ರಾಮುಖ್ಯವಾದುದು. "ಬುನಾದಿ ಭದ್ರ"ವಾದಷ್ಟು ಅದರ ಮೇಲೆ ಕಟ್ಟಲ್ಪಡುವ ಸೌಧವು ಭಧ್ರವಾಗಿರುತ್ತದೆ. ಅಂತೆಯೇ ಇಲ್ಲಿ ಕೊಡುವ ಶಿಕ್ಷಣವು ಅನಂತರದ ಶಿಕ್ಷಣಕ್ಕೂ ತಳಹದಿಯಾಗಿರುತ್ತದೆ.

ಈ ಹಂತದಲ್ಲಿ ಮಕ್ಕಳಿಗೆ ಗ್ರಹಣ ಶಕ್ತಿಯು ಶೀಘ್ರಗತಿಯಲ್ಲಿರುತ್ತದೆ. 'ಮೂರರ ಬುದ್ಧಿ ನೂರರ ತನಕ' ಎಂಬಂತೆ ಮುಂದಿನ ಸರ್ವತೋಮುಖ ಬೆಳವಣಿಗೆಯ ಭವಿಷ್ಯವನ್ನು ರೂಪಿಸುವ ಹಂತವಾಗಿದೆ. ಇದರ ವ್ಯಾಪ್ತಿ ಸೀಮಿತವಾಗಿದ್ದರೂ ಇದರ ರೂಪ ರೇಖೆಗಳನ್ನು ಈಡೇರಿಸುವಲ್ಲಿ ವ್ಯಾಪ್ತಿಯು ವಿಶಾಲವಾದದ್ದು. ಅಂತೂ ವ್ಯವಸ್ಥಿತ ಎಂಬುದು ಖಂಡಿತ. ಈ ಹಂತದ ಮಕ್ಕಳ ಮನಸ್ಸು ಮೃದುವಾದದ್ದು. ಈ ವಯಸ್ಸಿನಲ್ಲಿ ಬೆಳವಣಿಗೆ ವೇಗವಾಗಿದ್ದು ಯಾವುದೇ ತರದ ಅನುಭವಗಳನ್ನು ಅದು ನಿರ್ವಹಿಸುವುದಕ್ಕೆ

ಅದು ತಯಾರಾಗಿರುತ್ತದೆ. ಈ ಹಂತದಲ್ಲಿ ಸೂಕ್ತ ಮಾರ್ಗದರ್ಶನ ಹಾಗೂ ಅನುಭವಗಳು ಸಿಗದಿದ್ದಲ್ಲಿ ಮುಂದೆ ವ್ಯಕ್ತಿತ್ವದ ವಿಕಾಸವು ಸ್ವಲ್ಪ ಮಟ್ಟಿಗಾದರು ಕುಂಠಿತವಾಗುತ್ತದೆ. ಇದೇ ಮುಂತಾದ ಕಾರಣಗಳಿಂದ ಪ್ರತಿಯೊಂದು ಮಗುವೂ ಆರೋಗ್ಯವಂತನಾಗಿ, ಸ್ವಾವಲಂಭಿಯಾಗಿ, ಸತ್ಪ್ರಜೆಯಾಗಿ ಬಾಳಲು ಪೂರ್ವ ಪ್ರಾಥಮಿಕ ಶಿಕ್ಷಣವು ತಳಹದಿ ಹಾಕುತ್ತದೆ.

ಸಾಮಾನ್ಯವಾದ ಅರ್ಥದಲ್ಲಿ ಪೂರ್ವ ಪ್ರಾಥಮಿಕ ಶಿಕ್ಷಣವೆಂದರೆ ಶಾಲೆಗೆ ಹೋಗುವ ಮುಂಚಿತವಾಗಿಯೇ ಮಕ್ಕಳಿಗೆ ಸಿಗುವ ಶಿಕ್ಷಣ, ಮನೆಯೆ ಮೊದಲ ಪಾಠ ಶಾಲೆ, ತಾಯಿಯೇ ಮೊದಲ ಮಗುವಿನ ಗುರುವು, "ಲಲ್ಲೆಯಿಂದ ಪಾಠಕಲಿತ ಜನರು ಧನ್ಯರು" ಎಂಬುದು ಎಷ್ಟು ಅರ್ಥಪೂರ್ಣ. ಆದರೂ ಇಂದಿನ ಪರಿಸ್ಥಿತಿ ಯಲ್ಲಿ ನಮ್ಮವರ ಹಲವಾರು ಕುಟುಂಬಗಳಲ್ಲಿ ಚಿಕ್ಕ ಮಕ್ಕಳಿಗೆ ಪೋಷಕರಿಂದ ಸರಿಯಾದ ಮಾರ್ಗದರ್ಶನ ಸಿಗುವುದಿಲ್ಲ. ಕಾರಣ ಬಡತನ, ಅಜ್ಞಾನ, ಆರ್ಥಿಕ ಪರಿಸ್ಥಿತಿ, ಇಂತಹ ಸನ್ನಿವೇಶದಲ್ಲಿ ಪೂರ್ವ ಪ್ರಾಥಮಿಕ ಕೇಂದ್ರಗಳಲ್ಲಿ ಮಕ್ಕಳಿಗೆ ಸರಿಯಾದ ಮಾರ್ಗ ದರ್ಶನ ಮತ್ತು ಅನುಭವಗಳನ್ನು ದೊರಕಿಸಲು ಸಾಧ್ಯವಾಗುತ್ತದೆ.

ಈ ಹಂತದಲ್ಲಿ ಮಕ್ಕಳು ನೋಡಿ ಅಥವಾ ಕೇಳಿ ಕಲಿಯುವುದಕ್ಕಿಂತ 'ಮಾಡಿ' ಕಲಿಯುವುದಕ್ಕೆ ಹೆಚ್ಚು ಪ್ರಾಧಾನ್ಯತೆ. ಶಿಶುವು ತನ್ನ ಪರಿಸರವನ್ನು ಇಂದ್ರಿಯಾನುಭವಗಳಿಂದ ಅರ್ಥ ಮಾಡಿಕೊಳ್ಳಲು ತಮ್ಮ ಗುಂಪಿಗೆ ಹೊಂದಿಕೊಳ್ಳಲು ಮತ್ತು ಭಾವನಾತ್ಮಕ ಸಮತೋಲನವನ್ನು ಬೆಳೆಸಿಕೊಳ್ಳಲು ಇದು ಸದವಕಾಶವಾಗುತ್ತದೆ.

ಮಕ್ಕಳನ್ನು ಯಾವುದೇ ರೀತಿಯಲ್ಲಿ ಅನಗತ್ಯ ಶಿಸ್ತಿಗೆ ಒಳಪಡಿಸದೆ ಸ್ವತಂತ್ರ ವಾತಾವರಣದಲ್ಲಿ ಆಟದ ಮೂಲಕ ಪರಿಸರಕ್ಕೆ ಹೊಂದಿಕೊಳ್ಳಲು ಇದು ಸಹಾಯ ವಾಗುತ್ತದೆ. ಸ್ವಾಭಾವಿಕವಾಗಿ ಮಕ್ಕಳಿಗೆ ಆಟದಲ್ಲಿ ಹೆಚ್ಚು ಆಸಕ್ತಿ ಇರುವುದರಿಂದ ಆಟ ಹಾಗೂ ಇತರ ಚಟುವಟಿಕೆಗಳು ಅತ್ಯವಶ್ಯಕವಾದ ಇಂದ್ರಿಯಾನುಭ ವಗಳನ್ನು ಒದಗಿಸುವುದರಿಂದ ಪೂರ್ವ ಪ್ರಾಥಮಿಕ ಹಂತದಲ್ಲಿ ಆಟ ಅಥವಾ ಚಟುವಟಿಕೆಯೆ, ಶಿಕ್ಷಣದ ಮಾಧ್ಯಮವಾಗಿರುತ್ತದೆ. ಈ ಹಂತದಲ್ಲಿ ವ್ಯವಸ್ಥಿತ ಹಾಗೂ ಸೂಕ್ತ ಚಟುವಟಿಕೆಗಳ ಮೂಲಕವೇ ಮಕ್ಕಳು ಹಲವಾರು ವಿಷಯಗಳನ್ನು ಕಲಿಯುವರು. ಮಕ್ಕಳು ನೀರಿನಲ್ಲಿ ಆಡುವಾಗ, ಮರಳಿನಲ್ಲಿ ಆಡುವಾಗ ಅವುಗಳ ಸ್ಪರ್ಶದಿಂದ ಹರ್ಷಗೊಂಡು ನೀರಿನ ತಣ್ಣನೆಯ ಭಾವನೆ, ಮರಳಿನ ಗಡುಸುತನ ಹಾಗೆಯೇ ಇತರ ವಸ್ತುಗಳ ಆಕಾರ, ಬಣ್ಣಗಳಿತ್ಯಾದಿ ಕಲ್ಪನೆಯ ಅನುಭವ ಮಾಡಿ ಕೊಳ್ಳಲು ಅವಕಾಶವಾಗುತ್ತದೆ. ಮಕ್ಕಳು ದೊಡ್ಡ ಪ್ರಮಾಣದಲ್ಲಿ ಬೆಳೆಯ ಬೇಕಾದರೆ ಒಳ್ಳೆಯ ಪೌಷ್ಟಿಕ ಆಹಾರ ಒಂದೇ ಸಾಲದು ; ಉತ್ತಮ ದೈಹಿಕ ಚಟುವಟಿಕೆಗಳನ್ನು ಸರಿಯಾದ ರೀತಿಯಲ್ಲಿ ಒದಗಿಸಬೇಕು. ಹೊರಾವರಣ ಚಟುವಟಿಕೆಗಳಿಂದ ಈ ಅಭಿವೃದ್ಧಿ ಮಾಡಲು ಸಾಧ್ಯ.

ಆದುದರಿಂದ ನಮ್ಮವರು ಯಾವುದೇ ತೊಂದರೆ ತಾಪತ್ರಯಗಳಿದ್ದರೂ ಉದಾಸಿನ ತೋರದೆ ತಮ್ಮ ಮುದ್ದು ಮಕ್ಕಳನ್ನು ತಮ್ಮ ಕೆಲಸಕ್ಕೆ ಬಳಸದೆ. ಶಿಶುವಿಹಾರ, ಬಾಲವಾಡಿಗಳಂತ ಪೂರ್ವ ಪ್ರಾಥಮಿಕ ಶಿಕ್ಷಣ ಕೇಂದ್ರಗಳಿಗೆ ಕಳುಹಿಸಬೇಕು. ಮಾತ್ರವಲ್ಲ ತಮ್ಮ ಮನೆಯೇ ಶಿಶು ಶಿಕ್ಷಣ ಕೇಂದ್ರವೆಂದು ಭಾವಿಸಿ, ತಾವೇ ಪೂರ್ವ ಪ್ರಾಥಮಿಕ ಶಿಕ್ಷಕರೆಂಬಂತೆ ತಮ್ಮ ಮಕ್ಕಳನ್ನು ಜೀವನದ ಸರ್ವತೋಮುಖವಾದ ಏಳಿಗೆಗೆ ಅನುಗುಣವಾಗುವಂತೆ ಹೊಂದಿಸಿ ಬೆಳೆಸಬೇಕು. ಆಗಲೇ ನಾವು ಮಕ್ಕಳಿಗೆ ಜನ್ಮವಿತ್ತಿದ್ದಕ್ಕೆ ಸಾರ್ಥಕವಾಗುವುದು. ಅವರ ಜೀವನವೂ ಪಾವನಗೊಳ್ಳುವುದು. ಅವರ ಬಾಳು ಬೆಳಗಿ ಬೇರೆಯವರಿಗೆ ದಾರಿದೀವಿಗೆಯಾಗುವುದು.

# ಸಂಪಾಜೆ ಸಣ್ಣಯ್ಯ ಪಟೇಲರು

ಲೇಖಕ: ಎಂ.ಬಿ. ಸದಾಶಿವ — [redacted]

---

[ಒಂದು ಸಮಾಜದಲ್ಲಿ ಕೆಲವು ವ್ಯಕ್ತಿಗಳ ಆದರ್ಶ ಬೇರೆಯವರಿಗೆ ಮಾರ್ಗ ದರ್ಶನವಾಗುತ್ತದೆ. ದೇಶದ ಚರಿತ್ರೆ ಒಬ್ಬಬ್ಬ ಮಹಾಪುರುಷರ, ರಾಜರುಗಳ ಸಾಮ್ರಾಟರ ಹಾಗೂ ರಾಷ್ಟ್ರದ ಅಧಿಕಾರ ಹೊತ್ತ ವ್ಯಕ್ತಿಗಳು ಕೈ ಕೊಂಡ ಪರಾಕ್ರಮ, ಆಡಳಿತ ಕ್ರಮ ಇವುಗಳು ಮೇಲೆ ಬರೆಯಲ್ಪಟ್ಟಿವೆ. ಆದರೆ ಜನ ಸಾಮಾನ್ಯರ ವಿಷಯ ಉಲ್ಲೇಖಗೊಂಡಿರುವುದಿಲ್ಲ ಆದರೆ ಒಂದು ಸಮಾಜದಲ್ಲಿ ಆಗಿ ಹೋದ ಪ್ರಬಲ ಹಾಗೂ ಸಮಾಜದ ಏಳಿಗೆಗಾಗಿ ಶ್ರಮಿಸಿದ ವ್ಯಕ್ತಿಗಳ ಪ್ರಭಾವ ಏಷ್ಟೋ ರೀತಿಯಲ್ಲಿ ಪರಿಣಾಮವನ್ನುಂಟು ಮಾಡುತ್ತವೆ. ಆದುದರಿಂದ ಒಂದು ಸಮಾಜದ ಕುರಿತು ಪ್ರಕಟಿಸುವ ಈ ರೀತಿಯ ಸ್ಮರಣ ಸಂಚಿಕೆಗಳಲ್ಲಿ ಸಂಪಾಜೆ ಸಣ್ಣಯ್ಯ ಪಟೇಲರುಗಳಂತಹ ವ್ಯಕ್ತಿಗಳ ಜೀವನ ಚರಿತ್ರೆಗಳಿಂದ ಕೂಡಿದ ಲೇಖನಗಳು ಆ ಸಮಾಜದ ಜನರಲ್ಲಿ ತಮ್ಮ ಹಿರಿಯರು ಯಾವ ರೀತಿಯಲ್ಲಿ ತಮ್ಮ ಜೀವನವನ್ನು ಸಾಗಿಸಿದರು ಅವರುಗಳು ಸಮಾಜಕ್ಕಾಗಿ ಏನೇನು ಕೆಲಸಗಳನ್ನು ಮಾಡಿದರೆಂಬುದರ ಅರಿವಿನಿಂದ ಯುವ ಪೀಳಿಗೆ ಇದರಿಂದ ಸ್ಫೂರ್ತಿಗೊಂಡು ತಾವು ಸಹ ಸಮಾಜದ ಕಾರ್ಯದಲ್ಲಿ ಏನನ್ನು ಮಾಡಬಹುದೆಂಬ ಅಭಿಪ್ರಾಯದಿಂದ ಸಮಾಜದ ಅಭಿವೃದ್ಧಿಗೆ ದಾರಿಮಾಡಿಕೊಡುವಂತೆ ಪ್ರೇರೆಪಿಸುವುದನ್ನು ಶ್ರೀದೇವಿಪ್ರಸಾದರವರು ಬರೆದ ಈ ಲೇಖನದಿಂದ ಪ್ರೋತ್ಸಾಗೊಳ್ಳಬಹುದೆಂದು ನಂಬುತ್ತೇವೆ. ಸಂ]

---

ಬದುಕಿನ ಕಷ್ಟಕೋಟಲೆಗಳನ್ನು ಸಹಿಸುತ್ತಾ ಬಾಳುವ ಮಾನವ ತನ್ನ ಸಾಧನೆಗಳ ಮೂಲಕ ಜೀವನಕ್ಕೆ ಅರ್ಥ ಕಂಡುಕೊಳ್ಳುತ್ತಾನೆ. ತನ್ನ ಕೃತಿಗಳ ಮೂಲಕ ಸಾಧನೆಗಳ ಮೂಲಕ ಮಾನ್ಯವಾಗುತ್ತಾನೆ, ಹೀಗೆ ಬಾಳಿ ಬದುಕಿದ ಕೆಲವೇ ಕೆಲವರು ಪ್ರಾತಃಸ್ಮರಣೀಯರಾಗುತ್ತಾರೆ. ಇಂತಹಾ ಚೇತನ ಒಂದರ ಪುಣ್ಯಸ್ಮರಣೆಯ ಕಾರ್ಯ ನನಗೆ ಒದಗಿ ಬಂದಿದೆ. ಮಹಾಭಾರತದಲ್ಲಿ ಯಕ್ಷ ಪ್ರಶ್ನಿಸುತ್ತಾನೆ. ಧರ್ಮದ ಏಕೈಕ ಸಾಧನ ಯಾವುದು? ಕೀರ್ತಿಯ ಏಕೈಕ ಸಾಧನ ಯಾವುದು? ಸುಖದ ಏಕೈಕ ಸಾಧನ ಯಾವುದು? ಯುಧಿಷ್ಠಿರ ಉತ್ತರಿಸುತ್ತಾನೆ : ದಕ್ಷತೆಯೊಂದೇ ಧರ್ಮದ ಸಾಧನ: ದಾನವೊಂದೇ ಕೀರ್ತಿಯ ಸಾಧನ: ಸತ್ಯವೊಂದೇ ಸ್ವರ್ಗದ ಸಾಧನ: ಶೀಲವೊಂದೇ ಸುಖದ ಸಾಧನ. ಹೀಗೆ ದಕ್ಷತೆಯಿಂದ ಧರ್ಮ, ಶೀಲದಿಂದ ಸುಖ, ದಾನದಿಂದ ಕೀರ್ತಿಗಳಿಸಿದವರಾದ ಶ್ರೀ ಸಣ್ಣಯ್ಯ ಪಟೇಲ್ 2-8-1890ರಂದು ಜನಿಸಿದರು. ಪೂರ್ವ ವೃತ್ತಾಂತ ಪುತ್ತೂರು:—ತಾಲೂಕು ಮಾಡಾವು ಗ್ರಾಮದಿಂದ ಸಂಪಾಜೆಗೆ ಬಂದು ನೆಲೆಸಿದರೆಂದು ಹೇಳಲಾಗುವ ನಂಜಯ್ಯ ಎಂಬವರು ನಂಜನ ಮನೆಯ ಮೂಲ ಪುರುಷ ಇವರ

ಮಗನ ಹೆಸರೂ ಸಣ್ಣಯ್ಯ ಎಂದಾಗಿತ್ತು. ಅವರ ಮಗ ಬಚ್ಚಣ್ಣ. ಸೊಸೆ ಮುದ್ದಮ್ಮ (ದೇರಾಜೆ ಮನೆ) ಇವರ ಮಗನೇ ಸಣ್ಣಯ್ಯ. ಸಂಪಾಜೆಯಲ್ಲಿ ಒಬ್ಬ ಜಂಗಮನಿದ್ದು ಆತನ ಮರಣಾನಂತರ ಈ ಆಸ್ತಿ ಲಭಿಸಿತೆಂದು ಹೇಳಲ್ಪಡುತ್ತಿದೆಯಾದರೂ ಇದಕ್ಕೆ ಯಾವುದೇ ಪುರಾವೆಗಳಿಲ್ಲ. ಮನೆಯಿಂದ ನೂರು ಗಜ ಉತ್ತರದಲ್ಲಿ ವೀರಭದ್ರನ ಕಲ್ಲು ಮತ್ತು ದಕ್ಷಿಣ ಭಾಗದಲ್ಲಿ ಮನೆಯ ಪಕ್ಕದಲ್ಲಿ ವೀರಭದ್ರನ ಗುಡಿ ಇದೆ. 1960ರ ತನಕ ಪ್ರತಿ ವರ್ಷ ಜಂಗಮರನ್ನು ತರಿಸಿ ಪೂಜೆ ಮಾಡಿಸುತ್ತಿದ್ದರು. ಈ ವಿಚಾರಗಳು ಮೇಲಿನ ಹೇಳಿಕೆಗೆ ಪೂರಕವಾಗಿವೆ. ಹತ್ತನೇ ವಯಸ್ಸಿನಲ್ಲಿ ಸಣ್ಣಯ್ಯನವರಿಗೆ ಪಿತೃವಿಯೋಗವಾಯಿತು.

**ಸಂಸಾರ :** ಸಣ್ಣಯ್ಯ ಪಟೇಲರು ನಿಡ್ಬೆ ಮನೆಯ ವೆಂಕಮ್ಮ, ಕಡಂಬಡ್ಕ ಮನೆಯ ಶಂಕರಿ ಎಂಬ ಇಬ್ಬರನ್ನು ವಿವಾಹವಾಗಿದ್ದರು. ಈ ಎರಡು ಪತ್ನಿಯರಲ್ಲಿ ಗಂಡು ಮಕ್ಕಳಾಗದ ಕಾರಣ 13-12-1923ರಲ್ಲಿ ಮುರುಳ್ಯ ಅಪ್ಪಯ್ಯ ಗೌಡರ ಪುತ್ರಿ ಪೂವಮ್ಮನವರನ್ನು ವಿವಾಹವಾದರು. ವಿವಾಹದ ಇಪ್ಪತ್ತು ವರ್ಷಗಳ ನಂತರ (27-4-1942ರಲ್ಲಿ) ದೇವಿಪ್ರಸಾದ್ ಜನನವಾಯಿತು. ಪ್ರಥಮ ಪುತ್ರಿ ಲಕ್ಷ್ಮಿ ಕೆದಂಬಾಡಿ ಸೋಮಪ್ಪನವರನ್ನು ಮದುವೆಯಾಗಿ (16-3-28) ಹೆಣ್ಣು ಶಿಶು ಶ್ರೀಮತಿ ಸರೋಜಿನಿ ಕಾರ್ಲೆಗೆ ಜನ್ಮವಿತ್ತು ತೀರಿಕೊಂಡರು. 22-4-1931ರಲ್ಲಿ ತೃತೀಯ ಪುತ್ರಿ ಯಶೋಧರನ್ನು ಅಂಬೆಕಲ್ಲು ಮುತ್ತಯ್ಯ ಗೌಡರಿಗೆ ಮತ್ತು 26-2-1951ರಲ್ಲಿ ಕೊನೆಯ ಮಗಳು ದೇವಕಿಯನ್ನು ಸುಳ್ಯದ ಬಾಲಕೃಷ್ಣನವರಿಗೆ ವಿವಾಹ ಮಾಡಿಕೊಟ್ಟರು.

**ವಿದ್ಯಾಭ್ಯಾಸ ;** ಕೇವಲ ಒಂದು ವರ್ಷ ವಿದ್ಯಾಭ್ಯಾಸ ಮಾಡಿದ್ದರೂ ಸ್ವಪ್ರಯತ್ನದಿಂದ ಪಾಂಡಿತ್ಯವನ್ನು ಗಳಿಸಿಕೊಂಡವರು. ಮಿತ್ರರಾಗಿದ್ದ ವಿಟ್ಲದ ಅರಸರು ಪತ್ರಿಕೆ ತರಿಸಿ ಓದಲು ಸೂಚಿಸಿದ್ದನ್ನು ನೆನೆಸಿಕೊಳ್ಳುತ್ತಿದ್ದರು. ಮಳೆಗಾಲದಲ್ಲಿ ಭಾರತ ವಾಚನ ಕಾರ್ಯಕ್ರಮ ಇಟ್ಟುಕೊಂಡು ಸ್ವತಹ ಕುಮಾರ ವ್ಯಾಸ ಭಾರತವನ್ನು ಸುಶ್ರಾವ್ಯವಾಗಿ ಓದುತ್ತಿದ್ದರು. ತನ್ನ 29ನೇಯ ವಯಸ್ಸಿನಲ್ಲಿ (22-4-1920ರಲ್ಲಿ) ಮನೆಯ ಗೃಹಪ್ರವೇಶವಾಯಿತು. ಇದರ ನೆಲ ಅಂತಸ್ತು 28 ಚದರಗಳು ಮಹಡಿ 8 ಚದರಗಳು. ಈ ಮನೆ ರಚಿತವಾದ ಸಮಯದಲ್ಲಿ ಸಂಪಾಜೆ ಮಡಿಕೇರಿಗಳ ನಡುವೆ ಶಾಲೆಗಳಿರಲಿಲ್ಲ. ಮೂರು ತಲೆಮಾರಿನ ಹಿಂದಿನ ಅನೇಕರು ಈ ಮನೆಯಲ್ಲಿದ್ದು ವಿದ್ಯಾಭ್ಯಾಸ ಮಾಡಿದ್ದಾರೆ. ಉಪಾಧ್ಯಾಯರಿಗೂ ವಿಧ್ಯಾರ್ಥಿಗಳಿಗೂ ಇದು ಉಚಿತ ವಿದ್ಯಾರ್ಥಿ ನಿಲಯವಾಗಿತ್ತು.

ವಾಹನಗಳೇ ವಿರಳವಾಗಿದ್ದಾಗ 1947ರಲ್ಲಿ ಇವರು ಕೊಂಡುಕೊಂಡ ಹೊಸ ಪ್ಲೈಮತ್ ಕಾರು ರೋಗಿಗಳ ಸಾಗಾಣಿಕೆಗೆ, ಮದುವೆಗಳಿಗೆ ಚುನಾವಣೆಗಳಿಗೆ ಉಚಿತ ಓಡಾಟ ಮಾಡುತ್ತಿತ್ತು.

**ಗ್ರಾಮದ ಅಭಿವೃದ್ಧಿಯಲ್ಲಿ :** ಪರಿಸರದ ಕನಿಷ್ಟ ಅವಶ್ಯಕತೆಗಳೇನು, ಗರಿಷ್ಟ ತೊಡಕುಗಳೇನು, ಜೀವನದ ಮಟ್ಟವನ್ನು ಸುಧಾರಿಸುವುದು ಹೇಗೆ ಎಂಬಿತ್ಯಾದಿ ವಿಚಾರದಲ್ಲಿ ಸಾಕಷ್ಟು ವಿವೇಚನೆ ನಡೆಸಿ ಯೋಜನಾ ಬದ್ಧರಾಗಿ ಕಾರ್ಯತತ್ಪರರಾದವರು. ಅಂತೆಯೇ ಶಾಲೆ ಆಸ್ಪತ್ರೆ, ಗೋ ಆಸ್ಪತ್ರೆಗಳು ನಿರ್ಮಾಣಗೊಂಡವು.

1 * 4-10-1945ರಲ್ಲಿ ತಮ್ಮದೇ ಖರ್ಚಿನಿಂದ ಸಹಕಾರಿ ಸಂಘಕ್ಕೆ ಕಟ್ಟಡ ನಿರ್ಮಿಸಿದರು
3 * 31-3-1952ರಲ್ಲಿ ಪ್ರಾಥಾಮಿಕ ಶಾಲಾ ಕಟ್ಟಡ ನಿರ್ಮಿಸಲ್ಪಟ್ಟಿತು.
4 * 1955ರಲ್ಲಿ ಮಾಧ್ಯಮಿಕ ಶಾಲಾ ಕಟ್ಟಡ ತಲೆಯೆತ್ತಿತು.
5 * ಪೂರ್ತಿ ಹಣ ತಾವೇ ವ್ಯಯಿಸಿ ಗೋ ಆಸ್ಪತ್ರೆಯನ್ನು 7-4-1956ರಲ್ಲಿ ತೆರೆದರು.
6 * ಸಾಕಷ್ಟು ವಿಶಾಲವಾದ ಆಸ್ಪತ್ರೆ ಕಟ್ಟಡ 30-10-52ರಲ್ಲಿ ನಿರ್ಮಿತಗೊಂಡಿತು.
7 * ಹೆರಿಗೆ ಆಸ್ಪತ್ರೆ ಕಟ್ಟಡ 26-10-56ರಲ್ಲಿ ಉದ್ಘಾಟಿಸಲ್ಪಟ್ಟಿತು.
2 * 1947 ಪಂಚಲಿಂಗೇಶ್ವರ ದೇವಸ್ಥಾನ ಕಟ್ಟಿಸಿ ಬ್ರಹ್ಮಕಲಶ ಮಾಡಿಸಿದ್ದು

ಹೀಗೆ ಗ್ರಾಮದ ಅವಶ್ಯಕತೆಗಳನ್ನು ಪೂರೈಸಲು ಆಗಿನ ಕಾಲದಲ್ಲಿ ರೂ. 50,000ಕ್ಕೂ ಮಿಕ್ಕಿ ದಾನ ನೀಡಿದ ಉದಾರಿಗಳಿವರು. ದುರ್ಮಾರ್ಗದಿಂದ ಕಳೆದವರೂ ಅಲ್ಲ, ಕೂಡಿಸಿದವರೂ ಅಲ್ಲ. ಇದ್ದದ್ದನ್ನು ಸ್ವಂತ ಪರಿಶ್ರಮದಿಂದ ಚೆನ್ನಾಗಿ ರೂಢಿಸಿಕೊಂಡವರು. 1953ರಲ್ಲಿ ಕೊಡಗು ಸರಕಾರ ಸಮಾಜ ಸೇವೆಗಾಗಿ ಇವರಿಗೆ ಪ್ರಶಸ್ತಿ ಪತ್ರ ಮತ್ತು ಸ್ವರ್ಣ ಪದಕ ನೀಡಿ ಗೌರವಿಸಿತು. ಕರ್ನಲ್ ದಯಾಸಿಂಗ್ ಬೇಡಿ ಇವರಿಗೆ ಈ ಪ್ರಸಸ್ತಿಗಳನ್ನು ವಿತರಿಸಿದರು.

**ಸಹಕಾರಿ ರಂಗದಲ್ಲಿ :** 1939ರಲ್ಲಿ ಮಲ್ಲೇಶ್ವರದ ಸಹಕಾರಿ ಸಂಘ. ದವಸ ಭಂಡಾರ ಇವುಗಳನ್ನು ಸ್ಥಾಪಿಸಿ ಸುಮಾರು 25 ವರ್ಷಗಳಷ್ಟು ಕಾಲ ಅಧ್ಯಕ್ಷರಾಗಿದ್ದರು. ಉತ್ತಮ ಸಾಲ ವಸೂಲಾತಿಗೆ ಜಿಲ್ಲೆಯ ಶ್ರೇಷ್ಠ ಸಹಕಾರಿ ಸಂಘವಾಗಿ ಪ್ರಶಸ್ತಿಗಳಿಸಿದ್ದರು.

**ಸಮಾಜ ಸುಧಾರಣೆ :** ವಿ ಚಕ್ಷಣೆ, ದೂರದೃಷ್ಟಿಗಳಿಂದ ಅವರ ಕೆಲಸಕ್ಕೆ ಯಾವಾಗಲೂ ಶೋಭೆ ಇರುತ್ತಿತ್ತು. ಬೇರೆ ಜಿಲ್ಲೆಯ ವಕ್ಕಲಿಗರೊಡನೆ ಸಂಬಂಧ ಬೆಳಸುವಲ್ಲಿ ಉದಾರ ನೀತಿಯನ್ನು ಹೊಂದಿ ತಮ್ಮ ಮೊಮ್ಮಗಳು ಸರೋಜಿನಿಯವರನ್ನು ಹಾಸನ ಜಿಲ್ಲೆಯ ಎಲ್. ಟಿ. ಕಾರ್ಲೆಯವರಿಗೆ ವಿವಾಹ ಮಾಡಿಕೊಟ್ಟಿದ್ದರು.

**ಗೌಡ ವಿದ್ಯಾಸಂಘ :** 1921ರಲ್ಲಿ ಗೌಡ ವಿದ್ಯಾ ಸಂಘ ಸ್ಥಾಪಿಸಲ್ಪಟ್ಟಾಗ 30ರ ಹರೆಯದ ಸಣ್ಣಯ್ಯ ಪಟೇಲರು ಕಾರ್ಯದರ್ಶಿಯಾಗಿ ಜವಾಬ್ದಾರಿ ವಹಿಸಿಕೊಂಡರು. 1933ರಿಂದ ನಿಧನರಾಗುವ ತನಕ ಅಧ್ಯಕ್ಷರಾಗಿದ್ದರು. ಇವರ ಅಧ್ಯಕ್ಷತೆಯಲ್ಲಿ ಪುತ್ತೂರು. ಸುಳ್ಯ, ಗುತ್ತಿಗಾರು ಪಂಜಗಳಲ್ಲಿ ಹಾಸ್ಟೆಲ್ ನಿರ್ಮಾಣವಾಯಿತು. ಇವರ ಹೆಸರಿನಲ್ಲಿ ವಿದ್ಯಾರ್ಥಿ ವೇತನ ನಿಧಿ ಇಡಲಾಗಿದೆ. ಈ ವಿಧ್ಯಾರ್ಥಿ ವೇತನದಿಂದ ಅನೇಕ ಬಡ, ಪ್ರತಿಭಾವಂತರು ವಿದ್ಯಾರ್ಜನೆ ಮಾಡುವುದು ಸಾಧ್ಯವಾಗಿದೆ. ಸಂಘಕ್ಕಾಗಿ ಧನ ಸಂಗ್ರಹಣೆ ದಕ್ಷಿಣ ಕನ್ನಡದ ಹೆಚ್ಚಿನ ನಮ್ಮವರ ಮನೆಗಳಿಗೆ ನಡೆದಿದ್ದಾರೆ. ಅನಾರೋಗ್ಯದಲ್ಲಿದ್ದಾಗಲೂ ನಾಮ ನಿಮಿತ್ತವಾಗಿಯಾದರೂ ಅಧ್ಯಕ್ಷನಾಗಬೇಕೆಂದು ಉಪಾಧ್ಯಕ್ಷರಾಗಿದ್ದ ದಿವಂಗತ ದೇರಪ್ಪಜ್ಜನ ವೀರಪ್ಪ ಗೌಡರು ಒತ್ತಾಯಿಸಿ ಅಧ್ಯಕ್ಷರ ಕೆಲಸ ತಾನೇ ನಿರ್ವಹಿಸುಸಿದ್ದರಾದದ್ದು ಅವರಿಗೆ ಮತ್ತು ಸಮಾಜದ ಮುಖಂಡರಿಗೆ ಶ್ರೀಯುತ ಸಣ್ಣಯ್ಯ ಪಟೇಲ್‌ರಲ್ಲಿದ್ದ ವಿಶ್ವಾಸವನ್ನು ತೋರಿಸುತ್ತದೆ. ಬಹುಷ ಇದು ಅವರ ಸೇವೆಗೆ ಗೌಡ ಸಮಾಜ ನೀಡಿದ ಚರಿತ್ರಾರ್ಹ ಸನ್ಮಾನ. 1985ರಲ್ಲಿ ಸುಳ್ಯದಲ್ಲಿ ನಡೆದ ಚಾರಿತ್ರಿಕ ಗೌಡ ಸಮ್ಮೇಳನದಲ್ಲಿ ಅವರಿಗೆ ಮರಣೋತ್ತರ ಪ್ರಶಸ್ತಿ ನೀಡಲಾಯಿತು.

ಜಾತಿಯ ಅಭ್ಯುದಯದಲ್ಲಿ ಅವರಿಗೆ ತೀವ್ರ ಆಸಕ್ತಿ ಇದ್ದರೂ ಅದಕ್ಕಾಗಿ ದುಡಿಯುತ್ತಿದ್ದರೂ ಅವರು ಎಂದೂ ಜಾತಿವಾದಿಯಾಗಿರಲಿಲ್ಲ. ಎಂಬುದು ಗಮನಾರ್ಹ.

**ಹವ್ಯಾಸ :** ಜಿಂಕೆ, ಕಾಡುಕೋಣ, ಹುಲಿಗಳನ್ನು ಬೇಟೆಯಾಡಿದ್ದಾರೆ. ಆನೆಯನ್ನು ಕರ್ಪುವಿನಲ್ಲಿ ಬೀಳಿಸಿದ್ದು, ಹುಲಿಯನ್ನು ಬೋನಿನಲ್ಲಿ ಹಿಡಿದಿದ್ದು ಅವರ ಯೌವನದ ಸಾಹಸಗಳು. ಯುವಕನಾಗಿದ್ದಾಗ ಕೊಡಗಿನ ಪ್ರಸಿದ್ಧ ಕೆಸರಿನ ಓಟದಲ್ಲಿ ಅವರನ್ನು ಮೀರಿಸುವವರಿರಲಿಲ್ಲ. ಕೋಳಿಕಟ್ಟ, ಮತ್ತು ಕಂಬಳ ಅವರನ್ನು ಆಕರ್ಷಿಸಲಿಲ್ಲ. ಯಕ್ಷಗಾನ ಪ್ರಿಯರಾಗಿದ್ದರು ಮತ್ತು ಬಯಲಾಟಗಳನ್ನು ಏರ್ಪಡಿಸಿದ್ದರು.

ಹೀಗೆ ಇವರ ಬಾಳದರ್ಶನವೂ. ಬಾಳ್ವೆಯ ನಿದರ್ಶನವೂ ನಮ್ಮೆಲ್ಲರಿಗೆ ಆದರ್ಶದ, ಸ್ಫೂರ್ತಿಯ ವಿಚಾರವಾಗಿದೆ. ಅವರ ಸಾತ್ವಿಕ ಪ್ರೇರಣೆ ಸಮಾಜಕ್ಕೆ ಮಾರ್ಗದರ್ಶನವಾಗಿದೆ. ಗುಣ ಗೌರವ ಸಜ್ಜನ ಸಂಗ ಸಲ್ವಾತು ಇವೆಲ್ಲ ಸಂಸಾರದ ಫಲ, ಇಂತಹ ಸಂಸ್ಕಾರದ ಮೂಲಕ ತನ್ನ ಸಾಧನೆಗಳನ್ನು ಸಿದ್ಧಿಸಿಕೊಂಡ ಶ್ರೀ ಸಣ್ಣಯ್ಯ ಪಟೇಲರ ಪುತ್ರ ದೇವಿಪ್ರಸಾದ್ ಮತ್ತು ಸಹೋದರಿಯರ ಕುಟುಂಬದವರೂ ಗೌಡ ಸಮಾಜದ ಅಭ್ಯುದಯ ಕಾರ್ಯ-ದಲ್ಲಿ ಸಕ್ರಿಯರಾಗಿರುವುದು ಸಹಜವೇ ಆಗಿದೆ.

# ಗೌಡ ಸಮಾಜ ಅವರ ಸುಳ್ಯ ಕಾಟಕಾಯಿ ಮೊದಲು ಮತ್ತು ನಂತರ

–ಶ್ರೀ ಕೆಮ್ಮಾರ ಬಾಲಕೃಷ್ಣ, ದ.ಕ.

---

(ಗೌಡರ ಉನ್ನತಿ ಅವನತಿಗಳ ಹೋಲಿಕೆಯನ್ನು ಶ್ರೀ ಬಾಲಕೃಷ್ಣನವರು ಸಮಾಜದ ಬಂಧುಗಳಿಗೆ ಮಾಡಿಕೊಟ್ಟಿದ್ದಾರೆ. ಯಾವುದೇ ಸಮಾಜ ನೈತಿಕವಾಗಿ ಅಧ್ಯಾತ್ಮಿಕವಾಗಿ – ಭೌತಿಕವಾಗಿ ದಿನ ದಿನಕ್ಕೆ ಮುಂದುವರೆದರೆ ಆ ಸಮಾಜದ ಸರ್ವತೋಮುಖ ಅಭಿವೃದ್ಧಿಯನ್ನು ಕಾಣಬಹುದು. ಅದಲ್ಲದೆ ಒಂದು ಸಲ ಉನ್ನತ ಸ್ಥಿತಿಗೇರಿ ಮತ್ತೊಮ್ಮೆ ಪಾತಾಳಕ್ಕೆ ಬಿದ್ದರೆ ಅಂತಹ ಸಮಾಜದ ಸಂಸ್ಕೃತಿ ಆರ್ಥಿಕ ಸ್ಥಿತಿಯಲ್ಲಿ ಏರುಪೇರಾಗುವುದು ಎಂಬುದಕ್ಕೆ ಶ್ರೀ ಬಾಲಕೃಷ್ಣನವರು ತಮ್ಮ ಲೇಖನದಲ್ಲಿ ತೋರಿಸಿಕೊಟ್ಟಿದ್ದಾರೆ. ಈ ರೀತಿಯ ನ್ಯೂನತೆಗೆ ಕಾರಣದ ಪಾಠವನ್ನು ಚರಿತ್ರೆಗಳಿಂದ ಕಲೆತು, ಕಲಿತ ಪಾಠದಿಂದ ಜನತೆ ಜಾಗ್ರತೆಗೊಳ್ಳುವುದಕ್ಕೆ ಈ ಲೇಖನ ಉಪಯುಕ್ತವಾಗಿದೆ.) ಸಂ]

---

ಭಾರತದ ಸ್ವಾತಂತ್ರ ಸಂಗ್ರಾಮವು ಸಿಪಾಯಿದಂಗೆ ಎಂದು ಆಂಗ್ಲರಿಂದ ಹೆಸರಿಸಲ್ಪಟ್ಟಿದ್ದರೆ ಅದಕ್ಕೂ ಸುಮಾರು 2 ದಶಕಗಳ ಹಿಂದೆ ನಡೆದು ಅಮರ ಸುಳ್ಯ ಕಾಟಕಾಯಿ ಅಥವಾ ಕಲ್ಯಾಣಪ್ಪನ ಕಾಟಕಾಯಿಯು ಕೊಡಗು ಕೆನರಾ ಬಂಡಾಯವೆಂದಾಯ್ತು. ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಗೌಡ ಜನಾಂಗದ ಮುಂದಾಳುಗಳು ಸ್ವಾತಂತ್ರ್ಯ ಸಮರದ ಕಹಳೆಯನ್ನೂದಿದ್ದರು. ಇದೇ ಕಾಟಕಾಯಿ ಕೀರ್ತಿಶೇಷರುಗಳಾದ ಗುಡ್ಡೆಮನೆ ಅಪ್ಪಯ್ಯಗೌಡರು ಸುಳ್ಯದ ಕೆದಂಬಾಡಿ ರಾಮಪ್ಪಗೌಡರೂ ಮೂರು ವರ್ಷಗಳ ಪರ್ಯಂತ ಅವಿಶ್ರಾಂತ ಶ್ರಮ ವಹಿಸಿ ಸುಮಾರು 12,000 ಕ್ರಾಂತಿ ವೀರರನ್ನು ಸಿದ್ಧ ಪಡಿಸಿ 1937ರಲ್ಲಿ ಬೆಳ್ಳಾರೆ ಪುತ್ತೂರು. ಪಾಣೆ ಮಂಗಳೂರು ಮತ್ತು ಮಂಗಳೂರುಗಳನ್ನು ತಮ್ಮ ಜೈತ್ರ ಯಾತ್ರೆಯಿಂದ ಸ್ವಾಧೀನ, ಕಲ್ಯಾಣಸ್ವಾಮಿಯ ಅಧಿಕಾರ ಸ್ಥಾಪನೆ ಮಾಡಿದರು. ಯೋಗ್ಯರೂ ಧೀರರೂ ಮುಂದೆ ಹೋಗುವಾಗ ಕಂತ್ರಿಗಳೂ ಕುತಂತ್ರಿಗಳೂ ಎದ್ರಿಂಸುವರಿಗೆ ಅವರ ಕುಮ್ಮಕ್ಕನ್ನು ಕೊಡುವುದು ಅಂದೂ–ಇಂದೂ ಎಂದೆಂದೂ ಇರುವ ರೂಢಿ. ಪರಿಣಾಮವಾಗಿ ಮಂಗಳೂರನ್ನು ಸ್ವಾತಂತ್ರ್ಯ ವೀರರು ಸ್ವಾಧೀನ ಪಡಿಸಿದ 13ನೇ ದಿನವೇ ಬೊಂಬಾಯಿ ಕಡೆಯಿಂದ ಕೇವಲ 3000 ಸುಸಜ್ಜಿತ ಸೈನಿಕರೊಂದಿಗೆ ಧಾವಿಸಿದ ಕೇಪ್ಟನ್ ಎವರೆಸ್ಟ್ ಮತ್ತು ಗ್ರೀನ್ ಎಂಬವರು ಇವರನ್ನು ಯುದ್ಧದಲ್ಲಿ ಸೋಲಿಸಿದರು. ನಂತರ ವೀರ ರಾಮಪ್ಪಗೌಡರನ್ನು ಮತ್ತು ಕಲ್ಯಾಣಸ್ವಾಮಿಯನ್ನು ಮಂಗಳೂರು ಬಿಕರ್ನಕಟ್ಟೆಯ ಬಳಿಗೂ ಗುಡ್ಡೇರ ಅಪ್ಪಯ್ಯಗೌಡರನ್ನು ಮಡಿಕೇರಿ ಕೋಟೆಯ ಮುಂಭಾಗದಲ್ಲಿಯೂ ಬ್ರಿಟಿಷ್ ಸೇನಾ ಕಾನೂನು ಅಧಿಕಾರಿಗಳು ವಿಚಾರಣೆ ಮಾಡಿ ಗಲ್ಲಿಗೇರಿಸಿದರು. ಕ್ರಾಂತಿ ವೀರರೂ ಸ್ವಾತಂತ್ರ್ಯ ಯೋಧರು ಬಂಡಾಯಗಾರರು ದೇಶ ದ್ರೋಹಿಗಳೆಂದಾದರು. ಸೆರೆಸಿಕ್ಕಿದ ಕೆಲವು

ಮುಖ್ಯಸ್ಥರನ್ನು ಅಜೀವ ಶಿಕ್ಷೆ ವಿಧಿಸಿ ಸಿಂಗಾಪೂರಕ್ಕೂ ಅಂಡಮಾನಿಗೂ ಗಡಿಪಾರು ಮಾಡಿದರು. ಕೆಲವರನ್ನು ಬಹುದೂರದ ಜೈಲುಗಳಿಗೆ ತಳ್ಳಿದರು. ಸ್ವಾತಂತ್ರ್ಯ ಸಂಗ್ರಾಮದ ಕಿಡಿಯು ನಂದಿತು. ಗೌಡರ ಧೈರ್ಯವು ಕುಗ್ಗಿತು. ಕಾರುಬಾರು ಉಡುಗಿತು.

ಕ್ರಿ. ಶ. 1834ರ ಮೊದಲು ಗೌಡ ಜನಾಂಗವು ಉಚ್ಛ್ರಾಯಸ್ಥಿತಿಯಲ್ಲಿತ್ತು, ಎಲ್ಲವರೂ ಕೃಷಿಕರೂ ಪಶುಪಾಲನಾ ವೃತ್ತಿಯವರಾಗಿ ಬೇಸಾಯದ ಭೂಮಿಯನ್ನು ಹೊಂದಿದ ವರ್ಗದಾರರೂ ಪಟ್ಟಾದಾರರೂ ಆಗಿದ್ದರು ಕನ್ನಡ ಓದು ಬರಹ ತಿಳಿದಿದ್ದ ಧನಿಕ ಗೌಡನು ಊರ ಪಟೇಲನೋ ಪಾರುಪತ್ತೆಗಾರನೊ ಆಗಿ ಮುಂದಾಳುವಾಗಿದ್ದ.

ಜಾತಿಯ ಧಾರ್ಮಿಕ ಕಟ್ಟುಪಾಡುಗಳು ಸರಿಯಾಗಿ ನಡೆಯುತ್ತಿದ್ದುವು. ಕಾನೂನು ಕಟ್ಟಳೆಗಳೂ ವ್ಯಾಜ್ಯ ಸಾಜ್ಯಗಳೂ, ಜಾತಿ ನಡವಳಿಕೆಗಳೂ ಊರ ಅಧಿಕಾರಿ ಊರಗೌಡ, ಗ್ರಾಮದಅಧಿಕಾರಿ ಗ್ರಾಮಗೌಡ,ಮಾಗಣೆ ಅಧಿಕಾರಿ ಮಾಗಣೆ ಗೌಡ, ಸೀಮೆ ಅಧಿಕಾರಿ ಸೀಮೆಗೌಡ ಹಾಗೂ ಸರ್ವೋಚ್ಚ ಅಧಿಕಾರಿ ಕಟ್ಟೆಮನೆಗೌಡರ ತೀರ್ಮಾನಕ್ಕೆ ಬದ್ಧವಾಗಿದ್ದವು. ಕಟ್ಟೆಮನೆಯಲ್ಲಿ ತೀರ್ಮಾನವಾಗದ ನ್ಯಾಯ ಶೃಂಗೇರಿ ಮಠದ ಶ್ರೀ ಶ್ರೀ ಶ್ರೀ ಜಗದ್ಗುರು ಅವರ ಮುಖೇನ ಮುಗಿಯುತ್ತಿತ್ತು. ಹಾಗಾಗಿ ಗೌಡ ಸಮಾಜದೊಳಗೆ ಸ್ನೇಹಭಾವ ಮತ್ತು ಅನ್ಯೋನ್ಯತೆಯಿತ್ತು. ಜನರು ಸಂಪನ್ನರಾಗಿದ್ದು ದಾನ ಧರ್ಮ ಮಾಡುತ್ತಿದ್ದರು. ಇದಕ್ಕೆ ಸಾಕ್ಷಿಯಾಗಿ ಕ್ರಿ. ಶ. 1246ನೇ ಇಸ್ವಿಯಲ್ಲೇ ಕಾರ್ಕಳದಲ್ಲಿ ಚಿಕ್ಕಲ ಮಹಾದೇವಿಯು ರಾಜ್ಯಭಾರ ಮಾಡುತ್ತಿದ್ದಾಗ ಕಳಸದ ಸ್ವಾಮಿಯ ಸೇವೆಗೆಂದು ಮಿಗುದಂಡ ಕೋಟಿ ಗೌಡನ ಭೂಮಿಯನ್ನು ದತ್ತಿಯಾಗಿ ಬಿಟ್ಟುಕೊಟ್ಟ ಶಾಸನವ ಉಲ್ಲೇಖವಿದೆ.

(ಸಂಪಾದಕರ ಸೂಚನೆ :– ಈ ಗೌಡನಿಗೂ ಈಗ ದಕ್ಷಿಣ ಕನ್ನಡ ಮತ್ತು ಕೊಡಗು ಜಿಲೆಗಳಲ್ಲಿ ಕಾಣಸಿಗುವ ಗೌಡರಿಗೆ ರಕ್ತಸಂಬಂದ ವಿದೆಯೋ ಎಂಬುದನ್ನು ಶ್ರೀಬಾಲಕೃಷ್ಣನವರಾಗಲೀ ಅಥವಾ ಗೌಡಸಂಸ್ಕೃತಿ ಬಗ್ಗೆ ಅನ್ವೇಶಣೆ ಮಾಡುವವರು ಈ ಗೌಡರು ವಿಜಯನಗರದಿಂದ ದಕ್ಷಿಣಕ್ಕೆ ಯಾವ ಸಮಯದಲ್ಲಿ ಬಂದರೆಂಬುದು ಅರಿವಾಗುವುದು. ಯಾಕೆಂದರೆ ನಮ್ಮ ಹಿರಿಯರು ಮತ್ತು ಲಾರ್ಡ್ ಇರ್ವಿನ್ ವೈಸರಾಯರು ಕೊಡಗಿಗೆ ಭೇಟಿಕೊಟ್ಟಾಗ 1929 ರಲ್ಲಿ ಈ ಪಂಗಡದ ಗೌಡರು ವಿಜಯನಗರ ಪತನವಾದ ನಂತರ ದಕ್ಷಿಣಕ್ಕೆ ಬಂದರೆಂದು ಅವರು ಕೊಟ್ಟ ಬಿನ್ನವತ್ತಳೆಯಲ್ಲಿ ತಿಳಿಸಿದ್ದಾರೆ. ವಿಜಯನಗರವು 1565ರಲ್ಲಿ ಪತನವಾಗಿರುವುದರಿಂದ 1246ನೇ ಇಸವಿಯ ಈ ಶಾಸನ ಈ ಗೌಡರ ಸಂತತಿಯವರಿಗೆ ಸಂಬಂದಪಟ್ಟಿದ್ದೇ ಅಲ್ಲವೇ ಎಂಬ ಸಂಶಯ ಬರುತ್ತದೆ.)

ದುಡಿಯ ಬೇಕು. ದುಡಿದು ಜೀವಿಸಬೇಕು. ಸೇವಕತನ ಸಲ್ಲದು. ಭಿಕ್ಷೆ ಬೇಡಿ ಜೀವಿಸತದು ಸರ್ವಥಾ ಕೂಡದು. ಭಿಕ್ಷೆ ಎತ್ತಿಯೂ ಜೀವಿಸಬೇಕೆಂದದಾರೆ ಕಟ್ಟೆಮನೆ ಗೌಡರ ಆದೇಶ ಪಡೆದು ಶೃಂಗೇರಿ ಗುರುಪೀಠದಿಂದ ಮರದ ಚಿಕ್ಕನೇಗಿಲಾಕೃತಿಯನ್ನು ಪಡೆದು ತನ್ನ ಕುತ್ತಿಗೆಗೆ ನೇತು ಹಾಕಿಕೊಂಡು ಬೇಡಬೇಕು. ಇದು ಅಂದಿನ ಕಟ್ಟಳೆ. ಎಂತಲೇ ಗೌಡ ಜನಾಂಗದಲ್ಲೆ ಬೇಡುವವರೇ ಇಲ್ಲವೆಂದರೂ ಅತಿಶಯವಲ್ಲ.

ಆಂಗ್ಲರ ಆಳ್ವಿಕೆಯ ತರುಣರಲ್ಲಿ ಕಂದಾಯವನ್ನು ಖಜಾನೆಗೆ ತಲುಪಿಸುವುದು ಗೌಡ ಜನಾಂಗದವರಿಗೆ ದೊಡ್ಡ ತಲೆನೋವಾಗಿತ್ತು. ದವಸ ಧಾನ್ಯಗಳ ಬದಲು ನಾಣ್ಯಗಳು ಅವುಗಳ ಬೆಲೆಯೆಂತ ಹುಟ್ಟಿಕೊಂಡ ಸಾಲ, ಚಿನ್ನ–ಬೆಳ್ಳಿ–ಹಿತ್ತಾಳೆ ಮತ್ತು ತಾಮ್ರದ ನಾಣ್ಯಗಳು ಬಂದಿದ್ದುವು. ಒಂದು ಕಡೆ ಆಳುವವರ ಭಯ ಇನ್ನೊಂದು ಕಡೆ ಧವಸ ಧಾನ್ಯಗಳ ಬೆಲೆ ರೂಪದ ಹಣ ಮತ್ತು ಹಣದ ಲೆಕ್ಕಾಚಾರ ತಲೆಗೆ ಹತ್ತದ ಗೌಡ ಹತ್ತಿರದ ಇತರ ಜಾತಿಯ ಗೆಳೆಯನನ್ನು ಹಿಡಿದು ಅವನ ಮೂಲಕ ಕಂದಾಯ ಸಂದಾಯದ ದಾರಿಯನ್ನು ಹಿಡಿದು ಆ ಗೆಳೆಯನು ಇವರ ಬಗ್ಗೆ ರಸೀದಿ ಮಾಡಿಸಿದ. ಹೀಗೆ ಕೆಲವು ವರ್ಷಗಳ ಬಗ್ಗೆ ರಸೀದಿಯಾದ ಬಳಿಕ ಗೌಡರ ಭೂಮಿ ಗೆಳೆಯನಿಗಾಗಿ ಇವನು

ಒಕ್ಕಲು ಗೆಳೆಯ ಧನಿಯಾದ ಇಂತಃ ಘಟನೆಗಳು ಹಲವು. "ಕೊಟ್ಟವ ಕೋಡಂಗಿ ಇಸ್ಕೊಂಡವ ಈರಭದ್ರ" ಅಂದ ಹಾಗಾಯ್ತು. ಇನ್ನೂ ಹಲವು ಕಾರಣಗಳಿಂದ ಗೌಡಜನಾಂಗವು ಕೆಳಗಿಳಿಯುತ್ತಾ ಬಂತು.

ಬ್ರಿಟಿಷರು ತಮ್ಮ ಆಫೀಸುಗಳಲ್ಲಿ ಕೆಲಸ ಮಾಡಲು ಜನ ತಯಾರಿ ಮಾಡಲು ಹೈಸ್ಕೂಲು ಕಾಲೇಜುಗಳನ್ನು ಮಡಿಕೇರಿ, ಮಂಗಳೂರು, ಮೈಸೂರು ಮದರಾಸು ಇತ್ಯಾದಿ ಕಡೆಗಳಲ್ಲಿ ತೆರೆದರು.

ಕೊಡಗಿನಲ್ಲಿ ಕ್ರಿ. ಶ. 1907 ರ ಹೊತ್ತಿಗೆ ನಿಡ್ಯುಮಲೆ ಮುದ್ದನವರು ಮಂಗಳೂರಿನ ಎಲಾಸಿಯಸ್ ಕಾಲೇಜಿನಿಂದ ಹೊರ ಬಂದ ಕೊಡಗು ಜಿಲ್ಲೆಯ ಮೊದಲ ಗೌಡ ಪದವೀಧರ ಸೋಣಗೇರಿ ಚಿನ್ನಪ್ಪಗೌಡರು ಕ್ರಿ. ಶ. 1922 ನೇ ಇಸ್ವಿಗೆ ಕನ್ನಡ ಜಿಲ್ಲೆಯ ಪ್ರಥಮ ಪದವೀಧರ ಗೌಡರಾದರು.

ಅಲ್ಲಿಯವರೆಗೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗೌಡ ಜನಾಂಗದ ಹಿರಿಯರನೇಕರು ಪಾಲ್ಗೊಂಡು ಸೋತ ದಸೆಯಿಂದಲೋ (ಇಂಗ್ಲೀಷ್ ವಿದ್ಯಾಭ್ಯಾಸ ಕೊಟ್ಟ ಮಗ ಎತ್ತು ಕೋಣಗಳ ಮಾಂಸವನ್ನು ಗತ್ತಿನಲ್ಲಿ ತಿಂದಾನು ಎಂಬ ಅಂಜಿಕೆಯಿಂದಲೋ ವಿದ್ಯಾಭಿತೀಯಿಂದಲೋ, ಮಗನನ್ನು ಬಲು ದೂರದ ಮಂಗಳೂರಿಗೆ ಓದಲು ಕಳುಹಿಸಲಿಲ್ಲ ತಮ್ಮ ಅಂಕೆಯಲ್ಲಿರಲಾರನೆಂದು ಹೆದರಿಕೆಯಿಂದಲೋ ಮುದ್ದು ಮಗನನ್ನು ಬಿಟ್ಟಿರಲಾರದ ಮಮತೆಯಿಂದಲೋ ಅಥವಾ ಆರ್ಥಿಕ ಮುಗ್ಗಟ್ಟಿನ ದೆಸೆಯಿಂದಲೋ ಗೌಡನು ಹೆಚ್ಚಿಗೆ ಓದಲಾರದೆ ಉಳಿದದ್ದು ಉಳಿದದ್ದೇ.

ಹಾಗಾಗಿ ಗೌಡ ಜನಾಂಗವನ್ನು 1837 ರ ಹೊಡೆತದಿಂದ ಪೂರ್ಣ ಚೇತರಿಸಿಕೊಂಡಿಲ್ಲವೆಂದರೆ ತಪ್ಪಾಗಲಾರದು.

ಈಗ 1850–60 ರಿಂದೀಚೆಗೆ ಹಳ್ಳಿ ಹಳ್ಳಿಯಲ್ಲೂ ಹೈಸ್ಕೂಲು ಕಾಲೇಜುಗಳು ಹುಟ್ಟಿಕೊಂಡು ಗೌಡರಲ್ಲಿ ಪದವೀಧರರು ನಿರ್ಮಾಣವಾಗುತ್ತಿದ್ದರೂ ಉದ್ಯೋಗಕ್ಕೆ ಸೇರಿಸಿಕೊಳ್ಳುವರೆ ಶಿಫಾರಸ್ಸು ಮಾಡುವ ಶಾಸಕರಾಗಲೀ, ಸಂಸತ್ ಸದಸ್ಯರಾಗಲೀ (ಈ ಸಾಲಿನಲ್ಲಿ ಒಬ್ಬರನ್ನು ಹೊರತು) ಗೌಡ ಜನಾಂಗದಲ್ಲಿ ಇಲ್ಲವಾಗಿರುವುದರಿಂದ ಅನಾಥರಂತೆ ಇತರರನ್ನು ಯಾಚಿಸುವ ಸ್ಥಿತಿಗೆ ಬಂದಿದೆ. ಆದಕಾರಣವೇ ಹೆಚ್ಚಿನ ಗೌಡರು ಅಧ್ಯಾಪಕರಾಗಿ ಉಪನ್ಯಾಸಕರಾಗಿಯೇ ಉದ್ಯೋಗದಲ್ಲಿದ್ದಾರೆ. ಮತ್ತು ಕಂದಾಯ, ವಿದ್ಯೆ, ಅರಣ್ಯ, ಪೋಲಿಸ್ ಮತ್ತು ಬೇರೆ ಸಂಸ್ಥೆಗಳಲ್ಲಿ ಉನ್ನತ ಅಧಿಕಾರ ಸ್ಥಾನಗಳಿಂದ ವಂಚಿತರಾಗಿದ್ದಾರೆ.



## ಎರಡು ಹನಿಗಳು

ಹಣದ ದಾಹ ತೀರಿದಾಗ
ಆರಿತ್ತು ಮೈಯ ದಾಹ
ಕೊಳ್ಳಿಯಿಂದ ತಿರುಗಿದಾಗ
ಉಳಿದಿತ್ತು ಸಪ್ಪಗಾದ ದೇಹ

ಗಂಡಿನ ಕ್ರೌರ್ಯವನ್ನು
ಸೈರಿಸೆನ್ನುವ ಹೆಣ್ಣು
ಗಂಡು ಮಗುವೇ ಬೇಕೆಂದು
ಬಸಿರಾಗುವಳು

—ಮೀನಾ ಕುತ್ಯಾಳ

# ಕಲಬೆರಿಕೆ-ಲಂಚ

ಹೊದ್ದಟ್ಟಿ ಭವಾನಿ ಶಂಕರ್
ಬಿ. ಇ. ಎಲ್. ಬೆಂಗಳೂರು

---

[ಸಾರ್ವಜನಿಕ ದ್ರೋಹಗಳಲ್ಲಿ ಆರ್ಥಿಕ ಅಪರಾಧಗಳು ಒಂದು ರೀತಿಯವು. ಅಂತಹವುಗಳಲ್ಲಿ ಕಲಬೆರಿಕೆ–ಮತ್ತು ಲಂಚ ಕೋರತನ ಸಮಾಜದಲ್ಲಿ ದಿನಂದಿ ದಿನಕ್ಕೆ ಹೆಚ್ಚಾಗುತ್ತಿವೆ. ಇವುಗಳ ಒಂದು ಉದಾಹರಣೆಯನ್ನು ಈ ಅರೆ ಭಾಷೆಯ ಪದ್ಯದಲ್ಲಿ ಶ್ರೀ ಹೊದ್ದೆಟ್ಟಿ ಭವಾನಿ ಶಂಕರರು ಚಿತ್ರಿಸಿದ್ದಾರೆ. ಇದೇ ರೀತಿ ಇನ್ನೂ ವಿವರವಾಗಿ ಕನ್ನಡ ಭಾಷೆಯಲ್ಲಿ ಕವನವನ್ನು ರಚಿಸಿ ಅತೀ ಹೆಚ್ಚು ಪ್ರಸಾರದಲ್ಲಿರುವ ಕನ್ನಡ ಪತ್ರಿಕೆಗಳಲ್ಲಿ ಪ್ರಕಟಣೆಗೊಂಡರೆ ಇಂತಹ ಸಾಮಾಜಿಕ ದ್ರೋಹಗಳನ್ನು ಹತ್ತಿಕ್ಕಲು ಸಾಧನಗಳೆಲ್ಲೊಂದಾಗಬಹುದೆಂದು ನಂಬುತ್ತೇವೆ.
—ಸಂ.]

---

ಕಲಬೆರಿಕೆ ಒಂದು ಕಡೆ
ಲಂಚ ಇನ್ನೊಂದು ಕಡೆ
ಎರಡೂ ಸಮ ಸಮವಾಗಿ ನಡಿತ ಉಟ್ಟು ॥
ಬಡಜನರ ಬೊದ್ಕಿಕೆ
ಬುಡ್ದುಲೀ ನಾಡ್‌ಲಿ
ಬೇಲಿನೆ ಹೊಲ ಮೆದ್ದ್ ಮೇಯುತುಟ್ಟು

ನಮ್ಮ ನಾಡ್‌ಲಿ ಇರುವ
ಈ ಮೋಸ ವಂಚನೆಗ
ದಿನದಿನನು ಜನಗಳಲಿ ಹೆಚ್ಚು ತುಟ್ಟು ।
ಕಾಪಾಡುವೊವು ಎಲ್ಲ
ಹಣಕ್ಕಾಗಿ ಹೆಣಗುತೊಳೊ
ಸತ್ಯ ನ್ಯಾಯನ ಎಲ್ಲ ದೂರ ಬುಟ್ಟ್ ॥

ಕದ್ದ ಕಳ್ಳನ ಹಿಡ್ದ್
ಗುದ್ದಿ ಗುದ್ದೀ ಅವನ
ಬುದ್ದಿ ಸರಿ ಮಾಡಿಕೆ ಜೈಲೊಳಗೆ ಹಾಕಿ ।
ಬಿದ್ದ್ ಬಿದ್ದ್ ಅಂವನ
ಬುದ್ದಿನವು ತಿದ್ದಕೊರೆ
ಕಷ್ಟಗಳೆ ಇಲ್ಲಂವಂಗೆ ಕೊಡದೆ ಬಾಕಿ ।

ಕಳ್ಳಂಗೂ ಮಿಗಿಲ್ಲಾದ
ಕಳ್ಳ ಕಲಬೆರೆಕೆಯುವ
ಅವರ ಹಿಡಿಯದೆ ಅಧಿಕಾರಿ ಗ್ಯಾಕೆ ಬುಟ್ಬೊ ।
ಸತ್ಯಕ್ಕೂ ಇರದೆ ನೆಲೆ
ನ್ಯಾಯಕ್ಕೆ ಇರದೆ ಬೆಲೆ
ನ್ಯಾಯ ಬೆಲೆ ಅಂಗಡಿಯ ಮೇಲೆ ಸಿಟ್ಬೊ ।

ಲಂಚ ಲಂಚಾಂತೇಳಿ
ನಾಲಿಗೆಲಿ ನೆಕ್ಕುತೊಳೊ
ಬಡಜನರ ಮೈಂದಿಳ್ದ ಬೆವರಡನಿನ
ಲಂಚ ತಕಂಬವರೆಲ್ಲ
ಗೊತ್ತಿದ್ದು ಹಿಡಿದುಲ್ಲೆ
ಯಾಕೆ ಹಿಡಿಯದೆ ಹೇಳಿ ಬುಟ್ಟವವನ ।

ಕಲಬೆರಕೆ ಲಂಚೆಗೂ
ನಂಟತನ ದೂರಿಲ್ಲೆ
ಪದ ಮಾತ್ರ ಎರಡುಟ್ಟು ಅರ್ಥ ಒಂದೆ ।
ಎಲ್ಲೆಲ್ಲೂ ಗೊತ್ತಿದ್ದ್
ನಡೆಕನದ್ ಈ ಸುಲಿಗೆ
ಮೊಡ್ಡವರ ಕೈಯಿಲ್ಲೊ ಅವರೆ ಹಿಂದೇ

ಏನು ಬೇಕರು ಕೂಡ
ನ್ಯಾಯಕ್ಕೆ ದಕ್ಕುದುಲೆ
ಲಂಚ ಕೊಟ್ಟರೆ ಮಾತ್ರ ಎಲ್ಲ ಉಟ್ಟು ।
ಅನ್ಯಾರಾ ಕೈಂದೆಳ್ದ
ನನ್ನದಿದ್'ಂತೇಳೊವಕೆ
ಈ ನಾಡ್'ಲೆಲ್ಲದಕೂ ಸ್ವಾತಂತ್ರ್ಯ ಉಟ್ಟು

ನ್ಯಾಯಕ್ಕೆ ಸಿಕ್ಕ್ಯುಟ್ಟು
ಶಿಕ್ಷೆ ಈ ದಿನಗಳಲಿ
ನಿಜ ಜೀವನಕೆ ಇದುವೆ ದೊಡ್ಡ ಪೆಟ್ಟ್ ।
ಮೊರ್ಯಾದಿಲಿಂದ್ ಜನ
ಬೆಂಡ್ಕಿಕೆ ಬುಡ್ ತಿಲ್ಲೆ
ಮೊರ್ಯಾದಿಗಿಂದ್ ಬೆಲೆ ಕೊಡಂವ ಯಾರಿಟ್ಟು

ಅತಿ ಮೋಸದಣಕಾಗಿ
ಮೊನ್ ಷರನೆ ಕೊಲ್ಲು ತೊಳೊ
ಈ ತಪ್ಪುನಿಂದ್ ಸರಿ ಮಾಡಂವ್ಯಾರುಟ್ಟು ।
ಬಡ ಜನರ ಮೇಲೆನೆ
ದೌರ್ಜನ್ಯ ನುಡಿತುಟ್ಟು
ಇದೆಲ್ಲದರ ದೇವ್ರೊಬ್ಬ ನೋಡು ತುಟ್ಟು ॥

---

## ಚುಟುಕುಗಳು

### ಕಳ್ಳ

ಕಳ್ಳರೆಲ್ಲರ ಹಿಡ್ದ್ ಜೈಲೊಳಿಗೆ ಹಾಕಿ
ಇಪಿಕಂಡಿದ್ದವೆ ಅವರ ಲಾಯೆಕ್ ಲೇಸಾಂಕಿ ॥
ಅಸ್ಟಾಕನಾ ಒಳಗೆ ಕೊರಯುತ್ತ್‌ರಿವ
ಹೊರಗೆ ಓಡುತ ಹೇಳ್ತ ಜೈಲವಕೆ ಕೈ ಕೊಟ್ಟೆ ।

### ಸಹಾಯ

ಕಡ್ದಂವನ ಕೊಂದವನ ಸ್ಟೇಶನಿಗೆ ತಂದ್
ಒದ್ದಂವನ ಪೋಲೀಸ್ ಬಾಯ್ಂ ಬುಡುಸ್‌ದಂದ್
ಅಸ್ಟ್ಕನಾ ಬಾದು ದೊಡ್ಣವರ ಪೋನು
ಪೋಲೀಸ್ ಬುಡದಂವನ ಮಾಡ್ನು ಮತ್ತೇನ್ ।

# ವರದಕ್ಷಿಣೆ ಪಿಡುಗಿಗೊಂದು ಸವಾಲು

—ಶ್ರೀಮತಿ ಲಲಿತಾಜ ಮಲ್ಲಾರ

[ವರದಕ್ಷಿಣೆ ಪಿಡುಗೆಂಬ ಭಯಂಕರ ಖಾಯಿಲೆ ಸಮಾಜದ ಜನತೆಯಲ್ಲಿ ಭೀತಿಯನ್ನುಂಟು ಮಾಡಿದೆ. ಈ ಸ್ಮರಣ ಸಂಚಿಕೆಗೆ ಶ್ರೀಮತಿ ಲಲಿತಾಜ್‌ರಲ್ಲದೆ ಶ್ರೀ ಯಂ ಯಂ. ಗಿರಿಯವರು ಬಹಳ ಮಾರ್ಮಿಕವಾಗಿ ವರದಕ್ಷಿಣೆಯನ್ನು ಪಡೆಯುವ ಯುವಕರ ಮಾರಾಟವೆಂದೇ ಕರೆದು ಅಂತಹ ಯುವಕರಿಗೆ ಆತ್ಮ ಅಭಿಮಾನವಿಲ್ಲವೆಂದಿದ್ದಾರೆ. ಶ್ರೀ ಹೊದ್ದೆಟ್ಟಿ ಭವಾನಿಶಂಕರ್‌ರವರು ಅರೆ ಭಾಷೆಯಲ್ಲೆ ಪದ್ಯ ರಚಿಸಿ ಈ ಪಿಡುಗಿನ ವಿರುದ್ಧ ಯುದ್ಧವನ್ನೇ ಸಾರಿದ್ದಾರೆ. ಇದನ್ನೆಲ್ಲಾ ನೋಡಿದಾಗ ಜನತೆಯಲ್ಲಿ ವರದಕ್ಷಿಣೆಯ ವಿಷಯದಲ್ಲಿ ಎಷ್ಟರ ಮಟ್ಟಿಗೆ ಚಿಂತೆ ಮನಸ್ಸಿನಲ್ಲಾಗುತ್ತಿದೆ ಈ ಜಾಡ್ಯವನ್ನು ಹೋಗಲಾಡಿಸುವ ದಾರಿ ಏನೆಂಬ ದೊಡ್ಡ ಸಮಸ್ಯೆಯೇ ಉದ್ಭವಿಸಿದೆ. ಶ್ರೀಮತಿ ಲಲಿತಾಜಮ್ಮನವರೇನೋ ಪೋಲಿಸರ ಸಹಾಯದಿಂದ ಪರಿಹಾರವನ್ನು ಕಾಣಿಸಿಕೊಳ್ಳುವಂತೆ ಮಾಡಿದ್ದಾರೆ. ಆದರೆ ಎಲ್ಲರಿಗೂ ಆ ರೀತಿ ನಟಿಸಿ ಜನರ ಮನಸ್ಸನ್ನು ಪರಿವರ್ತಿಸಲು ಸಾಧ್ಯವೇ ಇದಕ್ಕೆ ಶಾಶ್ವತ ಪರಿಹಾರ ವಿದೆಯೇ? ಎಂದು ಜನತೆ ಚಿಂತಿಸ ಬೇಕಾಗಿದೆ. ಸರ್ಕಾರ ಎಷ್ಟೇ ಏನೇ ಖಾನೂನು ಮಾಡಿ ಇದನ್ನು ತಡೆಗಟ್ಟಲು ಸಾಧ್ಯವಿಲ್ಲ. ಜನತೆ ಜಾಗ್ರತರಾಗಿ ವರದಕ್ಷಿಣೆ ಪಡೆಯುವ ಯುವಕರನ್ನು ಮತ್ತು ಅದನ್ನು ಕೇಳಲು ಪ್ರೋತ್ಸಾಹಿಸುವ ತಂದೆ ತಾಯಿಗಳನ್ನು ಮತ್ತು ಪಡೆದುಕೊಳ್ಳುವವರನ್ನು ಸಮಾಜದಿಂದ ಬಹಿಷ್ಕರಿಸುವ ಹಂತಕ್ಕೆ ಒಂದು ಕ್ರಾಂತಿಕಾರ ನಿರ್ಧಾರ ಕೈಕೊಂಡರೆ ಪಿಡುಗನ್ನು ಸಮಾಜದಿಂದ ಹೊಡೆದೋಡಿಸಲು ಸಾಧ್ಯ. ಇಂತಹ ಕತೆಗಳು ಕವನಗಳು ಲೇಖನಗಳು ಸಮಾಜದಲ್ಲಿರುವ ಈ ತರಹದ ಇನ್ನೂ ಹಲವಾರು ನ್ಯೂನತೆಗಳನ್ನು ಹೋಗಲಾಡಿಸುವ ಸಾಧನಗಳಾಗಲಿ ಎಂದು ಹಾರೈಸುತ್ತೇವೆ. ಸಂ]

ಗಂಜ ಮನೆಯಿಂದ ಹಣದ ಬೇಡಿಕೆಯನ್ನು ಹೊತ್ತು ತಾರು ಸೇರಿದ ಸವಿತಗೆ ರಾತ್ರಿ ಕಣ್ತುಂಬ ಸರಿಯಾಗಿ ನಿದ್ರೆ ಬರುತ್ತಿರಲಿಲ್ಲ. ಹಗಲು ಅಷ್ಟೆ, ಏನೋ ಚಡಪಡಿಕೆ. ವಿಚಿತ್ರ ರೀತಿಯ ತಳಮಳ. ಮುಂದಿನ ಭವಿಷ್ಯವನ್ನು ಯೋಚಿಸಿದರೆ. ಇದಕ್ಕೆ ಕೊನೆ ಎಂದು ? ಹೇಗೆ ? ಎಂಬ ಪ್ರಶ್ನೆ ಭೃಗ್ಮಕಾರವಾಗಿ ಎದುರು ನಿಲ್ಲುತ್ತಿತ್ತು. ಗಂಡನ ಹಾಗೂ ಅತ್ತೆಯ ಹಣದ ದಾಹ ಒಂದು ರೀತಿಯಾದರೆ ತಂದೆ ಹಾಗೂ ತಂಗಿಯರದೊಂದು ರೀತಿ ಹಠದ ಸ್ವಭಾವ ಇವರುಗಳ ಮಧ್ಯೆ ಸಿಕ್ಕಿದ ಸವಿತಳ ಬಾಳು ಅಡಕತ್ತರಿಗೆ ಸಿಕ್ಕಿದಂತಾಗಿತ್ತು. ನೀವು ಹಣ ಕೊಟ್ಟರೆ ನಾನು ಗಂಡನ ಮನೆ ಸೇರಿ ಸುಖವಾಗಿರುತ್ತೆನೆಂದು ಅಪ್ಪಯ್ಯ ನಲ್ಲಿ ಯಾವ ಬಾಯಲ್ಲಿ ಕೇಳುವುದು, ತನ್ನ ಶಕ್ತಿಗೆ ಮೀರಿ ವರದಕ್ಷಿಣೆ ಹದಿನೈದು ಸಾವಿರ, ಚಿನ್ನ ಹತ್ತು ಸವರನ್ ಕೊಟ್ಟ ಮದುವೆಯನ್ನು ಆದ್ದೂರಿಯಲ್ಲಿ ಮಾಡಿ ಸಾಲದ ಹೊರೆ ಹೊತ್ತಿದ್ದಾರೆ. ಹೀಗಿರುವಾಗ ಏನೆಂದು ಕೇಳಲಿ ? ಹೇಗೆಂದು ಕೇಳಲಿ ? ಇನ್ನು ಗಂಡನ ಅತ್ತೆಯ ಎಚ್ಚರಿಕೆ ನುಡಿ ನೆನಪಾದರೆ ಮೈ ನಡಗುತ್ತದೆ. ಸ್ಕೂಟರಿಗೆ ಬೇಕಾದ ಹಣವನ್ನು ತಾರದೆ ಈ ಮನೆಗೆ ಕಾಲಿಟ್ಟರೆ ಮತ್ತೆ ಜೀವ ಸಹಿತ ಹೊರ ಹೋಗಲಾರೆ ನೆನಪಿಟ್ಟುಕೋ ಎಂದೆಚ್ಚರಿಸಿಯೇ ಕಳಿಸಿದ್ದಾರೆ. ಆಯ್ಯೋ ದೇವರೇ ಈ ಹಾಳು ಹೆಣ್ಣಿನ ಜನ್ಮ ವೇತಕಾದರು ಕೊಟ್ಟಿಯೋ ಅದಕ್ಕಿಂತ ಹಾದಿಯಲ್ಲೊಂದು ಮರವಾಗಿ ಹುಟ್ಟಿದರೆ ದಾರಿ ಹೋಕರಿಗೆ ನೆರಳಾಗಿಯಾದರೂ ಬಾಳಬಹುದಿತ್ತು. ಈಗ ಎಲ್ಲರಿಗೂ ಹೊರೆಯಾಗಿ "ವರದಕ್ಷಿಣೆಯ ಪಿಡಿಗಿಗೆ" ಬಲಿಯಾಗುವ ಬಾಳಾಯ್ತು. ಮದುವೆಯಾದಲಾಗಾಯ್ತು ಇಲ್ಲಿವರೆಗೆ ಅನುಭವಿಸಿದ ಚಿತ್ರಹಿಂಸೆ ಕಣ್ಣಿಗೆ ಕಟ್ಟಿದಂತಾಗಿ ದುಃಖ ಉಮ್ಮಳಿಸಿಕೊಂಡು ಬರುವಾಗ ಎರಡು ಕೈಯಿಂದ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅತ್ತಳು. ಎಷ್ಟೊತ್ತು ಹಾಗೆ ಅಳುತ್ತಾ ಹಾಗೆ ಕೂತಿರುತ್ತಿದ್ದಳೊ, ತಂಗಿ ವನಿತ ಅಕ್ಕನ ಹುಡುಕಿಕೊಂಡು ಬರುವಾಗ ಅಕ್ಕ ಅಂಗಳ ದಂಚಿನಲ್ಲಿ ಪಲ್ಲಿಗೆ ಚಪ್ಪರದಡಿ ಕಲ್ಲು ಬೆಂಚಿನ ಮೇಲೆ ಕುಳಿತು ಇಹದ ಅರಿವೆ ಇಲ್ಲದಂತೆ ಶೋಕವೇ ಮೂರ್ತಿವೆತ್ತಂತೆ ಕಂಡು ಕನಿಕರ, ಕೋಪವೆರಡು ಏಕ ಕಾಲದಲ್ಲುಂಟಾಯ್ತು. ಸವಿತ, ವನಿತ, ಕವಿತ, ವಾಸಣ್ಣ ಸೀತಕ್ಕರ ಮಕ್ಕಳು, ಗಂಡು ಮಕ್ಕಳಿಲ್ಲವೆಂಬ ಕೊರಗು ಬಾಧಿಸದಂತ ನೆಮ್ಮದಿಯ ಜೀವನ ಅವರದಾಗಿತ್ತು. ಆದರೆ ಸವಿತ ಮದುವೆಯಾಗಿ ಆರು ತಿಂಗಳಲ್ಲೆ ಪೂರ್ಣ ಚಂದ್ರನಿಗೆ ಗ್ರಹಣ ಹಿಡಿದಂತಾಗಿತ್ತು. ಮೂವರು ಹೆಣ್ಣು ಮಕ್ಕಳಲ್ಲಿ ಸವಿತ ಸ್ವಲ್ಪ ಮೃದು ಹೃದಯದ ಭಾವುಕ ಹೆಣ್ಣು. ವನಿತ ಧೈರ್ಯಸಾಹಸದ ಕಠಿಣ ಮನಸಿನವಳು. ಕವಿತ ಅಕ್ಕಂದಿರಿಬ್ಬರ ಗುಣವನ್ನು ಸಮನಾಗಿ ಪಡೆದು ಎಲ್ಲರ ಅಚ್ಚು ಮೆಚ್ಚಿನ ಪ್ರತಿಭಾವಂತಳಾಗಿ ಕಲಿಯುತ್ತಿದ್ದಳು. ತಿಳಿನೀರ ಕೊಳಕ್ಕೊಂದು ಕಲ್ಲೆಸೆದು ರಾಡಿ ಏಳಿಸಿದಂತೆ ಅವರ ಸಂಸಾರಕ್ಕೆ ಅಳಿಯನ ಹಣದಾಹ ಗ್ರಹಣ ಹಿಡಿದ ಹಾಗೆ ಆಗಿತ್ತು. ಅನಿತ ಅಕ್ಕನ ಜಡೆ ಹಿಡಿದೆಳೆದು ತನ್ನೆಡೆಗೆ ತಿರುಗಿಸಿಕೊಂಡು ಬೊಗಸೆಯಲ್ಲಿ ಮುಖ ಹಿಡಿದು ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತ ಯಾಕತಕ್ಕ ಹೀಗೆ ಅಳುತ್ತ ಕುಳಿತುಕೊಳ್ಳುತ್ತಿಯಾ ? ಅಳುವುದರಿಂದ ಕಷ್ಟಗಳು ಪರಿಹಾರವಾಗಲು ಸಾಧ್ಯವೆ ? ಅದರಿಂದ ಮನಸ್ಸು, ದೇಹಗಳಿಗೆ ಅಘಾತ ನೋಡಕ್ಕ ಎಂತಹ ಕಠಿಣ ಪರಿಸ್ಥಿತಿಯೇ ಬರಲಿ ತಾಳ್ಮೆಗೆಡದೆ ಧೃತಿ ಗೆಡೆದ ಎದುರಿಸಿದರೆ ಆ ಸಮಸ್ಯೆಯನ್ನು ಸುಲಭವಾಗಿ ಪರಿಹರಿಸಬಹುದು. ವ್ಯಕ್ತಿ 'ಸಮಸ್ಥಿತಿ'ಯನೆಂದಿಗೂ ಕಳೆದು ಕೊಳ್ಳಬಾರದು ದೊಂಬರಾಟದವನು ತಾನು ಕಟ್ಟಿದ ಹಗ್ಗದ ಮೇಲೆ ಎಷ್ಟು ತಾಳ್ಮೆಯಿಂದ ನಡೆಯುತ್ತಾನೆ ಅಲ್ಲವೇ ? ಸುಖ ದುಃಖಗಳ ಅಲೆಗಳು ಬಾಳಿನ ಸಾಗರದಲ್ಲಿ ಎದ್ದು ಅಪ್ಪಳಿಸಿದರೂ ಅಂಜದೆ ಅಳುಕದೆ ಇರುತ್ತಾರೆ, ಅವರೇ ಸ್ಥಿತ. ಪ್ರಜ್ಞರು ಬಾಳಿನುದ್ದಕ್ಕೂ ಏರುಪೇರುಗಳ ಸತ್ಯ ಅಘಾತಕ್ಕೆ ಹೆದರಿ ಅಳುತ್ತ ಕೂರುವರು ಹೇಡಿಗಳು ಅಂಜು ಪುರುಕರು ಅಂಥವರಿಗೆ 'ಜೀವನವೇ' ಇಲ್ಲ! ಜೀವನ ಇರುವುದು ಧೈರ್ಯವಂತರಿಗೆ. ವನಿ ನನ್ನಿಂದಾಗಿ ನಿಮಗೆಲ್ಲ ತೊಂದರೆ, ಅಪ್ಪಯ್ಯನಿಗೆ ತಲೆ ಹೊರೆ, ಇದನ್ನು ಹೇಗ ಸಹಿಸಲಿ. ನಾನೊಂದು ಉಪಾಯವನ್ನು ಹೇಳುತ್ತೇನೆ. ನೀನು ಧೈರ್ಯವಾಗಿ ಅದರಂತೆ ನಡೆದರೆ ಎಲ್ಲರ ಕಷ್ಟಕ್ಕೂ ಕೊನೆಕಾಣಿಸಬಹುದು. ಹೆದರಬೇಡ ವನಿ ನೀ ಏನು ಹೇಳಿದರು ಅದರಂತೆ ನಡೆಯುತ್ತೇನೆ. ಒಂದು ಸಾರಿ ಈ ಜಂಜಾಟದಿಂದ ಮುಕ್ತಳಾದರೆ ಸಾಕು, ನೀನಂದ ವರದಕ್ಷಿಣೆಯ ಬೇಡಿಕೆಯನ್ನು ಮುಂದಿಟ್ಟಾಗಲೆ ತಿರಸ್ಕರಿಸಿದ್ದರೆ ಸರಿಯಾಗುತ್ತಿತ್ತು. ನೋಡು

ನಾನೀಗಲೆ ಮೂರು ಗಂಡುಗಳ ಮುಖಕ್ಕೆ ಉಗಿದು ಓಡಿಸಿದೆ. ಹಣ ಪಿಶಾಚಿಗಳು ಈ ಮನೆ ಮೆಟ್ಟಿಲು ಹತ್ತಬಾರದೆಂದು ಫಲಕ ಹಾಕಬೇಕೆಂದು ಯೋಚಿಸಿದ್ದೇನೆ. ಅವರು ಕೇಳಿದಷ್ಟು ಹಣ, ಒಡವೆಯನ್ನು ಹೊತ್ತುಕೊಂಡೋಗಿ ಅವರ ಚಾಕರಿ ಮಾಡಿಬೇಡದ ಮಾತು ಕೇಳುವುದಕ್ಕಿಂತ ಅದೇ ಹಣದಿಂದ ನಾವೇ ನಾದರೂ ವ್ಯಾಪಾರ, ವ್ಯವಹಾರವೇ ಮಾಡಿ ಸ್ವತಂತ್ರವಾಗಿ ಜೀವಿಸಬಹುದಲ್ಲ. ನೋಡಕ್ಕ ವರದಕ್ಷಿಣೆ ಪಿಡುಗು ನಿವಾರಣೆಯಾಗಬೇಕಾದರೆ ಪ್ರತಿಯೊಬ್ಬ ಹೆಣ್ಣು ಮಗಳು ಹಣ ಬಯಸುವವನ ಮದುವೆಯಾಗಲಾರೆ ಎಂಬ ಶಪತ ಮಾಡಿದರೆ ಧನ ಪಿಶಾಚಿ ಗಂಡುಗಳು ದಾರಿಗೆ ಬರಲು ಸಾಧ್ಯ. ಇಲ್ಲದಿದ್ದರೆ ಇದೇ ಇದ್ದ ಗೋಳು ಹೆತ್ತವರಿಗೆ ತಲೆನೋವು, ಹಣಹೊತ್ತುಕೊಂಡು ಹೋದ ನನ್ನಂತಹ ಹೆಣ್ಣುಗಳದು ಇದೇ ರಗಳೆ—ವನಿ ನನ್ನ ದುಃಖದ ಬಗ್ಗೆ ನಿಮಗೆಲ್ಲ ತಮಾಷೆ ಮಾಡುವಂತಾಯ್ತು. ಇಲ್ಲ ನಿನ್ನ ಅಳು ಮೋರೆ ನೋಡಿ ಹೇಳಿದ್ದಷ್ಟೆ. ಅಕ್ಕ ತಂಗಿಯರು ತುಂಬ ಹೊತ್ತು ಕುಳಿತು ಹಣ ಪಿಶಾಚಿಗಳಿಗೆ ಬುದ್ಧಿ ಕಲಿಸುವುದರ ಬಗ್ಗೆ ಉಪಾಯ ಹುಡುಕಿ ಅದರಂತೆ ನಡೆಯಲು ನಿಶ್ಚಯಿಸಿದರು. ಸಂಜೆಗೆ ತಂದೆಯಲ್ಲಿ ತಮ್ಮ ಪ್ಲಾನ್ ಹೇಳಿದ ವನಿತ ಕೆಲವು ಸಲಹೆ ಸೂಚನೆಗಳನ್ನು ಕೇಳಿ ಪಡೆದಳು, ಮರುದಿನದಿಂದಲೆ ತಮ್ಮ ಕಾರ್ಯವನ್ನು ಜಾರಿಗೆ ತರಲು ಎಲ್ಲವ್ಯವಸ್ಥೆ ಮಾಡಿದ ವನಿತ ತಾನೇ ಖುದ್ದು ಪೋಲೀಸ್ ಸ್ಟೇಷನಿಗೆ ಹೋಗಿ ಎಸ್.ಐ.ಯವರಲ್ಲಿ ತಮ್ಮ ಮನೆಯ ಸ್ಥಿತಿ ಗತಿ ವಿವರಿಸಿ ತಮ್ಮ ಉಪಾಯವನ್ನು ಹೇಳಿದಳು. ಮೊದಲಿಗೆ ಎಸ್. ಐ. ಹಿಂದೆ ಮುಂದೆ ನೋಡಿದರು. ಕೊನೆಗೆ ಒಂದು ಹೆಣ್ಣಿನ ಸುಭದ್ರ ಜೀವನಕ್ಕಾಗಿ ಒಪ್ಪಿಗೆ ನೀಡಿದರು. ಅಕ್ಕನ ಗಂಡನ ಮನೆಗೆ ಹೊರಡುವ ದಿನ ಇಬ್ಬರು ಪೋಲಿಸರು ಹಾಜರಾದರು. ಅವರ ಪೋಲಿಸ್ ಉಡುಪು ಬ್ಯಾಗ್ ಸೇರಿತು. ಸಾಮಾನ್ಯರಂತ ಉಡುಪು ಧರಿಸಿ ಸವಿತನ ದೊಡ್ಡಮ್ಮನ ಮಕ್ಕಳಾದರು. ಕವಿತ ಶಾಲೆ ಇರುವ ಕಾರಣ ಅಮ್ಮ, ಅಪ್ಪ, ಕವಿತ, ಮನೆಯಲ್ಲಿರುವುದೆಂದು ವನಿತ, ಸವಿತನ ಜೊತೆಗೆ ಹೋಗಿ ಸ್ವಲ್ಪ ದಿನ ಅಕ್ಕನ ಮನೆಯಲ್ಲಿದ್ದು ಅವಳಿಗೆ ಧೈರ್ಯ ಕಲಿಸಿ ಬಾಳ ರೂಪಿಸಿ ಬರುವುದೆಂದು ನಿರ್ಧರವಾಯ್ತು.

ನಾಲ್ವರು ಹೊರಟು ಬೆಂಗಳೂರಿನ ಬಸ್ಸು ಏರಿದರು. ಹಾಸನದಲ್ಲಿ ಇಳಿದು ಸವಿತನ ಗಂಡನ ಮನೆ ನಲ್ಲಳ್ಳಿಗೆ ಕಾರು ಮಾಡಿಕೊಂಡು ಹೋದರು. ಅಂದು ಭಾನುವಾರ ಆದ್ದರಿಂದ ಸಿದ್ರಾಮ ಮನೆಯಲ್ಲಿ ಇದ್ದ. ತಾಯಿ ಮಗಳು ಸೇರಿ ಕಾಪಿ ತಿಂಡಿಯ ಸಿದ್ಧತೆ ಮಾಡುತ್ತಿದ್ದರು. ಇವರನ್ನು ನೋಡಿ ಸಿದ್ರಾಮನ ಕಣ್ಣುಗಳ ಕೆಂಡ ದುಂಡೆಗಳು ಉರುಳಿದವು. ಗಂಡನ ನೋಟಕ್ಕೆ ಸವಿತನ ಕೈಕಾಲು ನರಗಟ್ಟಿ ನಡುಗುವುದ ಕಂಡು ವನಿತ ನಗುತ್ತ ಅಕ್ಕನ ಕೈ ಹಿಡಿದು ಇದೇನಕ್ಕ ಇಲಿ ಹುಲಿ ಕರಡಿ ಏನಾದರು ನೋಡಿದ ಹೇಗೆ ? ಈ ಕಾಲದಲ್ಲಿ ಹೆದರುವವರಿಗೆಬಾಳಿಲ್ಲ. ಹಣಕ್ಕಾಗಿ ಮದುವೆ ಆಗುವವರಿಗೆ ಹೃದಯದ ಬೆಲೆ ತಿಳಿಯಲಾರದು. ಗಂಡ ಮತ್ತು ಹೆಂಡತಿ ಪರಸ್ಪರ ತಮ್ಮ ಸ್ವಭಾವಗಳಿಂದ ಎಲ್ಲಿವರೆಗೆ ಅರಿತು ಕೊಳ್ಳುವುದಿಲ್ಲವೋ ಅಲ್ಲಿವರೆಗೆ ಸಂಸಾರದಲ್ಲಿ ಸಾಮರಸ್ಯ ಉಂಟಾಗಲಾರದು. ತನ್ನ ಸ್ವಾರ್ಥಕ್ಕಾಗಿ ಯಾರು ಇನ್ನೊಬ್ಬರ ಸುಖವನ್ನು ಸಂತೋಷವನ್ನು ಹಾಳು ಮಾಡುತ್ತಾರೊ ಅಂಥವರಿಗೆಂದೂ ಬೆಲೆಕೊಡಬಾರದು. ಅವರು ತಂದೆ ತಾಯಿಗಳೇ ಆಗಿರಲಿ ಗಂಡ ಮಕ್ಕಳೇ ಆಗಿರಲಿ. ತಿರಸ್ಕಾರದಿಂದ ಕಂಡು ಅವರಿಗೆ ಸರಿಯಾದ ಬುದ್ಧಿ ಕಲಿಸಬೇಕು. ಆಗಲೇ ಸಮಾಜದ ವ್ಯವಸ್ಥೆ ಸುಸಜ್ಜಿತವಾಗಲು ಸಾಧ್ಯ.

ಸಾಕು ನಿನ್ನ ಹರಿಕತೆ ಸ್ಕೂಟರಿಗೆ ಬೇಕಾದ ಹಣ ತಂದಿದ್ದರೆ ಸರಿ, ಇಲ್ಲದಿದ್ದರೆ ನಿನ್ನಕ್ಕನ ಆಸೆ ನೀವೆಲ್ಲ ಬಿಡಬೇಕು, ಹೌದೆ ? ಹಾಗೋ ಸಮಾಚಾರಾ ಯಾಕಕ್ಕ ಭಾವನ ಹಣದ ಹರಿಕತೆ ಮನೆಯರಿಗೆ ತಿಳಿಸಲಿಲ್ಲ. ನಿನ್ನ ದಮ್ಮಯ್ಯ ವನಿ ನೀ ಸುಮ್ಮನಿರು ಎನ್ನುತ ಒಳಗೆ ಹೋಗಿ ಕಾಲಿಗೆ ನೀರು ತಂದು ಕೊಟ್ಟು ಕೂತು ಕೊಳ್ಳಿ ಅಣ್ಣನವರೇ ಎಂದು ಸೋಪ ತೋರಿಸಿದಳು. ಇವರ್ಯಾರೇ ನಿನ್ನಣ್ಣಂದಿರು ಸವಿತ ತಂಗಿಯ ಮುಖ ನೋಡಿದಳು. ಅಕ್ಕನ್ನ ಅಸಾಯ ಕತೆಯ ಅರಿವಿದ್ದ ವನಿತ ತಾನೆ ಭಾವನಿಗೆ ನಮ್ಮ ದೊಡ್ಡಮ್ಮನ ಮಕ್ಕಳೆಂದು ಪರಿಚಯಿಸಿದಳು ಅಷ್ಟರಲ್ಲಿ ಅತ್ತೆ ಹೊರಗೆ ಬಂದು ಒಂದೇನೆ ಬಿನ್ನಾಣಗಾತಿ ಹಣ ತಂದ್ಯಾ ಇಲ್ಲ ಬರಿಕೈ ಬಸವಿಯೋ ? ಸಿದ್ದು ಒಂದು ಸ್ಕೂಟರ್ನಿ ನೋಡಿ ಪ್ಲಾನು ಮಾಡಿ ನಿನ್ನ ದಾರಿ ಕಾಯ್ತು ಇದ್ದ. ಸವಿತ ತಂಗಿ ಮುಖ ನೋಡಿದ್ಲು.

ಅವಳು ಕಣ್ಣಿನಲ್ಲೆ ಧೈರ್ಯ ತುಂಬಿ ಮಾತಾಡು ಎಂದು ಸಂಜ್ಞೆ ಮಾಡಿದಳು. ನೀವು ಮದುವೆಗೆ ಮೊದಲು ಕೇಳಿದ್ದ ಹದಿನೈದು ಸಾವಿರ ರೂ. ಅದನ್ನು ತಂದೆ ಒಪ್ಪಿ ಕೊಟ್ಟಿದಾರೆ ಸ್ಕೂಟರ್ ಹಣವನ್ನು ಆಗಲೇ ಕೇಳಬೇಕಿತ್ತು. ಸಾಧ್ಯವಿದ್ದರೆ ಕೊಡುತ್ತಿದ್ದರು. ಇಲ್ಲದಿದ್ದರೆ "ನಿಮ್ಮಂಥ ಧನ ಪಿಶಾಚಿಗಳಿಗೆ" ಹೆಣ್ಣನ್ನೆ ಧಾರೆಯರೆಯುತ್ತಿರಲಿಲ್ಲ ನೀವು ವರುಷ ವರುಷ ಹಣದ ಬೇಡಿಕೆ ಇಡುತ್ತಿದ್ದರೆ ಹೆತ್ತವರು ಹೆಣ್ಣು ಹೆತ್ತ ತಪ್ಪಿಗೆ ಬಿಕ್ಷಾಟನೆಗೆ ಹೊರಡಬೇಕಷ್ಟೆ ಹೊಗಕ್ಕ ನೀನು ಹೀಗೆ ಭಾವನಲ್ಲಿ ಸರಸ ಸಲ್ಲಾಪಕೆ ನಿಂತ್ರೆ ನಮ್ಮ ಬಾಯಿಗೆ ನೀರಿಲ್ಲ. ನಡಿ ಏನಾದ್ರು ಕಾಪಿ ತಿಂಡಿ ವ್ಯವಸ್ಥೆ ಮಾಡುವಾಡೆನ್ನುತ ಒಳಗೆ ಹೋದರು. ತಾಯಿ, ಮಗ ಮುಖ ಮುಖ ನೋಡಿಯೇ ಬಾಕಿ ವನಿತನ ನ್ಯಾಯ ನಿಷ್ಟೂರ ನುಡಿಗೆ ಮೊದಲಿಂದಲೂ ಅಂಜುತಿದ್ದವರಿಗೆ ಮಾತಡಲು ಸ್ವಲ್ಪ ಬಯವೇ ಆಯ್ತು. ಅಂಥಹದರಲ್ಲಿ ಈಗ ಸವಿತನ ಧೈರ್ಯದ ಮಾತು ಕೇಳಿ ಮೂಕರಾದ್ರು. ನಾದಿನಿ ರತ್ನ ಅತ್ತಿಗೆಯರನ್ನು ನೋಡಿ ಗೊಣಗುತ್ತ ಅಡಿಗೆ ಮನೆಯಿಂದ ಹೊರಗೆ ಬಂದಳು.

ತಾಯಿ ಮಕ್ಕಳು ಸೇರಿ ಏನೋ ಮಸಾಲತ್ತು ನಡೆಸುವುದು ಕಂಡು ಪೋಲಿಸರಿಗೆ ಕಸಿವಿಸಿಯಾಯ್ತು. ಅವರ ಕೆಲವು ಸಾಕ್ಷಿಗೆ ಬೇಕಾದ ಸಮಾನು ಬ್ಯಾಗಿನಿಂದ ಹೊರಗೆ ಬಂದು ಮರೆಯಲ್ಲಿ ಜೋಡಣೆಗೊಂಡವು. ಒಂದು ಟೇಪ್ ರೆಕಾರ್ಡನ್ನು ಉಪಾಯದಲ್ಲಿ ಸವಿತ ಮಲಗುವ ಕೋಣೆಯ ಮಂಚದಡಿ ಇಡಲಾಯ್ತು. ರಾತ್ರಿ ಊಟ ಮಾಡುವಾಗಲೆ ತಾಯಿ ಮಕ್ಕಳ ನಂಜಿನ ನುಡಿಗಳು ಸುರುವಾಯ್ತು. ಅವರುಗಳ ಮಾತಿನ ಬಾಣಕ್ಕೆ ಸರಿಯಾದ ಬಾಣವನ್ನು ವನಿತ ಗುರಿ ನೋಡಿ ಬಿಡುತ್ತಿದ್ದಳು.

ಮರುದಿನ ಆಫೀಸಿಗೆ ಹೊರಟ ಸಿದ್ರಾಮು ಎಲ್ಲಿ ಹಣ ಕೊಡು ಎಂದು ಜಬ್ಬರದಸ್ತಿಗೆ ಹೊರಟಾಗ ಹೊರಗಡೆ ಇದ್ದ ಪೋಲಿಸರು ಮೆಲ್ಲನೆ ರೂಮಿಗೆ ಬಂದು ಉಡುಪು ತೊಟ್ಟು ಕೊಂಡರು ಸವಿತ ಸಿಡುಕಿನಲ್ಲಿ ನೀವು ಗಳಿಸಿಟ್ಟ ಹಣ ನನ್ನಪ್ಪನ ಮನೆಯಲ್ಲೆ ಇಲ್ಲ. ನಿಮ್ಮ ಸೌಕರ್ಯಕ್ಕೆ ನಾನೇಕೆ ಅಲ್ಲಿಂದ ತರಲಿ ಬೇಕಾದರೆ ನಿಮ್ಮ ಮನೆ ಮಠ ಮಾರಿ ಸ್ಕೂಟರು ಸವಾರಿ ಮಾಡಿ ಎಂದಾಗ ಸಿದ್ರಾಮು ಸಿಟ್ಟಿನಲ್ಲೆ ಉರಿಯುತ್ತ ಏನು ಬೊಗಳಿದೆ ಕತ್ತೆರಂಡೆ ಎಂದು ಸವಿತನ ಜಡೆ ಹಿಡಿದೆಳೆದು ಮೂಗ್ಗು ಮುಖ ನೋಡದೆ ಬಾರ್ಸಿದ; ಒಳಗಿದ್ದ ಅತ್ತೆಯು ಓಡಿ ಬಂದು ಒಂದು ದೊಣ್ಣೆಯನ್ನು ಮಗನ ಕೈಗೆ ಕೊಡುತ್ತ ಬೋಸಡಿ ತೌರಿಗೆ ಹೋಗಿ ನಾಲಿಗೆ ಎಳೆಯಲು ಕಲ್ತು ಬಂದಾಳೆ. ಸರಿ ಬಿಡು ಹುಟ್ಟೆ ಇಲ್ಲ ಅನ್ನು ಎನ್ನುವ ತಾನು ಹೊಡೆಯಲು ಕೈಯೆತ್ತುವಾಗ ಒಳಗಿದ್ದ ಪೋಲಿಸ್ ಬಂದು ರಟ್ಟೆಯಲ್ಲಿ ಹಿಡಿದು ಏನೋ ಮೂಳಿ ಯಾರಿಗೆ ಹೊಡೆಯುತ್ತಿ.? ನಿನ್ನ ಲಾಕಪ್ಪಿಗೆ ಹಾಕಿ ದನಗಾಯ ಬಡಿದರೆ ಇನ್ನೊಬ್ಬರ ನೋವು ಅರ್ಥ ವಾಗುತ್ತದಲ್ಲ ಎಂದು ಗದರುವಾಗ ತಾಯಿ ಮಗ ಕಕ್ಕಾ ಬಿಕ್ಕಿ ವನಿತನ ಜೊತೆ ಕೆರೆಗೆ ಬಟ್ಟೆ ತೊಳೆಯಲು ಹುಡುಗರು ಹೋದದ್ದ ನೋಡಿಯೇ ಬಂದಂದಿನಿಂದಲೂ ತಡೆ ಹಿಡಿದ ಸಿಟ್ಟನ್ನು ಕಾರಲು ಹೊರಟದ್ದು ಅಂಥದ್ರಲ್ಲಿ ಈ ಪೋಲಿಸ್ ಎಲ್ಲಿಂದ ಬಂದರು. ಅಷ್ಟರಲ್ಲಿ ಬಟ್ಟೆ ತೊಳೆದು ವನಿತಳು ಬಂದಳು. ಒಳಗಿನ ದೃಶ್ಯ ನೋಡಿ ಕಾಲವೇಗ ಕೂಡಿ ಬಂತೆಂದು ಹಿಗ್ಗುತ ಸವಿತಕ್ಕ ನಿನ್ನತ್ತೆ. ಗಂಡನ ವಿಚಾರವಿದು ಎಂದಳು.ಆಗ ಪೋಲಿಸರು ಮುಖ ನೋಡುತ್ತಾರೆ. ನಿನ್ನ ಜೊತೆಯಲ್ಲೆ ಬಂದ ಅಣ್ಣಂದಿರು ಸೂಳೆ ಮಗ್ನೆ ನಿನಗೆ ಸ್ಕೂಟರಿಗೆ ಬೇಕಲ್ಲ. ನಡಿ ಸ್ಟೇಷನ್ನಿಗೆ ಅಲ್ಲಿ ಬೇಕಾದಷ್ಟು ಸಿಕ್ಕುತ್ತಗೆ ಎಂದು ಮತ್ತೊಬ್ಬ ಪೋಲಿಸ್ ಸಿದ್ರಾಮುಗೆರಡುಬಿಗಿದ. ಏನು ಭಾವಜೀಯರೆ ಇಂದಿನ ವರದಕ್ಷಿಣೆಯ ಭೂತಕ್ಕೆ ಎಷ್ಟು ಬಡ ಹೆಣ್ಣು ಮಕ್ಕಳು ಬಲಿಯಾಗುತ್ತಿದ್ದಾರೆ ಗೊತ್ತೆ. ವರದಕ್ಷಿಣೆಗೆ ವಿರೋಧ ಚಳವಳಿ ಪ್ರಾರಂಭವಾಗಿದೆ. ವರದಕ್ಷಿಣೆ ತೆಗೆದುಕೊಳ್ಳುವರಿಗೆ ಶಿಕ್ಷೆಯನ್ನು ನಿಗದಿ ಪಡಿಸಿದ್ದಾರೆ. ಅಂತಹದರಲ್ಲಿ ನೀವು ವಿದ್ಯಾವಂತರಾಗಿ ಹೀಗೆ ಮಾಡುವುದು ಸರಿಯೇ ? ಇದಕ್ಕೆ ಸರಿಯಾದ ಶಿಕ್ಷೆ ನಿಮಗೆ ಸಿಕ್ಕಿದಾಗಲೆ ನನ್ನಾತ್ಮಕ್ಕೆ ಸಂತಸ ನನ್ನಕ್ಕ ಇಲ್ಲಿವರೆಗೆ ಎದ್ದು ಕಣ್ಣೀರ ಹರಿಸಿದಳೋ ಇನ್ನಾದರು ನೀವು ಅದರ ಫಲ ಅನುಭವಿಸಿ ಅಣ್ಣಂದರೆ ಇವರ ಮಾತುಗಳ ಟೇಪ್ ಮಾಡಿದ್ದೀರಲ್ಲ, ಇವರು ಅಕ್ಕನಿಗೆ ಹೊಡೆದ ಚಿತ್ರ ತೆಗೆದ್ದೀರಲ್ಲ. ಅದನ್ನೆಲ್ಲ ತೆಗೆದುಕೊಳ್ಳಿ ಸ್ಟೇಷನ್ನಿಗೆ ಹೋಗಿ ಇವರಿಗೆ ಸತ್ಕಾರ ಏರ್ಪಾಡಿ ಸುವ ಎನ್ನುವ ಜೋರಾಗಿ ನಗುವ ತಂಗಿಯ ಕೈ ಹಿಡಿದು ಬೇಡ ವನಿ ಇದೊಂದು ಸಾರಿ ಮಾಪ್ ಅವರ ಮರ್‍ಯಾದೆ

ಹೋಗುವುದೇನು? ನನ್ನಮರ್ಯಾದೆ ಹೋಗುವುದೇನು? ಯೋಚಿಸು ಅಕ್ಕನ ನುಡಿಗೆ ವನಿಗೆ ಸಿಟ್ಟು ನೆತ್ತಿಗೇರಿ ಆರ್ಭಟಿಸಿದಳು. ನಿನ್ನಂತವಳಿಗೊಂದು ಮರ್ಯಾದೆ ಅದೆಲ್ಲ ಹೋಗುವುದು ಹೀಗೆ, ಬಿಟ್ಟರೆ ನಿನ್ನ ಪ್ರಾಣ ಹೋಗುವುದು ತಿಳಿಯಿತೆ ? ನೀ ಸತ್ತರೆ ಇವರಿಗೆ ಇನ್ನೊಬ್ಬ ಹೆಣ್ಣು, ಹಣ, ಒಡವೆಯೊಂದಿಗೆ ಬರುತ್ತಾಳೆ. ಅವರೆ ನನಗೆ ಇನ್ನೊಬ್ಬ ಅಕ್ಕ ಸಿಕ್ಕಲು ಸಾಧ್ಯವೆ ? ಇಷ್ಟು ಹೇಳಿ ಕಣ್ಣೀರ ವರೆಸುತ್ತಾ ಏನು ನೋಡುತ್ತೀರಿ ಪೋಲಿಸ್‌ನವರೇ ? ಈ ಹಣ ಪಿಶಾಚಿಗಳಿಗೆ ಸರಿಯಾದ ಶಿಕ್ಷೆ ಕೊಡಲೇಬೇಕು. ಹೊರಡಿ ಎಂದಳು. ಪೋಲಿಸ್‌ನವರು ಟೇಪ್ ಹಾಕಿ ಅವರ ಮಾತೆಲ್ಲ ಅವರಿಗೆ ಕೇಳುವಂತೆ ಮಾಡಿದರು. ಆಗ ತಾಯಿ ಮಗ ಹೆದರಿ ವನಿತಳ ಕಾಲಿಗೆ ಬಿದ್ದು ಇದೊಂದ ಸಾರಿ ನಮ್ಮನ್ನು ಕ್ಷಮಿಸಿ ಕಾಪಾಡು. ಮುಂದೆಗೆ ಇಂಥ ತಪ್ಪು ಮಾಡುವುದಿಲ್ಲವೆಂದು ಬೇಡಲು ಸುರು ಮಾಡಿದರು. ನಿಮ್ಮನ್ನು ಹೇಗೆ ನಂಬುವುದು ಅದೆಲ್ಲ ಸಾಧ್ಯವಿಲ್ಲ.ನಿಮಗೆ ಸರಿಯಾದ ಶಾಸ್ತಿಯಾಗಲೇಬೇಕು ಎಂದು ಹಠ ಹಿಡಿದಾಗ ಸಿದ್ರಾಮಗೆ ಜೀವವೇ ಹೋದ ಹಾಗೆ ಆಯ್ತು. ಮಾನದ ಜೊತೆಗೆ ಉದ್ಯೋಗಕ್ಕೆ ಸರಕಾರ ನನಗೇಕಾದರೂ ಮಾಡಿಯಾರು ಧನದಾಹ ಸುರುವಾಯ್ತು. ಹೀಗೆಲ್ಲ ಹಗರಣವಾಗುತ್ತದೆಂದು ತಿಳಿದಿದ್ದರೆ ಸವಿತನ ತೌರಿಗೆ ಹಣ ತೆಗೆದುಕೊಂಡು ಬಾ ಎಂದು ಹೊಡೆದು ಬಡಿದು ಅಟ್ಟುತ್ತಿರಲಿಲ್ಲ. ಆದರೆ ಈಗೇನು ಮಾಡಲಿ? ಪಾಪ ಸವಿಗೆ ಅಷ್ಟು ಹಿಂಸೆ ಕೊಟ್ಟೆನು ಈಗ ನನ್ನ ಮರ್ಯಾದೆ ಉಳಿಸಲು ತಂಗಿಯಲ್ಲಿ ಬೇಡುತ್ತಿದ್ದಾಳೆ. ಹೆಣ್ಣಿನ ಗುಣ ತಾಳ್ಮೆ, ಸಹನೆ ಎಂಬುದ ತೋರಿಸಿ ಕೊಡುತ್ತಿದ್ದಾಳೆ. ಅಂಥಹ ನಿರ್ಮಲ ಮನದ ಸದ್ಗುಣದ ಸಂಗಾತಿಗೆ ನಾ ನೀಡಿದ ಕಷ್ಟವೆಷ್ಟು ? ಛೆ ಪಾಪ ಏನು ಅಳಿಯಂದಿರ ಯೋಚನೆ ಹೊರಡುತ್ತಿರೋ ಅಥವಾ ಹೊರಡಿಸಬೇಕೋ ಪೋಲಿಸ್ ಜೋರು ಮಾಡುವಾಗ ಸವಿತ ಇದೊಂದು ಸಾರಿ ಅವರನ್ನು ಬಿಡಿ ಎಂದು ಕೇಳುತ್ತಾ ಕೈ ಮುಗಿದಳು. ಸುಮ್ಮನೆ ಬಿಡುವುದಿಲ್ಲ. ಇನ್ನು ಮುಂದೆ ಇಂಥಹೇಯ ಕೆಲ್ಸ ಮಾಡುವುದಿಲ್ಲ. ಹಣ ತಾ ಎಂದು ಹೆಂಡತಿಯನ್ನು ತೌರಿಗೆ ಅಟ್ಟುವುದಿಲ್ಲ ಎಂದು ಬರೆದು ರುಜು ಮಾಡಿ ಕೊಟ್ಟರೆ ಬಿಡಬಹುದು ಅಲ್ಲದೆ ನಾಳೆ ಸವಿತರವರಿಗೇನಾದರೂ ಹಿಂಸೆ ಕೊಟ್ಟದ್ದು ತಿಳಿದರೆ ಸಾಕು ಜೈಲಿಗೆ ಹಾಕಿ ಜೀವಾವಧಿ ಶಿಕ್ಷೆಗೆ ಗುರಿ ಪಡಿಸುತ್ತೇವೆ. ಪೋಲಿಸರ ಎಲ್ಲ ಮಾತಿಗೂ ಒಪ್ಪಿ ಅವರು ಹೇಳಿದಂತೆ ಬರೆದು ತಾಯಿ, ಮಗ ಸಹಿ ಹಾಕಿ ಕೊಟ್ಟರು.

ಹಿಂಸೆಯ ಚಿತ್ರ, ಬೈಗುಳದ ಟೇಪ್ ಆಧಾರ ಪತ್ರ ಎಲ್ಲವನ್ನು ಎರಡು ಪ್ರತಿ ಮಾಡಿ ಸ್ಟೇಷನಿಲ್ಲೊಂದು ವನಿತಲ್ಲೊಂದು ಇರುವುದೆಂದಾಯ್ತು. ಕೊನೆಗೆ ಪೋಲಿಸರಿಗೆ ಗಮ್ಮತ್ತು ಮಾಡಿ ಕಳಿಸಿಕೊಟ್ಟರು. ವನಿತ ಸ್ವಲ್ಪ ಸಮಯ ಅಕ್ಕನ ಮನೆಯಲ್ಲಿ ನಿಂತು ಆ ಮನೆಯವರಿಗೆ ಮಾನವೀಯತೆಯ ಮೌಲ್ಯ ಅರಿವು ಮಾಡಿ ಕೊಟ್ಟು ಅಕ್ಕನ ಸುಖ ಸಂಸಾರವನ್ನು ನೋಡಿ ಆನಂದಿಸಿದಳು. ನೋಡಕ್ಕ ಪ್ರತಿಯೊಬ್ಬರಿಗೂ ಧೈರ್ಯ ಹಾಗೂ ಬುದ್ಧಿವಂತಿಕೆ ಮುಖ್ಯ. ಇದೆರಡಿದ್ದರೆ ಈ ಕಾಲದಲ್ಲಿ ತನ್ನತನವನ್ನುಳಿಸಿಕೊಂಡು ಬಾಳಲು ಸಾಧ್ಯ ಎಂದಳು. ಭಾವ, ಅತ್ತೆ ಮೂಗುದಾರ ಹಾಕಿದ ಪಶುಗಳಂತೆ ವರ್ತಿಸುವಂತಾದರು. ಅವರನ್ನು ಪ್ರೀತಿಯಿಂದ ಮಾತಾಡಿಸುತ್ತ ಅವರುಗಳ ಸಂಕೋಚವನ್ನು ಬದಿಗೊತ್ತಲು ಪ್ರಯತ್ನಿಸುತ್ತಿದ್ದಳು. ಪ್ರೀತಿ ವಿಶ್ವಾಸದಿಂದ ಎಲ್ಲರನ್ನು ಎಲ್ಲವನ್ನು ಗೆಲ್ಲಬಹುದೆಂಬ ಸತ್ಯ ಅವರುಗಳಿಗೂ ಅರಿವಾಗುತ್ತಿತ್ತು.

ಸವಿತಕ್ಕ ಪರವಾಗಿಲ್ಲ ಕಣೆ ಚೆನ್ನಾಗಿ ನಾಟಕವಾಡಿದೆ. ಕೊನೆಗೆ ನೀನು ಅವರ ಕಡೆಯಿಂದ ಮಾತಡಿದ್ದರಿಂದ ಭಾವ, ಅತ್ತೆ ನನ್ನನಿಂದು ಇಷ್ಟು ಉಪಚರಿಸಿ ಪ್ರೀತಿಸುತ್ತಿರುವುದು ಗೊತ್ತೆ ? ನನ್ನ ಮಾತನ್ನು ಅಕ್ಷರಸಃ ಪಾಲಿಸಿದ ನಿನಗೆ ವಂದನೆಗಳು.

ಅಯ್ಯೊ ವನಿ ನನಗೆ ನೀ ವಂದಿಸುವವುದಲ್ಲ. ನಿನಗೆ ನಾ ವಂದಿಸಬೇಕು. ನಿನ್ನ ಧೈರ್ಯ ಸಾಹಸವಿಲ್ಲದಿದ್ದರೆ ನಾನಿಂದು ಅಲ್ಲೆ ಕೊರಗುತ್ತ ಅಮ್ಮ ಅಪ್ಪನಿಗೆ ತಲೆ ಹೊರೆಯಾಗಿರುತ್ತಿದ್ದೆ. ನಿನ್ನಂತ ಹೆಣ್ಣು ಮಕ್ಕಳೇ ಎಲ್ಲರಿಗೂ ಹುಟ್ಟಿದರೆ ವರದಕ್ಷಿಣೆ ಪಿಡುಗಿನೊಂದಿಗೆ ಸಮಾಜ ಸುಧಾರಣೆ ಮಾಡಬಹುದೆಂದು ತಂಗಿಯನ್ನು ಪ್ರಶಂಸಿದಳು.

# ಗೌಡ ಸಮಾಜದ ಸಮಸ್ಯೆಗಳು ಹಾಗೂ ಅದರ ಪರಿಹಾರ

ಲೇಖಕರು ;

ಶ್ರೀ ಮುಂಡೆಕೋಲು ಗಂಗಾಧರ ಗೌಡ

---

[ಗೌಡ ಸಮಾಜ ಸಮಸ್ಯೆಗಳಿಗೆ ಲೇಖನ ಬರೆದು ಅಥವಾ ಸಲಹೆ ಕೊಟ್ಟರೆ ಸಮಸ್ಯೆ ಬಿಡಿಸಲು ಸಾಧ್ಯವಿಲ್ಲ. ಶ್ರೀ ಗಂಗಾಧರ ಗೌಡರು ಹೇಳಿದಂತೆ ನಮ್ಮ ಹಿರಿಯರು ಸಮಾಜದ ಮುಖಂಡರು, ವಿದ್ಯಾ ಸಂಘಗಳು ಮತ್ತು ಗೌಡ ಸಮಾಜಗಳು ಜೊತೆಸೇರಿ ಈ ಸಮಸ್ಯೆಗಳನ್ನು ಚರ್ಚಿಸಬೇಕು. ಅವುಗಳ ನಿವಾರಣೆಗೆ ತಕ್ಕ ಪರಿಹಾ ರ ವನ್ನು ಕಂಡು ಅವುಗಳನ್ನು ಪರಿಹರಿಸುವ ಸೂತ್ರವನ್ನು ಅನುಷ್ಠಾನಕ್ಕೆ ತರಬೇಕು. ಆರ್ಥಿಕ ಶೈಕ್ಷಣಿಕ ಮತ್ತು ಸಾಮಾಜಿಕ ಸಮಸ್ಯೆಗಳು ನೂರಾರಿವೆ. ಇದಕ್ಕೆ ಗಾಂಧೀಜಿ ಯವರಂತಹ ಮಹಾಪುರುಷರ ಹೋರಾಟ, ಸಂಘಟನೆ ಈ ಸಮಯದಲ್ಲಿ ಅವಶ್ಯ ಕವೆನಿಸಿದೆ. ಅಲ್ಲದೆ ಗೌಡರಲ್ಲಿ ಸಂಘಟನಾ ಶಕ್ತಿ ಕಡಿಮೆ, ವಿದ್ಯಾವಂತರು – ಅವಿದ್ಯಾ ವಂತರೆಂಬ, ನಾನು ಕಾಫಿ ತೋಟವನು ಅಡಿಕೆ ತೋಟದವನೆಂಬ ನಾನು ಕುಟ್ಟಿಮನೆಯ ವಂಶಸ್ಥನು ಅವನೊಬ್ಬ ಬಿಕಾರಿ ಎಂಬ ಭೇದಗಳನ್ನು ಹೋಗಲಾಡಿಸಿದರೆ ಶ್ರೀ ಗಂಗಾಧರ ಗೌಡರ ಸಲಹೆಗಳು ಕರಗತವಾಗುವುದಕ್ಕೆ ಸಾಧ್ಯ. ಇಲ್ಲದಿದ್ದರೆ ಬರೇ ಪುಸ್ತಕದ ಲೇಖನವಾಗಿ ಉಳಿಯುತ್ತದೆ.

ಸಂ.]

---

ನಮ್ಮ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜವನ್ನು ನಾವು ಅಮರ ಸುಳ್ಯದ ಗೌಡರೆಂದೇ ಕರೆಯಬಹುದು. ಏಕೆಂದರೆ ಕೊಡಗಿನಲ್ಲಿ ಈಗ ಇರುವ ನಮ್ಮ ಸಮಾಜದ ಪೂರ್ವಜರೆಲ್ಲರು ಹಿಂದೆ ಸುಳ್ಯವಲ ಯದಿಂದಲೇ ಕೊಡಗುರಾಜನ ಆದೇಶದಂತೆ, ಬಂಜರು ಬಿದ್ದಂತಹ ಸ್ಥಳಗಳನ್ನು ಕೃಷಿ ಮಾಡಲು ಸುಮಾರು 19ನೇ ಶತಮಾನದ ಆದಿಯಲ್ಲಿ ವಲಸೆ ಹೋದವರು. ದಕ್ಷಿಣ ಕನ್ನಡ ಜಿಲ್ಲೆಗೆ ನಮ್ಮ ಪೂರ್ವಜರು ಹಾಸನ ಹಾಗೂ ಚಿಕ್ಕಮಗಳೂರು ಜಿಲ್ಲೆಗಳಿಂದ ಸುಮಾರು ಎರಡು ಸಾವಿರ ವರ್ಷಗಳ ಹಿಂದೆಯೇ ಬಂದರು. ಈಗಿನ ಕರ್ನಾಟಕದ ಒಕ್ಕಲಿಗರೇ ಆಗಿದ್ದಾರೆ ಎಂಬು ದನ್ನು ನಾವೆಲ್ಲ ಇತ್ತೀಚೆಗೆ ತಿಳಿದುಕೊಂಡಿದ್ದೇವೆ. ನಮ್ಮವರು ಈಗ ತುಳು ಅರೆಗನ್ನಡ ಮತ್ತು ಕನ್ನಡ ಭಾಷೆಯನ್ನು ಮನೆ ಮಾತಾಗಿ ಬಳಸುತ್ತಾರೆ.

ನಮ್ಮ ಸಮಾಜದ ಸಮಸ್ಯೆಗಳು ಅನೇಕ, ಅವುಗ ಳಲ್ಲಿ ಮುಖ್ಯವಾದವುಗಳನ್ನು ಈ ಕೆಳಗೆ ಸೂಚಿಸಿ, ತಕ್ಕ ಪರಿಹಾರೋಪಾಯವನ್ನು ಕೂಡ ತಿಳಿಸಲಾಗಿದೆ.

1. ನಮ್ಮ ಸಮಾಜದ ಅನೇಕ ಭೂರಹಿತರು ಹಾಗೂ ಬಡಕುಟುಂಬಗಳ ಮಕ್ಕಳಲ್ಲಿ ಕೆಲವರು ಪ್ರತಿಭಾವಂತರಾಗಿದ್ದರೂ, ಹಣದ ಮುಗ್ಗಟ್ಟಿನಿಂದ ವಿದ್ಯೆಯಲ್ಲಿ ಹಿಂದುಳಿಯುತ್ತಿರುವುದು ಮತ್ತು ಅವರ ಸೇವೆ ಜನತೆಗೆ ಸಿಕ್ಕದಿರುವುದು ಕಂಡುಬರುತ್ತಿದೆ.

ಇಂತಹ ಕೆಲವು ವಿದ್ಯಾರ್ಥಿಗಳಿಗೆ ಪ್ರತಿವರ್ಷ ನಮ್ಮ ಸಮಾಜದ ಜಿಲ್ಲಾ ವಿದ್ಯಾ ಸಂಘದ ನಿಧಿಯಿಂದ ವಿದ್ಯಾರ್ಥಿವೇತನ ಕೊಟ್ಟು, ವಿದ್ಯೆಗೆ ಪ್ರೋತ್ಸಾಹ ಕೊಡುವುದು. ಇದರಿಂದ ನಮ್ಮ ಸಮಾಜದ ಗೌರವ ಕೀರ್ತಿಯು ಹೆಚ್ಚಬಹುದು.

2. ವರದಕ್ಷಿಣೆಯ ಪಿಡುಗಿನಲ್ಲಿ ಹೆಣ್ಣು ಮಕ್ಕಳು ಹೆಚ್ಚಾಗಿರುವ ಮಾತೃಪಿತೃಗಳು ತಮ್ಮ ಮಕ್ಕಳಿಗೆ ಸುಸಂಸ್ಕೃತ ಹುಡುಗನನ್ನು ಪಡೆಯದೆ, ಸಿಕ್ಕಿದವರಿಗೆ ಹೆಣ್ಣು ಕೊಡುವುದುಂಟು. ಇದರಿಂದ ಅನೇಕ ಉತ್ತಮ ತರುಣಿಯರು ದುಃಖವನ್ನು ಅನುಭವಿಸುತ್ತಿರುವುದು ಕುಡುಬರುತ್ತಿದೆ.

ಆದ್ದರಿಂದ ಪ್ರತಿಯೊಬ್ಬ ವಿಚಾರವಂತರು ವರದಕ್ಷಿಣೆ ಹಾಗೂ ಚಿನ್ನದ ವ್ಯಾಮೋಹವನ್ನು ಬಿಟ್ಟು ಬಂಧುಪ್ರೇಮದಿಂದ ವಿವಾಹವಾಗುವಂತೆ ಈಗಿನ ಯುವಕರಿಗೆ ತಿಳುವಳಿಕೆ ಕೊಡಬೇಕು. ಅಲ್ಲದೆ, ಅವರ ಹಿರಿಯರಿಗೆ ಸಮಾಜದ ಹಿತಚಿಂತನೆ ನೋಡಿಕೊಳ್ಳಲು ಹೇಳುವುದು. ಒಲುಮೆಯ ವೈವಾಹಿಕ ಜೀವನವೇ ಸುಖಮಯವೆಂದು ಭೋಧಿಸುವುದು ಅವಶ್ಯವಾಗಿದೆ.

3. ಚಿಕ್ಕ ಭೂಹಿಡುವಳಿದಾರರು ಸಾಕಷ್ಟು ಅಭಿವೃದ್ಧಿಯನ್ನು ಒಗ್ಗಟ್ಟಿನಿಂದ ಸಾಧಿಸದೆ ಅಣ್ಣತಮ್ಮಂದಿರು ಸ್ವಾರ್ಥದಿಂದ ಜಗಳವಾಡಿ ಚಿಕ್ಕವಿಚಾರಗಳಿಗೂ ಕೋರ್ಟು ಕಛೇರಿಗಳಿಗೆ ಹೋಗಿ ಎಲ್ಲರೂ ಬಡತನಕ್ಕೆ ಬಲಿಯಾಗುತ್ತಿದ್ದಾರೆ.

ಆದ್ದರಿಂದ ಚಿಕ್ಕಹಿಡುವಳಿ ವುಳ್ಳವರು ಕೃಷಿಕ ಓರ್ವ ಸಹೋದರನಿಗೆ ಭೂಮಿಯನ್ನು ವಹಿಸಿ ತಾವು ಹಣವನ್ನು ಹಿಸೆಯ ಬದಲು ಪಡೆದು ಇತರ ಉದ್ಯೋಗ ಅಥವಾ ವ್ಯಾಪಾರವನ್ನು ಕೈಗೊಂಡು ಜೀವನಸಾಗಿಸಲು ಪ್ರಯತ್ನಿಸುವುದು. ತಾವೇ ಸ್ವತಃ ಮನೆ ನಿವೇಶನಗಳನ್ನು ಖರೀದಿ ಮಾಡಿಕೊಳ್ಳುವುದು ವಿಹಿತ.

4. ಅವಿಭಕ್ತ ಕುಟುಂಬದವರು ಪರಸ್ಪರ ಸಹಾಯ ಮಾಡದೆ ಸ್ವಾರ್ಥದಿಂದ ವರ್ತಿಸುವುದು, ಕೆಲವರು ಕುಡುಕತನದಿಂದ ಕುಟುಂಬದ ಉತ್ಪತ್ತಿಯನ್ನು ಹಾಳುಮಾಡುವುದು ಕಂಡುಬರುತ್ತಿದೆ. ಇದರಿಂದ ಮನಸ್ಕ್ಲೇಷವು ಉಂಟಾಗುವ ಸಂದರ್ಭವಿದೆ.

ಆದ್ದರಿಂದ ತಾಯಿತಂದೆಯವರು ಮಕ್ಕಳಿಗೆ ಸಾಧ್ಯವಿದ್ದಷ್ಟು ವಿದ್ಯೆಯನ್ನು ಕೊಟ್ಟು ಆ ಬಳಿಕ ತಾವೇ ಮಕ್ಕಳ ಸ್ಥಿತಿಗನುಗುಣವಾಗಿ ಭೂಮಿ ಹಾಗೂ ಹಣವನ್ನು ಪಾಲು ಮಾಡಿ ತಮ್ಮ ಜೀವಂತಕಾಲದಲ್ಲೇ ಹಾಕಿಬಿಡುವುದು. ಸರ್ಕಾರಿ ಉದ್ಯೋಗದ ಉತ್ಪತ್ತಿ ಇರುವವನಲ್ಲಿ ಉದ್ಯೋಗ ಇಲ್ಲದವನು ಮತ್ಸರ ಪಡುವ ಸಂದರ್ಭವಿದೆ. ಆದ್ದರಿಂದ ಅಂತಹ ವ್ಯಕ್ತಿಗಳಿಗೆ ಹೆಚ್ಚು ಉತ್ಪತ್ತಿಯ ಭಾಗವನ್ನು ತಾಯಿತಂದೆಯರೇ ಕೊಟ್ಟು ಸಮಾಧಾನಪಡಿಸುವುದು ಉಚಿತ. ಆ ಬಳಿಕ ಅವರವರ ಏಳಿಗೆಯೂ ಅವರವರ ವಿಧಿಪ್ರಕಾರ ಆಗುತ್ತದೆ. ಅದಕ್ಕೆ ಪರಸ್ಪರ ಮತ್ಸರ ಮಾಡುವುದು ಸರಿಯಲ್ಲ. ಮತ್ಸರ ಪಡುವ ಬದಲು, ತಾವು ಕರ್ತವ್ಯನಿರತರಾಗುವುದೇ ಶ್ರೇಯಸ್ಸಿಗೆ ಸಾಧನ, ಪಿತ್ರಾರ್ಜಿತದಲ್ಲಿ ಹೆಚ್ಚು ಹೋರಾಟ ಮಾಡಬಾರದು.

5. ಕೆಲವು ಜನರು ದಿನಂಪ್ರತಿ ಅಮಲುಸೇವನೆ ಮಾಡುತ್ತಾರೆ. ಮಕ್ಕಳೆದುರು ಹೊಲಸು ಮಾತುಗಳನ್ನು ಆಡುವುದು. ಹೆಂಡತಿಯನ್ನು ಹೊಡೆಯುವುದು ಬೈಯುವುದು ಇತ್ಯಾದಿ ಕೆಲವು ಮನೆಗಳಲ್ಲಿ ಈಗಲೂ ನಡೆಯುತ್ತಿದೆ.

ಇಂತಹ ವ್ಯಕ್ತಿಗಳಿಗೆ ಸಮಾಜದ ಗಣ್ಯರು ಬುದ್ಧಿಯನ್ನು ಹೇಳಿ ಮಕ್ಕಳೆದುರು ಅವರು

ಆದರ್ಶರಾಗಿ ಇರುವಂತೆ ಮಾಡಬೇಕು. ಮಕ್ಕಳು ಹಿರಿಯರನ್ನು ಅನುಸರಿಸಿಯೇ ಒಳ್ಳೆಯ ನಾಗರಿಕ ರಾಗಿ ಬಾಳಲು ಸಾಧ್ಯವಿದೆ.

6. ನಮ್ಮ ಮಕ್ಕಳನ್ನು ಚಿಕ್ಕಂದಿನಲ್ಲಿಯೇ ಸಾತ್ವಿಕ ಆಹಾರವನ್ನು ಕೊಟ್ಟು ಪೋಷಿಸಿ, ಸಜ್ಜನರು ಹಾಗೂ ಯೋಗ್ಯ ವಿದ್ಯಾರ್ಥಿಗಳ ಸಹವಾಸದಲ್ಲಿ ರುವಂತೆ ಮಾಡಬೇಕು. ಕೆಲವು ರಕ್ಷಕರು ಮಕ್ಕಳ ವಿಚಾರದಲ್ಲಿ ಅಲಕ್ಷ್ಯದಿಂದಿರುತ್ತಾರೆ. ಅವರು ಹೇಗೆ ಜೀವನ ಸಾಗಿಸುತ್ತಾರೆ. ಹೇಗೆ ವಿದ್ಯೆ ಕಲಿ ಯುತ್ತಿದ್ದಾರೆ ಎಂಬುದನ್ನು ವಿಚಾರಿಸುವುದಿಲ್ಲ. ಇದರಿಂದ ಮಕ್ಕಳು ದುಶ್ಚಟಗಳಿಗೆ ಬಲಿಬಿದ್ದು ಪರೀಕ್ಷೆಯಲ್ಲಿ ಹಿಂದೇಟು ಹಾಕಿ ಕುಟುಂಬಕ್ಕೆ ತಲೆ ನೋವು ತಂದೊಡ್ಡುವರು. ರೋಗಗಳಿಗೂ ಬಲಿಬೀಳುವರು.

ಆದ್ದರಿಂದ ಹಿರಿಯರು ತಮ್ಮ ಮಕ್ಕಳಿಗೆ ಎಲ್ಲಾ ರೀತಿಯಲ್ಲಿ ಮಾರ್ಗದರ್ಶನ ನೀಡಬೇಕು. ಇದರಿಂದ ಮಕ್ಕಳು ಯೋಗ್ಯ ಪ್ರಜೆಗಳಾಗಿ ಸುಸಂ ಸ್ಕೃತರಾಗಿ ಬೆಳೆಯುತ್ತಾರೆ. ಅಲ್ಲದೆ ಸಮಾಜದ ಏಳ್ಗೆ ಹಾಗೂ ಕೀರ್ತಿಗೆ ಅವಕಾಶವಾಗುತ್ತದೆ. ಅವರಿಗೆ ಆಗ ಆರೋಗ್ಯದ ಬೆಲೆ, ಹಣದ ಬೆಲೆ ಸಮಯದ ಬೆಲೆ ಅರಿವುಂಟಾಗುತ್ತದೆ, ಶಾಂತಿಯ ಬದುಕು ಅವರದಾಗುತ್ತದೆ.

7. ಜನಸಂಖ್ಯೆಯು ಏರುತ್ತಿರುವ ಈ ಕಾಲದಲ್ಲಿ ನಮ್ಮ ಸಮಾಜದ ಕೆಲವು ಶ್ರೀಮಂತರು ಮಕ್ಕ ಳನ್ನು ಸುಖದಲ್ಲಿ ಬೆಳೆಯಿಸಿ ಅವರಲ್ಲಿ ಸೋಮಾರಿ ತನವನ್ನು ಉಂಟುಮಾಡುತ್ತಾರೆ. ಅವರು ಮುಂದೆ ತಮ್ಮ ಹಿರಿಯರ ಉದ್ಯಮಗಳಾದ ಕೃಷಿ ಅಥವಾ ವ್ಯಾಪಾರವನ್ನು ತಾವು ಸಾಧಿಸಲಾ ರದೆ ಎಲ್ಲದಕ್ಕೂ ಅಳುಗಳನ್ನು ಹಚ್ಚಿ ಸಾಲಗಾರ ರಾಗಿ ಹಣದ ಬೆಲೆಯರಿಯದೆ ಬಡತನಕ್ಕೆ ಇಳಿ ಯುವ ಸಂಭವವಿದೆ.

ಆದ್ದರಿಂದ ಮಕ್ಕಳಿಗೆ ಎಲ್ಲ ಮನೆ ಹಾಗೂ ಕೃಷಿ ಕೆಲಸವನ್ನು ಕಲಿಸಬೇಕು. ಮಿತವ್ಯಯ, ಸಮಯದ ಸದುಪಯೋಗ ಕೃಷಿ ಕೆಲಸಗಳನ್ನು ತಿಳಿಸುವುದಲ್ಲದೆ ಅವರನ್ನು ಕೆಲಸಗಳಿಗೆ ಹಚ್ಚಲೇ ಬೇಕು. ಇದರಿಂದ ಅವರು ಮುಂದೆ ತಮ್ಮ ಸಂಪ್ಪ ತ್ತನ್ನು ಸದಾ ಉಳಿಸಿಕೊಳ್ಳಲು ಸಮರ್ಥರಾಗು ವರು. ಅಲ್ಲದೆ ಪೇಟೆ ಪಟ್ಟಣಗಳ ಅತಿಮೋ ಹವು ಕಡಿಮೆಯಾಗಿ ಹಳ್ಳಿಯಲ್ಲಿಯೂ ಆದರ್ಶ ಕೃಷಿಕರಾಗಿಯೂ ಜೀವಿಸಲು ಸಾಧ್ಯವಿದೆ.

8. ಚಿಕ್ಕಮಕ್ಕಳು ಮಾಡುವ ತಪ್ಪುಗಳನ್ನು ಅಂದರೆ ಕಳ್ಳತನ ಇತ್ಯಾದಿಗಳನ್ನು ಮನೆಯ ವಾತಾವರಣ ದಲ್ಲೇ ತಿದ್ದದೆ ಅವರನ್ನು ಹಾಗೆಯೇ ಬಿಟ್ಟರೆ, ಅವರು ಪುಂಡರೂ, ಕಳ್ಳರು ಆಗುವ ಸಂದರ್ಭ ವಿದೆ. ಆದ್ದರಿಂದ ಬಡವರಾದರೂ ಸಹ, ಮಕ್ಕಳ ತಪ್ಪುಗಳನ್ನು ಶಿಕ್ಷಿಸಿ, ತಿದ್ದಿ, ಉದ್ಯೋಗ ಶೀಲ ರಾಗುವಂತೆ ಮಾಡಬೇಕು. ನಿರುದ್ಯೋಗಿಗಳಾಗಿ ಕಳ್ಳರು. ದರೋಡೆಕೋರರು ಆಗುವುದು ಸಹಜ. ಅದಕ್ಕೆ ಅವಕಾಶ ನೀಡದಂತೆ ಹಿರಿಯರು ಎಚ್ಚರ ವಹಿಸಲೇಬೇಕು.

ಆದ್ದರಿಂದ ಹಿರಿಯರು ಮಕ್ಕಳಿಗೆ ಜೀವನೋ ದ್ಯೋಗದಲ್ಲಿಯೋ ತರಬೇತಿ ನೀಡಬೇಕು. ಇದ ರಿಂದ ಮಕ್ಕಳು ಆದರ್ಶ ಕೃಷಿಕರಾಗಿ, ವ್ಯಾಪಾರ ಸ್ಥರಾಗಿ, ಕುಶಲಕರ್ಮಿಗಳಾಗಿ ದುಡಿದು ಶ್ರೀಮಂತರಾಗಲೂ ಸಾಧ್ಯವಿದೆ. ಸೌಖ್ಯದಿಂದ ಬಾಳಲು ಸಾಧ್ಯವಿದೆ. ಸರ್ಕಾರಿ ಉದ್ಯೋಗಕ್ಕೆ ಬಾಯಿಬಿಡಬೇಕಾಗಿಲ್ಲ.

9. ಮಕ್ಕಳು ಚಿಕ್ಕಂದಿನಲ್ಲಿ ಆಟಗಳನ್ನು ಆಡುತ್ತಾರೆ. ಜಗಳ ಆಡುತ್ತಾರೆ, ಅವರನ್ನು ಆಗ ಅಧ್ಯಾಪ ಕರು ಮತ್ತು ಹಿರಿಯರೂ ರಕ್ಷಿಸುತ್ತಾರೆ. ಆದರೆ ಪ್ರೌಢರಾದ ಮೇಲೆ ಮಾನವನು ತಾಳ್ಮೆಯಿಂದಲೇ ಜಗತ್ತನ್ನು ಗೆಲ್ಲಬೇಕಾಗಿದೆ. ಅನಾವಶ್ಯಕವಾಗಿ ಮಕ್ಕಳಂತೆ ಚಿಕ್ಕಪುಟ್ಟ ವಿಚಾರಗಳಿಗೆ ಜಗಳ ಮಾಡಬಾರದು. ಆದರೆ ನಮ್ಮ ಸಮಾಜದ ಕೆಲವು ವ್ಯಕ್ತಿಗಳು ನೆರೆಯ ಕುಟುಂಬಿಗರ ಭೂಮಿ ಯನ್ನು ಆಕ್ರಮಿಸಿ ಕೋರ್ಟು ಕಛೇರಿಗಳಿಗೆ

ಹೋಗುವುದು. ಮತ್ತು ಇತರರ ಚಾಡಿ ಮಾತುಗಳನ್ನು ಕೇಳಿ ಕ್ರಿಮಿನಲ್‌ಗಳಲ್ಲಿ ಭಾಗವಹಿಸಿ ಜೈಲಿಗೆ ಹೋಗುತ್ತಿರುವುದು ಕಂಡು ಬರುತ್ತಿದೆ. ಇದರಿಂದ ಹಲವು ನಷ್ಟಕಷ್ಟಗಳು ಪ್ರಾಪ್ತವಾಗುತ್ತದೆ.

ಆದ್ದರಿಂದ ಸಮಾಜದ ಗಣ್ಯ ವ್ಯಕ್ತಿಗಳು ಲಂಚಕ್ಕೆ ಒಳಗಾಗದೆ ಸಮದೃಷ್ಟಿಯಿಂದ ಸಮಾಜದ ಭೂಮಿಜಗಳ ಮತ್ತು ಇತರ ಜಗಳಗಳನ್ನು ಸರಿಪಡಿಸಲು ಸಾಧ್ಯವಿದೆ. ಇಬ್ಬರ ಕಷ್ಟವನ್ನು ಅಭಿಪ್ರಾಯವನ್ನು ತಿಳಿದುಕೊಂಡು ಅವರಿಗೆ ಅನುಕೂಲವಾಗುವಂತೆ ತೀರ್ಮಾನ ಕೊಡಲು ಸಾಧ್ಯವಿದೆ. ಇದರಿಂದ ಸುಖ ದೊರೆಯುತ್ತದೆ.

10. ನಮ್ಮ ಸಮಾದಜಲ್ಲಿ ಪರಸ್ಪರ ಸಹಾಯ ಭಾವನೆಯೂ ಕಡಿಮೆಯಾಗಿದೆ. ಸ್ವಾರ್ಥ ಹೆಚ್ಚಾಗಿದೆ. ಒಬ್ಬ ಬಡವನು ಕಾಯಿಲೆಯಲ್ಲಿ ಬಿದ್ದರೆ ಏನಾದರೂ ಕಷ್ಟದಲ್ಲಿದ್ದರೆ, ಅವನಿಗೆ ಸಮಾಜದವರು ದೇಣಿಗೆ ನೀಡಿ, ಆತನ ಕಷ್ಟವನ್ನು ನಿವಾರಿಸಲು ಸಾಧ್ಯವಿದೆ.

ಒಗ್ಗಟ್ಟಿಂದ ಒಬ್ಬನನ್ನು ಕಾಯಿಲೆಯಿಂದ ರಕ್ಷಿಸಬಹುದು. ಆತನ ಮುರಿದ ಮನೆಯನ್ನು ಕಟ್ಟಿಸಿ ಕೊಡಬಹುದು. ಅತನ ಮಕ್ಕಳ ವಿವಾಹವನ್ನು ನಡೆಸಿಕೊಡಬಹುದು, ಆದ್ದರಿಂದ ಸಮಾಜದ ಒಗ್ಗಟ್ಟು ಬಂಧು ಪ್ರೇಮವೂ ಇನ್ನು ಹೆಚ್ಚತಕ್ಕದ್ದು, ಅತಿ ಅಗತ್ಯವಾಗಿದೆ.

11. ಆಡಂಬರದ ವಿವಾಹವನ್ನು ನಡೆಯಿಸಿ ಹಲವರು ಸಾಲಕ್ಕೆ ಬಲಿಯಾಗುತ್ತಿದ್ದಾರೆ, ಆದ್ದರಿಂದ ಸಾಮೂಹಿಕ ವಿವಾಹಕ್ಕೆ ಪ್ರೋತ್ಸಾಹ ಕೊಡುವುದು ಉಚಿತ. ಇದರಿಂದ ಹಲವು ಮನೆಯವರು ಒಂದೇ ಊಟವನ್ನು ಕೊಟ್ಟು ಅದರ ಖರ್ಚನ್ನು ತಾವು ಹಂಚಿಕೊಳ್ಳಬಹುದು. ಇದರಿಂದ ಎಲ್ಲರಿಗೂ ಹಣದ ಉಳಿತಾಯ. ಸಮಯದ ಉಳಿತಾಯ. ವಿವಾಹ ವೆಸಗುವವರಿಗೂ ಮತ್ತು ಅಲ್ಲಿಗೆ ಬರುವ ಬಂಧುಭಾಂಧವರಿಗೂ ಕೂಡ ಆಗುತ್ತದೆ. ಹತ್ತು ಮದುವೆಗಳನ್ನು ಒಂದೇದಿನ ಒಂದೇ ಕಡೆ ನಡೆಯಿಸಿದರೆ ಬರುವ ವ್ಯಕ್ತಿಗಳಿಗೂ ಹತ್ತು ದಿನ ಪ್ರಯಾಣಿಸುವ ತ್ರಾಸ ಕಡಿಮೆಯಾಗುತ್ತದೆ.

ಇನ್ನೂ ಅನೇಕ ಸಮಸ್ಯೆಗಳಿವೆ. ಎಲ್ಲರೂ ತಾವೇ ಯೋಗ್ಯ ಗ್ರಂಥಗಳನ್ನು ಓದಿ ವಿದ್ಯಾವಂತರಾಗಿ ಸಮಾಜ ಪ್ರೇಮಿಗಳಾದರೆ ಮಾತ್ರ ಸಮಾಜದ ಏಳಿಗೆ ಆಗುವ ಸಾಧ್ಯತೆ ಇದೆ. ಅಗ ಸ್ವಲ್ಪ ಮಟ್ಟಿಗಾದರೂ ಎಲ್ಲರ ಬಾಳು ಸುಖಮಯವಾಗಬಹುದು. –

---

## ಚುಟುಕ

**ಪೆದ್ದ**

ಮಳೆ ಬಾಕೆ ಮೋಡಕ್ಕೆ ಕುತ್ತಿರೆನೆ ಸಾಕ್
ಹೀಂಗೇಳ್ಕೆ ಇಂದೀಗೆ ಎಸ್ಟ್‌ಜನ ಬೇಕು,
ಸಮುದ್ರದಾ ನೀರೆಲ್ಲ ಚೊಂಬೊಳಗೆ ತುಂಬಿ
ತಾಕಾದಂತೇಳ್ರಿ ಅಂವ, ಹೂಂ, ತೇಳ್ದಿನಂಬಿ ॥

# ಗೌಡ ಸಮಾಜ - ಕೊಡಗು ಮಡಿಕೇರಿ
# ಗೌಡ ಸಮಾಜ ಕಲ್ಯಾಣ ಮಂಟಪದ ಪಕ್ಷಿನೋಟ.

---

ಕೊಡಗಿನ ಮುಖ್ಯಪಟ್ಟಣವಾದ ಮಡಿಕೇರಿಯಲ್ಲಿನ ನೂತನವಾಗಿ ಕಟ್ಟಿಸಿರುವ ಗೌಡ ಸಮಾಜ ಕಲ್ಯಾಣ ಮಂಟಪದ ಕಟ್ಟಡವು ಕಲ್ಯಾಣಮಂಟಪ ಕಟ್ಟಡ ಸಮಿತಿಯವರ ಹೆಮ್ಮೆಯ ಸಾಧನೆ, ದಾನಿಗಳ ಸೇವೆಯಪ್ರತೀಕ ಮತ್ತು ಗೌಡ ಜನಾಂಗದವರ ಕನಸಿನ ನೆನಸಾಗಿ ಎದ್ದುನಿಂತಿದೆ. ಕೊಡಗಿನ "ವೈಟ್ ಹೌಸ್" ಎಂದು ಕರೆಯಲ್ಪಡುತ್ತಿದೆ.

ಕೊಡಗಿನ ಮುಖ್ಯ ಪಟ್ಟಣದಲ್ಲಿ ಜನರ ಅನುಕೂಲತೆಗಾಗಿ ಒಂದು ಕಲ್ಯಾಣ ಮಂಟಪದ ಅವಶ್ಯಕತೆಯನ್ನು ಮನಗೊಂಡು ಮಡಿಕೇರಿಯಲ್ಲಿ ಒಂದು ಕಲ್ಯಾಣ ಮಂಟಪವನ್ನು ನಿರ್ಮಿಸುವುದೆಂತ ತೀರ್ಮಾನಿಸಿ ಕಲ್ಯಾಣ ಮಂಟಪದ ಕಟ್ಟಡದ ಪೂರ್ಣ ಜವಾಬ್ದಾರಿಯನ್ನು ಈ ಕೆಳಕಂಡ "ಕಲ್ಯಾಣ ಮಂಟಪ ಕಟ್ಟಡ ಸಮಿತಿ"ಗೆ 1981ರಲ್ಲಿ ವಹಿಸಿಕೊಡಲಾಯ್ತು.

| | | |
|---|---|---|
| 1 | ತೋಟಂಬೈಲು – ಯಂ. ನಾಣಯ್ಯನವರು | ಅಧ್ಯಕ್ಷರು |
| 2 | ಮುಕಾಟಿರ – ಸಿ. ವಾಸುದೇವನವರು | ಕಾರ್ಯದರ್ಶಿ |
| 3 | ದಂಬೆಕೋಡಿ – ಬಿ. ಸುಬ್ಬಾಯನವರು | ಖಜಾಂಚಿ |
| 4 | ಕುದುಪಜೆ – ಬಿ. ಕೃಷ್ಣಪ್ಪನವರು<br>ಅಧ್ಯಕ್ಷರು, ಕೊಡಗು ಗೌಡ ವಿದ್ಯಾ ಸಂಘ | ನಿರ್ದೇಶಕರು |
| 5 | ಪೇರಿಯನ – ಯಂ. ಪೂವಯ್ಯನವರು | ,, |
| 6 | ಪಾಂಡನ – ಡಿ. ಸುಬ್ಬಯ್ಯನವರು | ,, |
| 7 | ಕುರುಂಜಿ – ಯಂ. ವೆಂಕಟ್ರಮಣ ಗೌಡರು | ,, |
| 8 | ಪೈಕೇರ – ಸಿ. ಅಪ್ಪಯ್ಯನವರು | ,, |
| 9 | ಕೋರನ – ಯಂ. ಪೂಣಚ್ಚನವರು | ,, |

ಕಟ್ಟಡ ಸಮಿತಿಯವರು ಕಲ್ಯಾಣ ಮಂಟಪ ಕಟ್ಟುವರೆ 30 ಸೆಂಟ್ಸ್ ಜಾಗವನ್ನು ಕೊಡಗು ಗೌಡ ವಿದ್ಯಾ ಸಂಘದಿಂದ ಪಡಕೊಂಡು ಕಟ್ಟಡ ಕಟ್ಟಲು ಅನುಮತಿಗಾಗಿ ನಗರ ಪ್ರಾಧಿಕಾರಕ್ಕೂ ಪುರಸಭೆಗೂ ಅರ್ಜಿ ಬರಕೊಳ್ಳಲಾಯ್ತು. 1983ರಲ್ಲಿ ಅನುಮತಿ ದೊರೆತನಂತರ ಕಲ್ಯಾಣ ಮಂಟಪ ನಿರ್ಮಾಣ ಕೆಲಸವನ್ನು ಪ್ರಾರಂಭಿಸಲಾಯ್ತು.

ಕಲ್ಯಾಣ ಮಂಟಪ ಕಟ್ಟುವರೆ ಒಂದು ಅಂತಸ್ತಿನ ಕಟ್ಟಡ ಕಟ್ಟಿಸುವುದೆಂತ ತೀರ್ಮಾನಿಸಿ ನಕ್ಷೆಯನ್ನು ತಯಾರಿಸಿ ಅಂದಾಜು 6 ಲಕ್ಷ ರೂಪಾಯಿಗಳಾಗ ಬಹುದೆಂದು ಅಭಿಪ್ರಾಯಪಟ್ಟರೂ ಊಟದ ಭವನಕ್ಕೆ ಬೇರೆ ವ್ಯವಸ್ಥೆಯು ಅಗತ್ಯ ಕಂಡು ಬಂದುದರಿಂದ ಸ್ಥಳದ ಅಭಾವದಿಂದರೂ ಧಾನಿಗಳ ಪ್ರೋತ್ಸಾಹದಿಂದಲೂ ಈ ಎರಡು ಅಂತಸ್ತಿನ. ಭವ್ಯವಾದ ಮನೋಹರವಾದ ಕಟ್ಟಡವನ್ನು ಕಟ್ಟಿಸಲಾಯ್ತು.

ಗೌಡ ಸಮಾಜ ಕಲ್ಯಾಣ ಮಂಟಪ ಕಟ್ಟಡ ಸಮಿತಿಯವರು ಧನ ಸಂಗ್ರಹಣೆ ಕಾರ್ಯವನ್ನು ವಹಿಸಿ ಕೊಂಡು 1983ರಿಂದ ವಸೂಲಾತಿಯ ಕೆಲಸವನ್ನು ಮುಂದುವರಿಸಿಕೊಂಡುಬಂದು ಈಗ್ಗೆ 15 ಲಕ್ಷ ರೂಪಾಯಿಗಳು ವಸೂಲಾಗಿ ಸದ್ರಿ ಹಣವು ಕಟ್ಟಡಕ್ಕಾಗಿ ವಿನಿಯೋಗಿಸಲ್ಪಟ್ಟಿದೆ.

ನಮ್ಮ ಜನಾಂಗದವರ ಮುಖ್ಯ ಕೃಷಿಯಾದ ಏಲಕ್ಕಿ ಬೆಳೆಯು ತುಂಬಾ ದುಸ್ಥಿತಿಗೆ ಬಂದಕಾರಣ ಮತ್ತು ಬೆಳೆಯು ಏರು ಪೇರಾದ ಕಾರಣ ಕಟ್ಟಡವನ್ನು ಕಟ್ಟಲು 4 ವರ್ಷಗಳಕಾಲ ಹಿಡಿಯಿತು.

ಕಟ್ಟಡ ಸಮಿತಿಯವರು ದಾನಿಗಳ ಮನೆಗೆ ಹೋದಾಗ ತುಂಬು ಹೃದಯದಿಂದ ಸ್ವಾಗತಿಸಿ, ಅತಿಥಿ ಸತ್ಕಾರಗಳಿಂದೊಡಗೂಡಿ ಪ್ರೋತ್ಸಾಹವನ್ನಿತ್ತು ಸಹಕರಿಸಿದ ದಾನಿಗಳು ಅಭಿನಂದನಾರ್ಹರು,

ಮಡಿಕೇರಿಯ ಗೌಡ ಸಮಾಜ ಕಲ್ಯಾಣ ಮಂಟಪಕ್ಕೆ ಈ ಕೆಳಗಿನ ದಾನಿಗಳು ರೂಪಾಯಿ ಹತ್ತು ಸಾವಿರ ದಿಂದ ಹೆಚ್ಚು ಕೊಟ್ಟು ಸಹಕರಿಸಿದವರು. ಶ್ರೀಯುತರಾದ

| | | |
|---|---|---|
| 1 | ಕುರುಂಜಿ ವೆಂಕಟ್ರಮಣ ಗೌಡರು ಸುಳ್ಯ | 1,11,120-00 |
| 2 | ತೋಟಂಬೈಲು ಮಾದಪ್ಪ ಬೆಳ್ಳಪ್ಪ ಸಹೋದರರು ಸಿದ್ದಾಪುರ | 1,10,000-00 |
| 3 | ತೋಟಂಬೈಲು ಕೆ. ಚಂಗಪ್ಪನವರು | 55,555-00 |
| 4 | ಪೈಕೇರ. ಸಿ. ಪೊನ್ನಪ್ಪನವರು, ಕೆನಡ | 50,000-00 |
| 5 | ಪೈಕೇರ ಸಿ. ಅಪ್ಪಯ್ಯನವರು ಪಾಲಿಬೆಟ್ಟ | 40,000-00 |
| 6 | ಪೇರಿಯನ. ಯಂ. ಪೂವಯ್ಯನವರು ಚೆಟ್ಟಳ್ಳಿ | 30,000-00 |
| 7 | ದಂಬೆಕೋಡಿ ಬಿ. ಸುಬ್ಬರಾಯನವರು, ಚೆಟ್ಟಳ್ಳಿ | 30,000-00 |
| 8 | ದಂಬೆ ಕೋಡಿ ಎ. ಚಿಣ್ಣಪ್ಪನವರು, ಮಡಿಕೇರಿ | 30,000-00 |
| 9 | ಯನ್. ಯಸ್. ದೇವಿಪ್ರಸಾದರು. ಸಂಪಾಜೆ | 25,000-00 |
| 10 | ಬಿ. ಎಲ್. ರಾಮದಾಸರು, ಮೂಡಿಗೆರೆ | 25,000-00 |
| 11 | ಮಂದ್ರಿರ ದೇವಯ್ಯನಾಣಯ್ಯ, ಕಗ್ಗೋಡು | 25,000-00 |
| 12 | ಕೊಡಗು ಗೌಡ ವಿದ್ಯಾ ಸಂಘ, ಮಡಿಕೇರಿ | 15,000-00 |
| | ($1^1/_4$ ಲಕ್ಷ ರೂ ಸಾಲವಾಗಿ ಸಹಾಯ ಮಾಡಿರುವರು) | |
| 13 | ಮೂಡಗದ್ದೆ ಆರ್. ತಮ್ಮಯ್ಯ ಮಕ್ಕಳು | 15,000-00 |
| 14 | ಕೋರನ ಯಂ. ಪೂಣಚ್ಚನವರು | 12,000-00 |
| 15 | ಕುರುಂಜಿ ಯಂ. ಗೋಪಾಲಕೃಷ್ಣನವರು | 10,055-00 |

| | | |
|---|---|---|
| 16 | ದಿ.ಚೆರಿಯಮನೆ ಕೆ. ಪೊನ್ನಪ್ಪನವರು | 10,000–00 |
| 17 | ಭಾರತೀ ಕಾಫಿ ಕ್ಯೂರಿಂಗ್ ವರ್ಕ್ಸ್, ಹಾಸನ | 10,000–00 |
| 18 | ಕರ್ಣಯ್ಯನ. ಎ. ಪುಷ್ಪವೇಣಿ ಮಕ್ಕಳು | 10,000–0 |

ಈ ಮೇಲೆ ಹೇಳಿದ ದಾನಿಗಳಲ್ಲದೆ ರೂ. ಐದು ಸಾವಿರಕ್ಕಿಂತ ಹೆಚ್ಚು ಸುಮಾರು 90 ಜನರು, ರೂ. 1000-00 ಕ್ಕಿಂತ ಹೆಚ್ಚು ಸುಮಾರು 300 ಜನರು ರೂ. 500-00 ಕ್ಕಿಂತ ಹೆಚ್ಚು ಸುಮಾರು 50 ಜನರು, ರೂ. 500-00ರ ವರೆಗೆ ಸುಮಾರು 50 ಜನರು ಅಂತೂ ಒಟ್ಟು ಸುಮಾರು 500 ಜನ ದಾನಿಗಳು ಮಾತ್ರ ಈ ತನಕ 15 ಲಕ್ಷ ರೂಪಾಯಿ ಕೊಟ್ಟು ಸಹಕರಿಸಿರುವರು. ಅಲ್ಲದೆ ರೂಪಾಯಿ ಒಂದು ಸಾವಿರಕ್ಕಿಂತ ಹೆಚ್ಚಿಗೆ ಕೊಟ್ಟವರ ಹೆಸರನ್ನು ಶಿಲೆಯಲ್ಲಿಯೂ ಮತ್ತು ರೂಪಾಯಿ 5,000-00 ಕ್ಕಿಂತ ಹೆಚ್ಚು ಕೊಟ್ಟವರ ಭಾವಚಿತ್ರವನ್ನು ಕಲ್ಯಾಣ ಮಂಟಪದಲ್ಲಿ ಅಳವಡಿಸಲಾಗಿದೆ.

ಮಡಿಕೇರಿ ಗೌಡ ಸಮಾಜದ ಉದ್ಘಾಟನೆಯನ್ನು ತಾರೀಕು 29-5-1987ನೇ ಶುಕ್ರವಾರ ಪೂರ್ವಾಹ್ನ 9–24 ಕ್ಕೆ ಆದಿಚುಂಚನಗಿರಿ ಮಠಾಧೀಶರಾದ ಶ್ರೀ ಶ್ರೀ ಶ್ರೀ ಬಾಲ ಗಂಗಾಧರನಾಥ ಸ್ವಾಮೀಜಿಯವರು, ಲೋಕೋಪಯೋಗಿ ಸಚಿವರಾದ ಶ್ರೀ ಹೆಚ್. ಡಿ. ದೇವೆಗೌಡರ ಅಧ್ಯಕ್ಷತೆಯಲ್ಲಿ ನೆರವೇರಿಸಿದರು. ಮುಖ್ಯ ಅತಿಥಿಗಳಾಗಿ, ಬಿ. ಎ. ಜಿವಿಜಯನವರು, ಎಂ. ಚಂದ್ರಶೇಖರನವರು, ಡಿ. ಎ. ಚಿಣ್ಣಪ್ಪನವರು, ಕುರುಂಜಿ ವೆಂಕಟ್ರಮಣ ಗೌಡರು ಮತ್ತು ತೋಟಂಬೈಲು ಬೆಳ್ಯಪ್ಪನವರು ಆಗಮಿಸಿ ಹರಸಿದರು.

ಕಲ್ಯಾಣ ಮಂಟಪ ಕಟ್ಟಡ ಸಮಿತಿಯ ಅವಿರತ ಪ್ರಯತ್ನದ ಸೇವೆಯ ಫಲವಾಗಿ ಈ ಕಟ್ಟಡವು ನಿರ್ಮಾಣಗೊಂಡು ಸಮಾಜದ ಬಾಂಧವರಿಗೆ ಅರ್ಪಿಸಲ್ಪಟ್ಟು ಈಗ ಸದ್ರಿ ಭವನದಲ್ಲಿ ಶುಭ ಕಾರ್ಯಗಳು ನಡೆಯುತ್ತಿರುವುದು ಪ್ರಶಂಸನೀಯ.

ಈ ಕಲ್ಯಾಣ ಮಂಟಪವು ಮುಂದೆ ಜನಾಭಿವೃದ್ಧಿ ಮತ್ತು ಜನೋಪಯೋಗಿ ಕಾರ್ಯಗಳನ್ನು ಮಾಡಿ ದೇಶದ ಅಭಿವೃದ್ಧಿಗೆ ಪೂರಕವಾಗಲೆಂದು ಆಶಿಸುತ್ತದೆ.

ಕುದುಪಜೆ. ಬಿ. ಕೃಷ್ಣಪ್ಪ,
M.A.,B.L.,
ಅಧ್ಯಕ್ಷರು
ಕೊಡಗು ಗೌಡ ವಿದ್ಯಾ ಸಂಘ
ಮಡಿಕೇರಿ.

# ಹಾರೈಕೆ

**ಕಾಂಚಾರ್ ಸಂಕಪ್ಪಗೌಡ**

ತಿರುಪತಿಯ ನೆಲೆವಾಸಿ ನಮೋ ಶ್ರೀನಿವಾಸ ।
ತರುಲತೆಯ ಮಲೆವಾಸಿ ಓಂ ಭುವನೇಶ ॥
ಕುಲದೈವ ಜಗಜೀವ ಜಗನಾಥ ದೇವಾ ।
ಬಾ ಬಂದು ಪರಿಹರಿಸು ಹರಿಜಗದ ನೋವಾ ।
ಎನ್ನ ಹಿರಿಯರ ಮುಡಿಪು ನಿನ್ನ ಅಡಿಗಿರಲಿ ।
ನಿನ್ನ ಅಭಯದ ಹಸ್ತ ಎನ್ನ ಮುಡಿಗಿರಲಿ ।
ಜನತೆಗಾರೋಗ್ಯಾ ಸೌಖ್ಯವನು ನೀಡು ॥
ಬರಡಾದ ನೆಲಕೆಲ್ಲಾ ಮಳೆ ಬರಲಿ ನೋಡು ।
ಮಳೆ ಇರಲಿ ಫಲ ಬರಲಿ ಬೆಳೆಯೆಲ್ಲೈ ನಾಡೂ ।
ಆಲ ಫಲವು ನನಗಿರಲಿ ಜಗಕಭಯ ನೀಡೂ ।
ಸತ್ಯ ಫಥದಲಿ ದುಡಿಸು ಸರ್ವವನು ದೇವಾ ।
ದುಡಿಮೆಯಲಿ ಕೆಡಲಾರ ದೆಂದೇಗೀ ಜೀವಾ ॥

ಪೂ. ಸು. ತ.

# ಬಯಕೆ

ನಾನು ಹುಟ್ಟಿದ ನೆಲದೋಳ್
ನಿಟ್ಟುಸಿರು ಬಿಟ್ಟು ಕೊಂಡಿರುವೆ
ಹಗುರವಾಗಿ
ಅಲ್ಲಿರ್ಪ ಗಿಡಮೂಲಿಕೆಗಳ ತಾಂಕಿ
ಮೆಲು ಮೆಲನೆನ್ನೆಡೆಗೆ ಪಸರೆಸುತಿಹ
ಅಪವನದೆಲೆಗಳನು
ಎನಗರಿಯು ದಾ ತೆರದಿ ಎನ್ನೆದೆಯು
ನಿತ್ಯವೂ ಸೇವಿಸುತಿರಲಿ
ಎನ್ನಿಷ್ಟಕಲ್ಲಿರಲು ಎನಗೆ ಬಿಡುಗಡೆ ಇರಲಿ ॥

ಪೂ. ಸು. ತ.

# ನಿವೇದನೆ

ಕ್ಷಮಿಸೆನ್ನ ತಾಯೆ ಕ್ಷಮಿಸು ।
ಸರಿದಾರಿಯಲ್ಲೆ ನಡೆಸು ।
ಜಗಡಾಗು ಹೋಗಿನಲ್ಲಿ । ಜನರೊತ್ತಡಕೆ ಇಲ್ಲಿ ।
ನಾನಿನ್ನನುಳಿಸದಾದೆ । ಪರ ಬಲಕ್ಕೆ ಬಾಗಿ ಹೋದೆ ।
ನಾಗೈದ ತಪದ ಬಲವು । ನೀ ಹ್ಯೊದ ಸುಯಿದ ಒಲವು ।
ಅರೆಕ್ಷಣದಿ ಅರಿಹೋಯ್ತು । ಹಾ ತಾಯೆ ಕ್ಷಮಿಸು ಕ್ಷಮಿಸು ॥

ಹಣದೆದುರು ಮಣಿಯಲಿಲ್ಲ । ಗುಣದೆದುರು ಗೊಣಗಲಿಲ್ಲ ।
ಜನರರಿತುಕೊಂಬರೆಣಿಸಿ । ದಿಟದೊಡನೆ ಸೆಣಸು ಉಣಿಸಿ ।
ದಾಕ್ಷಿಣ್ಯದಡಿಗೆ ಬಲುಕಿ । ದಯೆ ಎದುರು ನಾನೆ ಅಲುಕಿ ।
ಎನ್ನಂತರಾತ್ಮಕೆದುರು । ನಡೆದೆನ್ನ ಕ್ಷಮಿಸು ಕ್ಷಮಿಸು ॥

ಜಗವೆಲ್ಲ ಹೀಗೆ ನೋಡಿ । ನೆನಗೊಬ್ಬಗೇಕಿ ಮೋಡಿ ।
ಇವರೆಲ್ಲರೊಡನೆ ಕೂಡಿ । ನಿಮ್ಮಾಟ ನಾಟ್ಯವಾಡಿ ।
ಎನುತ ಎನ್ನ ಎಳೆದ ಬಲಕೆ । ನಾ ಬಿದ್ದೆನೆಂದು ನೆಲಕೆ
ಅಂದಿಂದ ಇಂದು ತನಕ । ಬೆಂದೆದೆಯ ಬೇಗೆ ತಣಿಸು ।

ದಿನನಿತ್ಯ ಕರ್ತವ್ಯದಲ್ಲಿ । ನೀನ್ನೆನ್ನ ನಿಲಿಸು ಉಳಿಸು ।
ನಿನ್ನಿಚ್ಛೆಯಂತೆ ನಡೆಸು । ನೀ ನನ್ನಿಯನ್ನೆ ಗೆಲಿಸು ।
ಜಗದ ಎಲ್ಲ ಜೀವಿಗಳಿಗೆ । ನೀ ನೆಮ್ಮದಿಯನ್ನು ಗೆಲಿಸು ।
ಕ್ಷಮಿಸೆನ್ನ ತಾಯೇ ಕ್ಷಮಿಸು । ಸರಿದಾರಿಯಲ್ಲಿ ನಡೆಸು ॥

ಪೂ. ಸು. ತ.

# ನಗಬೇಡಿ ನಕ್ಕರೂ ಬಾಯಿ ಬಿಡಬೇಡಿ

ಲೇಖಕಿ —ಯಂ.ಸಿ. ರಮ್ಯ

[ಕುಮಾರಿ ರಮ್ಯ ನಗೆ ಹನಿಯನ್ನು ಬರೆದು ತನ್ನ ವಯಸ್ಸಿನ ಇತರೆ ಬಾಲಕ ಬಾಲಕಿಯರೂ ತನ್ನಂತೆ ಈರೀತಿ ಲೇಖನಗಳನ್ನು ಬರೆಯಲು ಪ್ರಯತ್ನಿಸಲೆಂದು ದಾರಿ ತೋರಿಸಿದ್ದಾಳೆ.

—ಸಂ]

ಹಿಂದೆ ಒಮ್ಮೆ ನಮ್ಮ ತಾತನವರನ್ನು ನಮ್ಮ ಅಜ್ಜಿ ಸ್ನಾನಮಾಡಿಸುತ್ತಿದ್ದರಂತೆ, ಪಕ್ಕದಲ್ಲೇ ಒಂದು ಹಂಡೆಯಲ್ಲಿ ಬಿಸಿ ನೀರು ಕುದಿಯುತ್ತಿತ್ತು. ಹತ್ತಿರದಲ್ಲೇ ಇನ್ನೊಂದು ಹಂಡೆಯಲ್ಲಿ ತಣ್ಣೀರು ಇತ್ತು. ತಣ್ಣೀರು ಮತ್ತು ಬಿಸಿ ನೀರನ್ನು ಅರ್ಧ ಅರ್ಧವಾಗಿ ಬೆರೆಸಿ ಹದಮಾಡಿ ಸ್ನಾನ ಮಾಡಿಸುತ್ತಿದ್ದರು. ಒಮ್ಮೆ ಅಜ್ಜಿಗೆ ಬಿಸಿನೀರಿಗೆ ತಣ್ಣೀರು ಬೆರಸಲು ಮರೆತು ಬರೇ ಬಿಸಿನೀರನ್ನು ಮಾತ್ರ ಅಜ್ಜನ ತಲೆಯ ಮೇಲೆ ಸುರಿದೇ ಬಿಟ್ಟಳು. ಯಾವಾಗಲೂ ಒಡಾಡಲೂ ಆಗದ ಅಜ್ಜ ತಲೆಗೆ ಬಿಸಿ ನೀರು ಬಿದ್ದಾಕ್ಷಣ ಹೊರಳಾಡಿ ಎದ್ದು ಓಡಿ ಹೋದರು.

ಇದನ್ನು ನೋಡುತ್ತಲೇ ನಿಂತಿದ್ದ ಬೇರೆ ಹುಡುಗರು ಹೊಟ್ಟೆ ಹುಣ್ಣಾಗುವಂತೆ ನಗೆಯಾಡಿದರಂತೆ. ಒಂದೇ ಸವನೆ ಹೌಹಾರಿ ಬಾಯಿ ತೆರೆದು ನಗೆಯಾಡುವಾಗ ಹುಡುಗನೊಬ್ಬನ ತೆರೆದ ಬಾಯಿ ತೆರೆದುಕೊಂಡೇ ಉಳಿಯಿತಂತೆ. ನಗುವಾಗ ದವಡೆಯ ಕೀಲು ಜಾರಿ ತೆರೆದ ಬಾಯಿ ತೆರೆದೇ ಉಳಿಯಿತಂತೆ. ಏನು ಮಾಡಿದರೂ ಬಾಯಿ ಮುಚ್ಚಲಾಗಲಿಲ್ಲವಂತೆ. ಡಾಕ್ಟರ ಬಳಿ ಹೋದರೂ ಆಗಲಿಲ್ಲ. ಹಲವಾರು ಪಂಡಿತ, ವೈದ್ಯರನ್ನು ಬೇಟಿ ಮಾಡಿದರೂ ಪ್ರಯೋಜನ ವಾಗಲಿಲ್ಲ.

ಕೊನೆಗೊಂದು ದಿನ ಎತ್ತು (ಹೋರಿ) ಗಳಿಗೆ ಬರೆ ಹಾಕುವವನು ಅವನ ಮನೆಗೆ ಬಂದನಂತೆ. ಹೋರಿಗೆ ಬರೆ ಹಾಕುವ ಸಲುವಾಗಿ ಹೋರಿಯನ್ನು ಮಲಗಿಸಿ ಬರೆ (ಕಬ್ಬಿಣವನ್ನು ಕೆಂಪಗೆ ಕಾಯಿಸಿ ಬರೆ ಹಾಕುವುದು) ಹಾಕಲು ತೊಡಗಿದಾಗ ಆ ಬಾಯಿ ಬಿಟ್ಟ ಕೊಂಡಿರುವ ಹುಡುಗನೂ ಹತ್ತಿರದಲ್ಲೇ ಬಾಯಿ ಬಿಟ್ಟು ಹೋರಿಯನ್ನು ಹಿಡಿದುಕೊಳ್ಳುವುದರಲ್ಲಿ ಸಹಕರಿಸುತ್ತಿದ್ದನಂತೆ. ಹೋರಿ ಹೊರಳುವಾಗ ಬರೆ ಎಳೆಯುವವನಿಗೆ ಸಿಟ್ಟು ಬಂದು ಕಾದ ಕಬ್ಬಿಣವನ್ನು ಆ ಹುಡುಗನ ಬಾಯಿಯ ಕಡೆಗೆ ಹಿಡಿದಾಗ ಹುಡುಗ ಹೆದರಿ ಬಾಯಿ ಮುಚ್ಚಿಕೊಂಡನು ಹೊರಳಾಡಿದ ಹೋರಿಯೂ ಆತನ ದವಡೆಗೆ ಒದ್ದುಬಿಟ್ಟಿತಂತೆ. ಅಂತೂ ಆತನ ತೆರೆದಿದ್ದ ಬಾಯಿ ಸರಿಯಾಯ್ತು.

# ನಮ್ಮವೆಲ್ಲ ಒಂದಾಕು, ಹಳೆಯದೆಲ್ಲ ಮರ್ತ್ ಬುಡ್ಕೊಕು

ರಚನೆ : ಮೂಲೆ ಮುಜ್ಲು ಚಿಣ್ಣಪ್ಪ
ಬೆಂಗಳೂರು

---

[ಸಮಾಜದಲ್ಲಿ ಒಗ್ಗಟ್ಟು ಅವಶ್ಯಕ ಒಗ್ಗಟ್ಟಿಲ್ಲದೆ ಯಾವ ಕೆಲಸವನ್ನು ಸಾಧಿಸಲು ಸಾಧ್ಯವಿಲ್ಲ—ಈ ವಿಷಯವನ್ನು ಶ್ರೀ ಚಿಣ್ಣಪ್ಪನವರು ಅರೆಬಾಷೆಯಲ್ಲಿ ರಚಿಸಿದ್ದಾರೆ]

---

ನಮ್ಮದೆಲ್ಲ ಒಂದೇ ಕೂಟ
ಒಂದುಗೂಡಿ ಒಟ್ಟಿಗೆ ಊಟ

ಯಾವ ಪಾರ್ಟಿ ಯಾವ ನ್ಯಾಯ
ಎಲ್ಲ ಬುಟ್ಟ್ ಒಟ್ಟಿಗಿರೊಕು

ಹಾಂಗೆ ಹೀಂಗೆ ಭಾಷ್ಣ ಮಾಡಿ
ನಮ್ಮ ನಾವೇ ಮಂಕ್ ಮಾಡ್ದು

ಸುಳ್ಯಲಿ ಮಹಾ ಸಭೆ ಮಾಡ್ದೊ
ಊರುಂದೂರೇ ಜನ ಸೇರ್ದೊ

ಭಾಷೆ ಮಾತ್ ವಚನ ಕೊಟ್ಟೊ
ಓಟ್‌ಗೆ ನಿತ್ತ್ ಎನ್‌ಂತಾತ್ ?

ಮಾಪ್ಪೆ ಓಟುಲಿ ಗೆದ್ದ್ ಬಾತ್
ನಮ್ಮ ಒಗ್ಗಟ್ಟೆಲ್ಲಿ ಒಳ್ತ್ ?

ನಾವುಗೆ ನಾವೇ ಮೋಸ ಮಾಡಿ
ಬೇರೆಯುವರ್ನ್ನೆ ಮುಂದೆ ಮಾಡಿ

ಅವರ ಜೀತ ನಾವೇ ಮಾಡ್ರೆ
ನಾವು ಬಾದು ಹೇಗೆ ಮುಂದೆ ?

ಕಾಡಿ ಬೇಡಿ ವಂತಿಗೆ ಮಾಡಿ
ಸರ್ಕಾರಂದ ದುಡ್ಡು ಬೇಡಿ

ಹಳ್ಳಕೆ ಅಡ್ಡ ಪಾಲ ಆತ್
ಕೆಲ್ಸ ಎನೊ ಕೈ ಗೂಡ್ತ್

ಪಾಲಲಿ ಯಾರೂ ಹೋಗದಾಂಗೆ
ನಮ್ಮವು ದಾರಿ ಬುಡದೆ ಹೀಂಗೆ

ಶ್ರಮ ಎಲ್ಲ ವ್ಯರ್ಥ ಅತ್
ಬಟ್ಟಂಗೆ ನೆಗಾಡಿಕೆ ಒಳ್ಳದಾತ್

ಇಂತ ಕತೆಗಳೆಷ್ಟೊ ಉಟ್ಟು
ಹೇಳಿಕೆ ನಾಚಿಕೆ ನಮ್ಮ ಗುಟ್ಟು

"ಎಷ್ಟು ಖರ್ಚ್ ಆದರು ಅಡು
ಆಸ್ತಿಮಾಡಿ ಹೋದರು ಹೋಗಲಿ

ಬೇಡಿ ತಿಂದ್ರು ಚಿಂತೆ ಇಲ್ಲೆ
ಅವನ ನಾನ್ ಬುಡಿಕೆ ಇಲ್ಲೆ"

ಇಂತ ಹಟ ನಮ್ಮಲಿರ್ದು
ಮತ್ತೆ ಹೇಂಗೆ ಬೊರ್ಕತ್ತಾದು ?

ಇಂತ ರೀತಿ ಇಂತಃ ನೀತಿ
ಎಂತ ಕಷ್ಟಗೋಳ್ ಬಂದ್

ಎಷ್ಟ ಜನ ಕಾಣವಾದೊ !
ಅಂಥಃ ಜನ ಸಿಕ್ಕದಾದೋ ?

ನಾಮಗೆ ಯಾವ ಕೊರ್ತೆ ಇಲ್ಲೆ
ನಮ್ಮಲೆಷ್ಟು ಜ್ಞಾನಿಗಳಿಲ್ಲೆ ?

ನಾವು ಯಾರಿಗೂ ಕಮ್ಮಿ ಇಲ್ಲೆ
ಮತ್ಯಾಕೆ ಇರೊಕು ಹೀಂಗೆ ಇಲ್ಲೆ ?

ಏನೇ ಬರ್ಲಿ ಹೇಂಗೆ ಆಗ್ಲಿ
ನಮ್ಮನ ನಾವು ಬುಡಿಕೆ ಬೊತ್ತ್

ಎಲ್ಲೇ ಹೋಗ್ಲಿ ಯಾರೇ ಬರ್ಲಿ
ಯಾರಿಗೂ ನಾವು ಹೆದರೊಕುತ್ತಿಲ್ಲೆ

ಜಗಳ ಜಟ್ಟಿ ಕೋಪ ನ್ಯಾಯ
ಆಗಿಂದಾಗ ಮರ್ತೆ ಬುಡೊಕು

ನಾವುಂತೇಳ್ದು ನಮ್ಮಲ್ಲಿರೊಕು.
ದೇವ್ರ ನಮ್ಮ ಕಾಪಾಡೊಕು.



## ಚುಟುಕಗಳು

**ಹೊಗೆ**

**ರಚನೆ :ಹೆಚ್. ಬಿ. ಬಿ.**

ಬಿಳಿಮೋಡ ಕಪ್ಪಾಗಿ ಆಕಾಶಲಾಗ
ಕಾಣ್ತೆತ್ತ್ ಅಜ್ಜೇಳ್ತ್ ಮಳೆಬಾದು ಬೇಗ
ದೀಪಾವಳಿ ಪಟಾಕಿ ಹೊಗೆ ಕಾಣ್ತಿದ್ದದಂದ್
ಅಜ್ಜಿಗದ್ ಗೊತ್ತಾದ್ ಅಂದಲ್ಲ ಇಂದ್॥

**ಈ ವರ್ಷ**

**ರಚನೆ ಹೆಚ್. ಬಿ. ಬಿ.**

ಸೆಕೆಗಾಲಲೀ ವರ್ಷ ಬಾಕಿಲ್ಲೆ ಬೆಗರ್
ಯಾಕೆಂತೇಳಿರೆ ಜನಕೆ ಕುಡಿಕಿಲ್ಲೆ ನೀರ್
ಹಾಲ್ ಮಾರೊವು ಎಲ್ಲ ಬೇಜಾರಲಿರುವೊ
ಹಾಲ್‌ಗಾಕಿಕೆ ನೀರ್ ಎಲ್ಲಿಂದ ತರುವೊ?

# ನಾವು ಮತ್ತು ಭಾಷೆ

ಪದ್ಮ ಕಾರ್ಕಳ
ಕುತ್ಯಾಳ ದ. ಕ.

---

[ಭಾಷಾಭಿಮಾನ, ದೇಶಭಿಮಾನ ಪ್ರತಿಯೊಬ್ಬ ವ್ಯಕ್ತಿಗೂ ಇರಬೇಕಾದುದೇ. ಆದರೆ ಮಾನವ ಕುಲವೆಂಬ ವಿಶಾಲವಾದ ಸಮಾಜದ ಅಡಿಗಲ್ಲಿನಲ್ಲಿ ದೇಶಾಭಿಮಾನ ವೆಂಬುದಕ್ಕೆ ಸ್ಥಾನವಿಲ್ಲ. ವಿಶ್ವ ಮಾನವನಿಗೆ ದೇಷಭಾಷೆಗಳ ಭೇದವಿಲ್ಲವಾದರೆ ಮಾತ್ರ ವಿಶ್ವಮಾನವ ಸಮಾಜದ ನಿಜವಾದ ಅರ್ಥಕ್ಕೆ ಬೆಲೆ ಬರುತ್ತದೆ. ಅದೇ ರೀತಿ ಒಂದು ದೇಶ–ರಾಷ್ಟ್ರವೆಂಬ ಸಂಬಂದಕ್ಕೆ ಜಾತಿ ಮತ ಭಾಷೆಗಳ ಅಡೆತಡೆ ಗಳಿರ ಬಾರದು, ಕಲೆ ಸಂಸ್ಕೃತಿ ವಿಜ್ಞಾನಕ್ಕೂ, ಮತ ಜಾತಿಗಳೆಂಬ ಭೇದವನ್ನು ಅಂಟಿಸಿದರೆ ಆ ಕಲೆಯು, ವಿಜ್ಞಾನದ ಸಂಸ್ಕೃತಿಯು ನಿಜವಾದ ರೂಪವನ್ನು ಕಂಡುಕೊಳ್ಳುವುದಕ್ಕೆ ಸಾಧ್ಯವಿಲ್ಲವೆಂಬುದರ ತತ್ವವನ್ನು ಶ್ರೀ ಪದ್ಮ ಕಾರ್ಕಳರವರು ಈ ಲೇಖನದಲ್ಲಿ ಪ್ರತಿಪಾದಿಸಿದ್ದಾರೆ. ಸಂ]

---

ಸುಸಂಸ್ಕೃತ ತಾಯಿನಾಡು ಭಾರತದ ಸತ್ಪ್ರಜೆಗಳಾದ ನಾವು ಎಂದೋ ಕಂಡ ನಾಗರಿಕತೆಯ ಕನಸ್ಸಿನ ನನಸ್ಸಿಗಾಗಿ ಇಂದೂ ತೊಳಲಾಡುತ್ತಿದ್ದೇವೆ. ಪ್ರಾದೇಶಿಕತೆ ಎಂಬ ಗೋಡೆಗಳ ಮದ್ಯೆ ಭಾಷಾವಾರು ಪ್ರಾಂತ್ಯದ ಕತ್ತಲಲ್ಲಿ ಆಧುನಿಕತೆಯೆಂಬ ಸಂಸ್ಕೃತಿಯನ್ನು ಹುಡುಕುತ್ತಿದ್ದೇವೆ. ವಿವಿಧ ಧರ್ಮಗಳ ಪ್ರಭಾವ, ವಿಭಿನ್ನಕಲಾಭಿರುಚಿ, ವೈವಿಧ್ಯಮಯ ಆಶಕ್ತಿ, ಸತ್ಯನಡತೆಗಳೇ ಮುಂತಾದ ನಮ್ಮ ಸಂಸ್ಕೃತಿ ಇತರರಿಗಿಂತ ಭಿನ್ನವಾಗಿದೆ. ಇಷ್ಟಕ್ಕೆ ಹೆಮ್ಮೆ ಪಡುತ್ತಿರುವ ನಮಗಿಂದು ನಮ್ಮಲ್ಲೆ ಆತ್ಮವಿಶ್ವಾಸ ಕಡೆಯಾಗುತ್ತಿರುವಂತಿದೆ.

ಒಂದೇ ಭಾಷೆ ಮಾತಾಡುವ ಜನರಿಗೆ ಪ್ರತ್ಯೇಕವಾದ ಒಂದು ರಾಜ್ಯಬೇಕು. ಜನತಂತ್ರ ಸರಕಾರದಲ್ಲಿ ಜನರಿಂದ ಜನರಿಗಾಗಿ ಜನರೇ ನಡೆಸುವ ಆಡಳಿತ ವ್ಯವಸ್ಥೆಯಲ್ಲಿ ಆ ರಾಜ್ಯದ ಭಾಷೆಯೇ ಆಡಳಿತ ಭಾಷೆಯಾ ಗಬೇಕಾದುದು ಅಗತ್ಯವಿದೆ. ಇದು ಭಾಷಾವಾರು ಪ್ರಾಂತ್ಯದ ಉಗಮಕ್ಕೆ ಕಾರಣೀಭೂತವಾದ ಸಿದ್ಧಾಂತ ಮತ್ತು ಉದ್ದೇಶ ಅರ್ಥ ಪೂರ್ಣವಾಗಿದೆ. ಆದರೆ ಈ ಉದ್ದೇಶಕ್ಕೆ ವಿಶಾಲ ಅರ್ಥವನ್ನು ನಾವು ಕಲ್ಪಿಸಿಕೊಟ್ಟಿಲ್ಲ. ಹರಿದು ಹಂಚಿ ಹೋಗಿದ್ದ ಒಂದೇ ಭಾಷೆಯನಾಡುವ ಜನರು ಏಕ ಆಡಳಿತಕ್ಕೊಳಪಟ್ಟಿದ್ದು ನಿಜಕ್ಕೂ ಹೆಮ್ಮೆಯ ವಿಚಾರ. ಬ್ರಿಟಿಷರ ಆಡಳಿತ ವ್ಯವಹಾರಗಳೆಲ್ಲ ಇಂಗ್ಲೀಷ್‌ನಲ್ಲೇ ನಡೆಯುತ್ತಿದ್ದಾಗ ದೇಶದಲ್ಲಿ ಅಧಿಕ ಸಂಖ್ಯೆಯಲ್ಲಿದ್ದವರು

ಅನಕ್ಷರಸ್ಥರು. ಆಂಗ್ಲಭಾಷೆಯನ್ನು ಅರ್ಥಮಾಡಿಕೊಳ್ಳುವುದಕ್ಕೂ ಸಾಧ್ಯವಿಲ್ಲದ ಕಾಲ. ಕೇವಲ ಬೆರಳೆಣಿಕೆ ಮಂದಿ ತಿಳಿದು ಕೊಂಡರೆ ಮಿಕ್ಕವರು ಮೂಕಪ್ರೇಕ್ಷಕರು. ಈ ದಿಸೆಯಲ್ಲಿ ನಮ್ಮ ದೇಶದಲ್ಲಿ ಭಾಷಾವಾರು ಪ್ರಾಂತ್ಯ ಏರ್ಪಡಬೇಕೆಂಬ ಕನಸ್ಸು ಜನನಾಯಕರು ಕಂಡು ಅವರ ಹೋರಾಟದ ಫಲವೇ ರಾಜ್ಯಗಳ ಪುನರ್ವಿಂಗಡಣೆ. ಪರಿಣಾಮವಾಗಿ ಒಂದೇ ಭಾಷೆಯನ್ನಾಡುವ ಬಹುತೇಕ ಜನರು ರಾಜ್ಯದ ಅರ್ಥತೆಕ್ಕೊಳಪಡುವುದು ಸಾಧ್ಯವಾಯಿತು. ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ, ನ್ಯಾಯ, ಆಡಳಿತ ನಿರ್ವಹಣೆ, ವ್ಯವಹಾರಗಳು ನಡೆದು ಜನಸಾಮನ್ಯರೂ ಅರ್ಥಿಸಿಕೊಂಡು ಪ್ರತಿಕ್ರಿಯಿಸುವಂತಾಯಿತು.

ಜನಸಾಮಾನ್ಯರು ಪ್ರಾದೇಶಿಕ ಭಾಷೆಯನ್ನೇ ಕಲಿತು ವ್ಯವರಿಸುವಲ್ಲಿ ಆತ ಚತುರನೆಂದೇ ತಿಳಿಯೋಣ. ಒಂದು ರೀತಿಯಲ್ಲಿ ಪ್ರಾದೇಶಿಕ ಭಾಷೆಯನ್ನೇ ಕಡ್ಡಾಯ ವಿಧಿಸಿದಾಗ ಅದು ಆತನ ವಿಶಾಲ ಪ್ರಪಂಚವನ್ನು ಮೊಟಕುಗೊಳಿಸಿದಂತಾಗುತ್ತದೆ. ಏಕೆಂದರೆ ತನ್ನ ವ್ಯವಹಾರ ಕೌಶಲ, ಸೃಜನಶೀಲ ಬೆಳವಣಿಗೆಗೆ ತನ್ನ ಭಾಷಾಜ್ಞಾನದ ಪರಿಧಿಗೊಳಗಷ್ಟೆ ಸೀಮಿತಗೊಳಿಸಿದಂತಾಗುತ್ತದೆ. ಪರಭಾಷೆಯಲ್ಲಿ ಪರರಾಜ್ಯ ಅಥವಾ ಪರದೇಶದಲ್ಲಿ ವ್ಯವಹರಿಸಬೇಕಾದ ಸಂದರ್ಭದಲ್ಲಿ ರಾಜ್ಯ ಭಾಷಯನ್ನಷ್ಟೇ ಕಲಿತವ ಏನು ಮಾಡಲು ಸಾಧ್ಯ ? ಅಂದರೆ ಒಬ್ಬನು ತನ್ನ ರಾಜ್ಯದಿಂದ ಹೊರಗೆ ಹೋಗಬಾರದೆಂದೆ ? ಒಳ್ಳೆಯದನ್ನು ಪರರಿಂದ ನಾವೇಕೆ ಸ್ವೀಕರಿಸಬಾರದು.?

ಉತ್ತಮ ಸಾಹಿತ್ಯ, ಕಲೆ, ಸಂಗೀತ ತಾಂತ್ರಿಕ ಹಾಗೂ ವೈಜ್ಞಾನಿಕ ವಿಚಾರಗಳು ತಮಗಿಂತ ಉತ್ಕೃಷ್ಟವಿದ್ದರೆ ಅದನ್ನು ತಮ್ಮದಾಗಿಸಿಕೊಳ್ಳಬಾರದೇಕೆ? ಸ್ವಬಾಷಾ ವ್ಯಾಮೋಹ ಮಾನವನ ಜ್ಞಾನಪ್ರಪಂಚವನ್ನು ಕುಗ್ಗಿಸುವಂತಾಗದೆ ನಮ್ಮಲ್ಲಿ ಪರಭಾಷಾ ಸಹಿಷ್ಣುತೆ ಸಹ ಅಗತ್ಯ. ಜೀವನ ವ್ಯವಹಾರಗಳೆಲ್ಲಾ ಭಾಷೆಯಿಂದಲೇ ನಡೆಯಬೇಕ್ಕಾದರಿಂದ · ಅಂತಹ ಭಾಷಾಜ್ಞಾನ ತೀರಾ ಅನಿವಾರ್ಯವೂ ಹೌದು. ಅಂದರೆ ನಾವು ಕನ್ನಡಿಗರು. ಕನ್ನಡವೇ ನಮ್ಮ ಮಾತ್ರ ಭಾಷೆ. ಅನ್ಯ ಭಾಷಾ ವ್ಯಾಮೋಹ ನಮಗೆಂದೂ ಬೇಡವೆಂಬ ಸಿದ್ಧಾಂತಕ್ಕೆ ಮಣಿದು ಕೇವಲ ಕನ್ನಡಭಾಷೆಯೊಂದನ್ನರಿತರಷ್ಟೆ ಆದರೆ ಅದು ಕೂಪಮಂಡೂಕದ ಕಥೆಯಾದೀತು. ಒಂದೊಂದು ಭಾಷೆ ಯನ್ನಾಡುವ ಒಂದೊಂದು ಪ್ರಾಂಥ್ಯಗಳು ರೂಪುಗೊಂಡು ಅವುಗಳಲ್ಲಿ ಆದ ಭಾಷೆಯಲ್ಲಿ ವ್ಯವಹಾರ ನಡೆಯು ತ್ತಿರುವಾಗ ತನ್ನದೇ ಆದ ಪ್ರಾಂತ್ಯದ ಭಾಷೆಯನ್ನು ಮಾತ್ರ ಬಲ್ಲ ಪ್ರಜೆ ಇನ್ನೊಂದು ಭಾಷಾ ಪ್ರಾಂತ್ಯದೊಂದಿಗೆ ವ್ಯವಹಾರ ನಡೆಸುವುದಾದರೂ ಹೇಗೆ ? ಉದಾಹರಣೆಗೆ ಕನ್ನಡ ಮಾತ್ರ ತಿಳಿದ ಈ ಪ್ರಾಂತ್ಯದ ಪ್ರಜೆ ಹಿಂದಿ ಭಾಷಾ ಪ್ರಾಂತ್ಯದ ಪ್ರಜೆಯೊಂದಿಗೆ ವ್ಯವಹರಿಸಲು ಸಾಧ್ಯವಾಗದೇ ಹೋಗುತ್ತದೆ.

ಆಂಧ್ರ ಪ್ರದೇಶದಲ್ಲಿ ತೆಲುಗು. ಮದ್ರಾಸಿನಲ್ಲಿ ತಮಿಳು ಹಾಗೆನೇ ಉ. ಭಾರತದ ಬಹುತೇಕ ರಾಜ್ಯಗಳಲ್ಲಿ ಹಿಂದೀ ಭಾಷೆಯಲ್ಲಿ ವ್ಯವಹಾರ ನಡೆಯುತ್ತಿರುವುದರಿಂದ ಅಂತಹ ರಾಜ್ಯಗಳೊಂದಿಗೆ ವ್ಯವಹರಣೆ ಕನ್ನಡ ಭಾಷೆ ಯನ್ನೊಂದನ್ನಷ್ಟೆ ಅರಿತ ನಮಗೆ ಸಾಧ್ಯವಾಗದೆ ಹೋಗುತ್ತದೆ. ಅಲ್ಲಿ ಪ್ರವಾಸ ಕೈಗೊಳ್ಳಬೇಕಾದ ಸಂದರ್ಭ ಸರ್ವಭಾಷಾ ಜ್ಞಾನಿಯೊಬ್ಬರ ನೆರವು ನಮಗೆ ಅನಿವಾರ್ಯವಾಗಬಹುದು. ಇತ್ತೀಚೆಗೆ ಮುಂಬಯಿ, ದೆಹಲಿ, ರಾಜಸ್ಥಾನಗಳಲ್ಲಿ ಪ್ರವಾಸ ಕೈಗೊಂಡ ಸಂದರ್ಭ ನನಗಾದ ಅನುಭವ ಎಂದರೆ ರಾಜಸ್ಥಾನ ರಾಜ್ಯದಲ್ಲಿ ಎಲ್ಲಿನೋಡಿದರೂ ಹಿಂದಿ ವ್ಯವಹಾರ. ಹಿಂದಿಯಲ್ಲೆ ಕಛೇರಿ. ಅಂಗಡಿ, ಬಸ್ಸುಗಳ ಬೋರ್ಡುಗಳೆಲ್ಲ. ಅಲ್ಪಸ್ವಲ್ಪ ಹಿಂದಿ ಮಾತನಾಡಬಲ್ಲ ನನಗೂ ಅಲ್ಲಿ ಹಿಂದಿಯಲ್ಲಿ ವ್ಯವಹರಿಸಲು ಸಮಸ್ಯೆಯಾಯಿತು. ಅಂದರೆ ಇಂಗ್ಲೀಷ್ ಭಾಷೆ ಅಲ್ಲಿ ಕೆಲವರಿಗೆ ಗೊತ್ತಿಲ್ಲ. ಹಿಂದಿ ನಮಗೆ ಬರುತ್ತಿಲ್ಲ. ಕನ್ನಡದ ಗಂಧಗಾಳಿಯೇ ಅಲ್ಲಿಲ್ಲ. ಸ್ವೆಟ್ಟರ್ ವ್ಯಾಪಾರಿಯೊಬ್ಬರನ್ನು ಬೇಟಿಯಾಗಿ ಕ್ರಯ ವಿಚಾರಿಸಿದೆ. ಆತ ಕ್ರಯ ರೂಪ್ಯಾಗಳಲ್ಲಿ ಹಿಂದಿಯಲ್ಲೇ ತಿಳಿಸಿದ ಕಾರಣ ಅದು ಎಷ್ಟೆಂದು ಅರ್ಥವಾಗದೆ ನಾನು ಇಂಗ್ಲೀಷಿನಲ್ಲಿ ವಿಚಾರಿಸಿದೆ. ಇಂಗ್ಲೀಷ್ ತಿಳಿಯದ ಆತ ಮತ್ತೆ ಹಿಂದಿಯಲ್ಲಿ ವ್ಯವಹರಿಸಿದ. ನಾನು

ಕೇಳುತ್ತಿರುವುದು ಆತನಿಗೆ ಅರ್ಥವಾಗಲಿಲ್ಲ. ಆತನ ಮಾತು ನನಗೆ ತಿಳಿಯಲಿಲ್ಲ. ಖರೀದಿ ವ್ಯವಹಾರ ಸಾಧ್ಯವಾಗದೆ ನಾನು ಮುಂದೆ ಸಾಗಬೇಕಾದ ಪರಿಸ್ಥಿತಿ ಬಂದೊದಗಿತು. ಹೀಗೆ ಒಂದೊಂದು ರಾಜ್ಯದಲ್ಲಿ ಒಂದೊಂದು ವಿವಿಧ ಭಾಷಾ ಸಮಸ್ಯೆ ಎದುರಿಸಬೇಕಾಗುತ್ತದೆ. ಈ ದಿಸೆಯಲ್ಲಿ ನಾವು ನಮ್ಮ ಮನಸ್ಸನ್ನು ಕೇವಲ ನಮ್ಮ ರಾಜ್ಯ ಭಾಷೆಯಲ್ಲಷ್ಟೇ ಕೇಂದ್ರಿಕರಿಸದೆ ಅದು ದೇಶದತ್ತ ವಿಶಾಲವಾಗಿರಬೇಕಾಗಿರುತ್ತದೆ. ನಮ್ಮ ದೇಶದೊಳಗೆ ನಮಗೆ ನಿರಂತರವಾಗಿ ವ್ಯವಹರಿಸಲು ಸಾಧ್ಯವಾಗದೆ ಹೋಗಬಹುದು ನೆರೆಮನೆಯವರ ಸ್ನೇಹಿತರೊಬ್ಬ ಹೊರರಾಜ್ಯದಿಂದ ನಮ್ಮಲ್ಲಿ ಬಂದಾಗ ಕೇವಲ ಹಿಂದಿ ಮರಾಠಿ ಭಾಷೆಯನ್ನಷ್ಟೆ ಬಲ್ಲ ಅವರೊಂದಿಗೆ ಮಿತ್ರತ್ವದ ಬಗ್ಗೆ ಎರಡು ಮಾತನ್ನೂ ಆಡಲಾರದ ಅಸಹಾಯಕ ಪರಿಸ್ಥಿತಿ ಮೊನ್ನೆ ತಾನೇ ಉಂಟಾಗಿತ್ತು. ಇದು ಸಹಾ ಭಾಷಾವಾರು ಸಮಸ್ಯೆಯ ಜ್ವಲಂತ ನಿದರ್ಶನ ಈ ಲೇಖನಕ್ಕೂ ಪ್ರೇರಣೆ ಪರಭಾಷಾ ದ್ವೇಷದ ತಪ್ಪಿನ ಫಲವುಣ್ಣುವವರೂ ನಾವೆ. ಆದರೆ ಅದು ಹಾಗಾಗಬಾರದು.

ಇಂದು ನಮಗೆ ವಿದೇಶೀ ಬಟ್ಟೆಗಳ ಮೇಲೆ ವ್ಯಾಮೋಹ. ಜಾಪಾನ್ ತಾಂತ್ರಿಕತೆಯಲ್ಲೇ ಆಸಕ್ತಿ. ಅಲ್ಲಿನ ವಸ್ತುಗಳೇ ನಮಗಿಂದು ಬೇಕು. ಇಂತಹ ಮನೋಭಾವ ನಮ್ಮದು. ಆದರೆ ಅವರ ಜನಜೀವನ, ಭಾಷೆ, ಸಂಸ್ಕೃತಿ ಅರಿತುಕೊಳ್ಳುವಲ್ಲಿ ನಮ್ಮ ಭಾಷೆ ಅಡ್ಡಿಯಾಗಕೂಡದಲ್ಲವೆ ! ಕನ್ನಡೇತರ ಭಾಷೆಗಳನ್ನು ನಾವಂತೂ ಕಲಿತುಕೊಳ್ಳಲಿಲ್ಲ. ಅದಕ್ಕೆ ಅವಕಾಶವೂ ಇರಲಿಲ್ಲವೆನ್ನಿ. ಆದರೆ ನಮ್ಮ ಕಳಂಕ ಮುಂದಿನ ಜನಾಂಗಕ್ಕೆ ಬರಬಾರದು. ಇದುವೇ ಪ್ರಪಂಚವೆಂಬಂತೆ ತಮ್ಮ ಕೂಪದೊಳಗೆ ಅವರನ್ನೂ ಎಳೆದುಹಾಕಿಕೊಳ್ಳಬಾರದು. ಹೊರಗೂ ವಿಶಾಲ ವಿಭಿನ್ನ ಪ್ರಪಂಚವೊಂದಿದೆ ಎಂಬುದನ್ನು ತೋರಿಸಿಕೊಡುವ ಕರ್ತವ್ಯ, ಹೊಣೆ ನಮ್ಮದು. ನಾಳಿನ ಹೊಸಪೀಳಿಗೆಗೆ ಏನನ್ನಾದರೂ ಸಾಧಿಸಲು ಸಮರ್ಥವಾಗುವಂತೆ ಅವರನ್ನು ನಾವಿಂದೇ ರೂಪಿಸಿಕೊಳ್ಳಬೇಕಾಗಿದೆ. ಒಬ್ಬ ವಿಜ್ಞಾನಿಯೋ ಪತ್ರಕರ್ತನೋ, ರಾಯಭಾರಿಯೋ, ಪ್ರಧಾನಿಯೋ, ಇಂಜಿನಿಯರೋ ಆತ ಆಗಬಹುದಾದ ಸಾಧ್ಯತೆಯಿದೆ. ಅಂತರರಾಷ್ಟ್ರೀಯ ಮಟ್ಟದ ತಾಂತ್ರಿಕ ಜ್ಞಾನಗಳಿಸುವಲ್ಲಿ ಆತನಿಗೆ ಭಾಷಾ ಗೋಡೆ ಅಡ್ಡಬಾರದಂತೆ ಇಂದೇ ಎಚ್ಚರ ವಹಿಸಬೇಕಾಗಿದೆ. ಇದಕ್ಕಾಗಿ ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯವಾದ ವ್ಯವಹಾರಿಕ ಭಾಷೆಯೊಂದನ್ನಾದರೂ ಅರಿತುಕೊಳ್ಳುವುದು ನಮ್ಮ ಜಾಣತನಕ್ಕೆ ಸವಾಲು. ಅದು ಹಿಂದಿಯೂ ಆಗಬಹುದು ಅಥವಾ ಇಂಗ್ಲೀಷ್ ಆಗಬಹುದು. ಮಾತೃಭಾಷೆಯನ್ನು ನಾವಿಂದು ಕಲಿಯಬೇಕಾದುದು ಎಷ್ಟು ಮುಖ್ಯವೋ ಅದನ್ನು ಶ್ರೀಮಂತ ಗೊಳಿಸಲು ಪರಭಾಷಾ ಅರಿವು ಸಹಾ ಅಷ್ಟೇ ಮುಖ್ಯ. ಇಂಗ್ಲೀಷ್ ಇಂದು ಅಂತರಾಷ್ಟ್ರೀಯ ಭಾಷೆಯಾಗಿರು ವುದರಿಂದ ಈ ಭಾಷಾ ಪರಿಜ್ಞಾನ ನಮಗೆ ತೀರಾ ಅಗತ್ಯ.

ಒಟ್ಟಿನಲ್ಲಿ ನಾವಿಂದಿನ ಆಧುನಿಕ ಯುಗದಲ್ಲಿ ಎಲ್ಲಾ ರಂಗದಲ್ಲಿ ಹಿಡಿತ್ವ ಸಾಧಿಸುವಂತಾಗಲು ವ್ಯಕ್ತಿತ್ವ ವಿಕಸನದೊಂದಿಗೆನಾಗರಿಕ ಪ್ರಜೆಯಾಗಿಸಿಕೊಳ್ಳಲು ಭಾಷಾವಾರು ಪ್ರಾಂತ್ಯವೆಂದು ಸೀಮಿತಕ್ಕೊಳಪಡದೆ ಅಂತರಾಷ್ಟ್ರೀಯ ಮಟ್ಟದಲ್ಲೂ ವ್ಯವಹಾರಿಕ ಭಾಷೆಯೊಂದನ್ನು ಅರಿತುಕೊಳ್ಳುವುದರೊಂದಿಗೆ ನಮ್ಮವರಿಗೂ ಕಲಿಸಿಕೊಡಬೇಕು. ನಮ್ಮ ಜನಾಂಗದಲ್ಲಿ ಅದರ ಕೊರತೆಇರಕೂಡದು.

# ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ ಬೆಂಗಳೂರು ಇದರ ಮೂಲಕ ಸ್ಥಾಪಿಸಲ್ಪಟ್ಟ ಕೆಂಪೇಗೌಡ ಗ್ರಾಮೀಣ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ ಬೆಂಗಳೂರು ಇದರ ರೂಪರೇಖೆಗಳು

ಬೆಂಗಳೂರು ನಗರವು ಭಾರತದ ಕೈಗಾರಿಕಾ ರಾಜಧಾನಿ ಎಂದು ಪ್ರಸಿದ್ಧಿಯಾಗಿದ್ದು ಇಲ್ಲಿನ ಜನಸಂಖ್ಯೆಯು ದಿನೇ ದಿನೇ ಬೆಳೆಯುತ್ತಿದ್ದು ಜನ ಸಂಖ್ಯೆಯನ್ನಾಧರಿಸಿ ವಸತಿ ಸೌಕರ್ಯಗಳು ಕಡಿಮೆಯಾದುದರಿಂದ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಿಂದ ಬೆಂಗಳೂರಿನಲ್ಲಿ ಉದ್ಯೋಗ,ವ್ಯಾಪಾರ, ಕೈಗಾರಿಕೆಗಳನ್ನು ಸ್ಥಾಪಿಸಿ ಜೀವನೋಪಾಯಕ್ಕಾಗಿ ಬಂದು ನೆಲಸಿದ ಗೌಡರ ವಸತಿ ಸೌಕರ್ಯದ ತೊಂದರೆಯನ್ನು ನಿವಾರಿಸಲು ತಮ್ಮದೇ ಆದ ಒಂದು ಗೃಹ ನಿರ್ಮಾಣ ಸಹಕಾರ ಸಂಘವನ್ನು ಸ್ಥಾಪಿಸಬೇಕೆಂದು ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಆಶ್ರಯದಲ್ಲಿ ತಾ. 23-1-1982 ರಂದು ಸಮಾಜದ ಅಧ್ಯಕ್ಷರಾದ ಡಾ. ಕಾಯರಮಾರ್ ವೀರಪ್ಪಗೌಡರ ಅಧ್ಯಕ್ಷತೆಯಲ್ಲಿ ಸಭೆ ಸೇರಿತು. ಶ್ರೀ ಪೂಜಾರಿ ಮೊಣ್ಣಪ್ಪನವರು ಸಭೆಯ ಉದ್ದೇಶವನ್ನು ವಿವರಿಸಿ ಸಭಿಕರು ಅವರ ಸಲಹೆ ಒಪ್ಪಿ "ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಗೃಹ ನಿರ್ಮಾಣ ಸಹಕಾರ ಸಂಘ ಬೆಂಗಳೂರು" ಎಂದು ಹೆಸರಿಸಿ ಅದಕ್ಕೆ ತಕ್ಕ ಉಪನಿಯಮವನ್ನು ತಯಾರು ಮಾಡುವಂತೆ ತೀರ್ಮಾನಿಸಲಾಯಿತು.

ಮೇಲಿನ ತೀರ್ಮಾನದ ಪ್ರಕಾರ 19-9-62 ರಲ್ಲಿ ಒಂದು ಸಭೆ ಸೇರಿ ಶ್ರೀ ಪೂಜಾರಿ ಮೊಣ್ಣಪ್ಪನವರನ್ನು ಮುಖ್ಯ ಪ್ರವರ್ತಕ (Chief Promoter) ರಾಗಿ ಸರ್ವಾನುಮತದಿಂದ ಚುನಾಯಿಸಿ ಕೆಳಗೆ ಕಾಣಿಸಿದ ಸದಸ್ಯರನ್ನು ಪ್ರವರ್ತಕರಾಗಿ (Promoters) ಚುನಾಯಿಸಲಾಯಿತು ಸಂಘಕ್ಕೆ ಒಂದು ಉಪನಿಯಮವನ್ನು ತಯಾರಿಸಲು ಮುಖ್ಯ ಪ್ರವರ್ತಕರಾದ ಶ್ರೀ ಪೂಜಾರಿ ಮೊಣ್ಣಪ್ಪನವರಿಗೆ ಅಧಿಕಾರ ಕೊಡಲಾಯಿತು. ಅದೇ ರೀತಿ ಉಪನಿಯಮವನ್ನು ತಯಾರಿಸಲಾಯಿತು. ಈ ರೀತಿಯಾಗಿ ತೀರ್ಮಾನಿಸಿದ ಪ್ರಕಾರ ಜಕ್ಕೂರಿನಲ್ಲೂ ಶ್ರೀಗಂಧದ ಕಾವಲು ಮತ್ತು ಲಗ್ಗೆರೆಯಲ್ಲಿ ಒಟ್ಟು 23 ಎಕ್ರೆ ಜಮೀನನ್ನು ಕ್ರಯಕ್ಕೆ ಪಡೆದುಕೊಳ್ಳಲು ಒಪ್ಪಂದದ ಕರಾರನ್ನು ಮಾಡಲಾಯಿತು.

ಒಪ್ಪಂದದ ಕರಾರಿನ ಆಧಾರದ ಮೇಲೆ ಮೊಟ್ಟ ಮೊದಲನೆ ಹಂತವಾಗಿ ಕರ್ನಾಟಕ ಗೃಹ ನಿರ್ಮಾಣ ಕಮಿಷನರ್‌ರವರ ಅಪ್ಪಣೆಯನ್ನು ಪಡೆಯಲು ಅರ್ಜಿ ಸಲ್ಲಿಸಿ ಅವರ ಅಪ್ಪಣೆಯನ್ನು ಪಡೆದು ನಗರ ಭೂಮಿತಿ ಜಿಲ್ಲಾಧಿಕಾರಿ ಬೆಂಗಳೂರು ಇವರ ಅನುದಾನವನ್ನು ಪಡೆಯಲು ಸರ್ವೆಯರ್ ತಹಸೀಲ್‌ದಾರ್‌ರವರು ಮತ್ತು ಜಿಲ್ಲಾಧಿಕಾರಿಗಳನ್ನು ನಿವೇಶನಗಳ ಅಜಮಾಯಿಕೆಗಾಗಿ ಸ್ಥಳ ನಿರೀಕ್ಷಣೆಯನ್ನು ಮಾಡಿದ ನಂತರ ಜಮೀನುಗಳನ್ನು ಕೊಂಡುಕೊಳ್ಳಲು ಅಭ್ಯಂತರವಿಲ್ಲವೆಂಬುದಾಗಿ ನಗರ ಭೂ ಪರಿಮಿತಿ ಜಿಲ್ಲಾಧಿಕಾರಿಗಳು ಶಿಫಾರಸ್ಸು ಮಾಡಿದ ಪ್ರಕಾರ ಬೆಂಗಳೂರು ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಲಾಯಿತು. ಪ್ರಾಧಿಕಾರದ ಸರ್ವೆಯರು ಮತ್ತು ತಹಸಿಲ್‌ದಾರರು ನಿವೇಶನಕ್ಕೆ ಭೇಟಿ ಕೊಟ್ಟು ವಿಶೇಷ ಜಿಲ್ಲಾಧಿಕಾರಿಗಳಿಗೆ ಶಿಫಾರಸ್ಸು ಮಾಡಿದ ನಂತರ ವಿಶೇಷ ಜಿಲ್ಲಾಧಿಕಾರಿಗಳ

ಬೆಂಗಳೂರು ಪ್ರಾಧಿಕಾರದ ಪರವಾಗಿ ಅನುಮತಿಯನ್ನು ಕೊಟ್ಟರು. ಈ ಅನುಮತಿಯ ಪ್ರಕಾರ ಬೆಂಗಳೂರು ನಗರ ಜಿಲ್ಲಾ ಸಹಕಾರಿ ಡೆಪ್ಯುಟಿ ರಿಜಿಸ್ಟ್ರಾರ್‌ರವರಿಗೆ ಅರ್ಜಿ ಸಲ್ಲಿಸಲಾಗಿ ಅವರು ಬೆಂಗಳೂರು ಎರಡನೇ ಸರ್ಕಲ್‌ನ ಅಸಿಸ್ಟೆಂಟ್ ರಿಜಿಸ್ಟ್ರಾರ್‌ರವರಿಗೆ ರವಾನಿಸಿ ಬೆಂಗಳೂರು ಉತ್ತರ ತಾಲ್ಲೂಕು ಸಹಕಾರ ಸಂಘಗಳ ಎಕ್ಸ್‌ಟೆನ್‌ಸನ್ ಆಫೀಸರ್‌ರವರ ಶಿಫಾರಸಿನ ಮೇರೆಗೆ ಅಸಿಸ್ಟೆಂಟ್ ರಿಜಿಸ್ಟ್ರಾರ್‌ರವರು ಡೆಪ್ಯುಟಿ ರಿಜಿಸ್ಟ್ರಾರ್‌ರವರಿಗೆ ಶಿಫಾರಸ್ಸು ಮಾಡಲಾಗಿ ಅವರು ಕರ್ನಾಟಕ ರಾಜ್ಯದ ಸಹಕಾರ ಸಂಘಗಳ ರಿಜಿಸ್ಟ್ರಾರ್‌ರವರಿಗೆ ಶಿಫಾರಸ್ಸು ಮಾಡಲಾಗಿ ಬೆಂಗಳೂರು ನಗರ ಜಿಲ್ಲಾ ಡೆಪ್ಯುಟಿ ರಿಜಿಸ್ಟ್ರಾರ್‌ರವರು ಸಂಘವನ್ನು ನೊಂದಾಯಿಸಿಕೊಂಡರು. 1982 ರಿಂದ 1984 ರೊಳಗೆ ಈ ಕೆಲಸವನ್ನು ತ್ವರಿತರಗತಿಯಿಂದ ಸಾಧಿಸಲಾಯಿತು. ಈ ಎಲ್ಲಾ ಕೆಲಸಗಳನ್ನು ಮುಗಿಸಿದನಂತರ ನೊಂದಾಯಿಸಿಕೊಂಡ ಕೂಡಲೇ ಸಂಘದ ಪ್ರಥಮ ಮಹಾಸಭೆಯನ್ನು ಆಗಿನ ಕರ್ನಾಟಕ ರಾಜ್ಯದ ಅರಣ್ಯ ಸಚಿವರು ಈಗಿನ ಸಣ್ಣ ಕೈಗಾರಿಕೆಗಳ ಸಚಿವರೂ ಆದ ಮಾನ್ಯ ಶ್ರೀ ಜೀವಿಜಯರವರ ಅಧ್ಯಕ್ಷತೆಯಲ್ಲಿ ತಾ. 16–4–84ನೇ ಬುಧವಾರ ಸಂಜೆ 5 ಗಂಟೆಗೆ ಪ್ರಥಮ ಮಹಾಸಭೆಯನ್ನು ನಡಿಸಲಾಯಿತು. ಈ ಸಂಘದ ಹೆಸರನ್ನು ಕೆಂಪೇಗೌಡ ರೂರಲ್ ಹೌಸ್ ಬಿಲ್ಡಿಂಗ್ ಕೋ–ಅಪರೆಟಿವ್ ಸೊಸೈಟಿ (ಲಿ.) ಬೆಂಗಳೂರು ಎಂದು ನೊಂದಾಯಿಸಿ ಆ ಸಭೆಯಲ್ಲಿ ಅಧ್ಯಕ್ಷರನ್ನು ಮತ್ತು ಇತರ ಡೈರೆಕ್ಟರುಗಳನ್ನು ಸರ್ವಾನುಮತದಿಂದ ಚುನಾಯಿಸಲಾಯಿತು. ಈ ಸಾಲಿಗೆ ಶ್ರೀ ಪೂಜಾರಿ ಮೊಣ್ಣಪ್ಪನವರನ್ನು ಅಧ್ಯಕ್ಷರನ್ನಾಗಿ ಆರಿಸಲಾಯಿತು. ಈ ಮಧ್ಯೆ ಜಕ್ಕೂರಿನ ಎರಡು ಸರ್ವೆ ನಂಬರಿನ ಜಮೀನುಗಳ ಮಾಲೀಕರು ತಮಗೆ ತುರ್ತಾಗಿ ಹಣಬೇಕೆಂದು ಕೇಳಿದ ಮೇಲೆ ಸಹಕಾರಿ ಸಂಘವು ವ್ಯವಸಾಯ (Agricultural) ಜಮೀನನ್ನು ವ್ಯವಸಾಯೇತರ ಜಮೀನಾಗಾಗಿ ಪರಿವರ್ತನೆ ಮಾಡದೆ ಕ್ರಯಕ್ಕೆ ಪಡೆದುಕೊಳ್ಳುವುದಕ್ಕೆ ಸಾಧ್ಯವಿಲ್ಲದ್ದರಿಂದ ಸಂಘದ ಪರವಾಗಿ ಡಾ. ಕಾಯರಮಾರ್ ವೀರಪ್ಪಗೌಡರ ಹೆಸರಿನಲ್ಲೂ ಇನ್ನೊಂದು ಸರ್ವೆ ನಂಬರಿನ ಜಮೀನನ್ನು ಶ್ರೀ ಪೂಜಾರಿ ಪೂವಯ್ಯನವರ ಹೆಸರಿಗೆ ಕ್ರಯ ಪತ್ರವನ್ನು ಮಾಡಿಸಿಕೊಳ್ಳಲಾಯಿತು. ಮತ್ತೊಂದು ಸರ್ವೆ ನಂಬರಿನ ಜಮೀನಿನ ಮಾಲೀಕರು ಮೃತರಾದುದರಿಂದ ಅವರ ಧರ್ಮಪತ್ನಿಯವರಿಂದ ಜನರಲ್ ಪವರ್ ಆಫ್ ಅಟಾರ್ನಿಯನ್ನು ಪಡೆದುಕೊಂಡು ಮೈನರ್ ಆಸ್ತಿಯನ್ನು ಕೊಂಡುಕೊಳ್ಳಲು ಕೋರ್ಟಿಗೆ ಅರ್ಜಿಸಲ್ಲಿಸಲಾಗಿದೆ.

ಶ್ರೀಗಂಧದ ಕಾವಲ್ ಮತ್ತು ಲಗ್ಗೇರಿ ಜಮೀನನ್ನು ಮಾಲೀಕರಿಂದ ಜನರಲ್ ಪವರ್ ಆಫ್ ಅಟಾರ್ನಿಯನ್ನೂ ಒಪ್ಪಂದ ಪತ್ರ ಮತ್ತು ಪ್ರಮಾಣ ಪತ್ರವನ್ನು ತೆಗೆದುಕೊಂಡು ಪೂರ್ತಿ ಕ್ರಯವನ್ನು ಸಲ್ಲಿಸಿ ಎಲ್ಲಾ 23 ಎಕ್ರೆ ಜಮೀನನ್ನು ಸಂಘದ ಸ್ವಾಧೀನ ತೆಗೆದುಕೊಳ್ಳಲಾಗಿತು.

ಮೇಲೆ ಕಾಣಿಸಿದ ಜಮೀನುಗಳ ವ್ಯವಸಾಯ ಜಮೀನುಗಳಾದುದರಿಂದ ಅವುಗಳನ್ನು ವ್ಯವಸಾಯೇತರ ಜಮೀನುಗಳಾಗಿ ಪರಿವರ್ತಿಸಲು ಜನತಾ ಸರ್ಕಾರ ಅಧಿಕಾರಕ್ಕೆ ಬಂದುದರಿಂದ ಸರ್ಕಾರದ ಹೊಸ ನೀತಿಯ ಅನುಗುಣವಾಗಿ ಗೃಹ ನಿರ್ಮಾಣ ಸಹಕಾರ ಸಂಘಗಳು ಬೆಂಗಳೂರಿನಲ್ಲಿ ಲೆಕ್ಕವಿಲ್ಲದಷ್ಟು ಹುಟ್ಟಿಕೊಂಡಿರುವುದರಿಂದ ಅಪ್ಪಟವಾದ ಸಂಘಗಳನ್ನು ಪತ್ತೆ ಹಚ್ಚಲು ಮೂವರಿಂದ ಕೂಡಿದ ಸಮಿತಿಯನ್ನು ರಚಿಸಿ ಯಾವ ಸಂಘವು ನಿಜವಾದ ಮನೋಭಾವದಿಂದ ಕೆಲಸ ಮಾಡುತ್ತಿದೆ ಎಂಬುದನ್ನು ಕಂಡು ಇನ್ನುಮುಂದೆ ಹೊಸದಾಗಿ ಗೃಹ ನಿರ್ಮಾಣ ಸಹಕಾರ ಸಂಘಗಳನ್ನು ನೊಂದಾಯಿಸಲಾಗದೆಂದು ಸರ್ಕಾರಿ ಆಜ್ಞೆ ಹೊರಡಿಸುವುದರೊಳಗಾಗಿ ಈ ಸಂಘವು ನೊಂದಾಯಿಸಿಕೊಳ್ಳಲ್ಪಟ್ಟಿತು ಜುಲೈ 1984ರ ನಂತರ ಯಾವ ಗೃಹನಿರ್ಮಾಣ ಸಹಕಾರ ಸಂಘವನ್ನು ಸರ್ಕಾರ ನೊಂದಾಯಿಸಲಿಲ್ಲ.

ಈ ರೀತಿಯ ನೀತಿಯಿಂದಾಗಿ ಸ್ವಲ್ಪ ಸಮಯ ಕಾಯುವಂತಾಗಿ ವ್ಯವಸಾಯೇತರ ಜಮೀನಾಗಿ ಪರಿವರ್ತಿಸುವುದಕ್ಕೆ ಅರ್ಜಿಯನ್ನು ಸಲ್ಲಿಸಲಾಯಿತು. 1983 ನವಂಬರ ತಿಂಗಳಲ್ಲಿ ಶ್ರೀ ಬಿ. ಎ. ಗೌಡರನ್ನು ಅಧ್ಯಕ್ಷರನ್ನಾಗಿ ಸರ್ವಾನುಮತದಿಂದ ಆರಿಸಲಾಯಿತು. ತಾ॥ 9–12–84ರಲ್ಲು ಈ ಸಂಘದ ದ್ವಿತೀಯ ಸರ್ವ ಸದಸ್ಯರ ಮಹಾ

ಸಭೆಯನ್ನು ಹೋಟೆಲ್ ನ್ಯೂ ಕೃಷ್ಣ ಭವನದಲ್ಲಿ ಜರಗಿಸಲಾಯ್ತು. ಶ್ರೀ ಬಿ. ಎ. ಗೌಡರು ಮಹಾಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು.

ತಾ॥ 27–10–85 ರಲ್ಲು ಹೋಟೆಲ್ ಟೂರಿಸ್ಟ್‌ನಲ್ಲಿ ಶ್ರೀ ಬಿ. ಎ. ಗೌಡರ ಅಧ್ಯಕ್ಷತೆಯಲ್ಲಿ ಸಂಘದ ತೃತೀಯ ಸರ್ವ ಸದಸ್ಯರ ಮಹಾಸಭೆಯನ್ನು ಜರಗಿಸಲಾಯ್ತು.

ತಾ॥ 22–3–86 ರಂದು ನಮ್ಮ ಸಂಘದ ಅಧ್ಯಕ್ಷರಾದ ಶ್ರೀ ಬಿ. ಎ. ಗೌಡರು ನಿಧನರಾದರು. ಅವರ ಆತ್ಮಶಾಂತಿಗಾಗಿ ಸಂತಾಪ ಸೂಚಕ ಸಭೆಯನ್ನು 25–3–86ಕ್ಕೆ ಜರುಗಿಸಲಾಯ್ತು.

ತಾ॥ 14–4–86 ರಲ್ಲು ಶ್ರೀ ಕೆ. ಲಕ್ಷ್ಮಣಗೌಡರನ್ನು ಸಂಘದ ಅಧ್ಯಕ್ಷರನ್ನಾಗಿ ಸರ್ವಾನುಮತದಿಂದ ಆರಿಸಲಾಯ್ತು.

ತಾ॥ 28–9–86 ರಲ್ಲು ಸಂಘದ ನಾಲ್ಕನೆ ಸರ್ವ ಸದಸ್ಯರ ಮಹಾಸಭೆಯನ್ನು ಶ್ರೀರಾಮಕೃಷ್ಣ ಲಾಡ್ಜ್‌ನಲ್ಲಿ ಶ್ರೀ ಕೆ. ಲಕ್ಷ್ಮಣಗೌಡರ ಅಧ್ಯಕ್ಷತೆಯಲ್ಲಿ ಜರುಗಿತು. ಪರಿಶೋಧಿಸಲ್ಪಟ್ಟ 1983–84 ನೇ ಮತ್ತು 1984–85ರ ಸಾಲಿನ ಲೆಕ್ಕಪತ್ರಗಳನ್ನು ಸಭೆಯಲ್ಲಿ ಹಾಜರ ಪಡಿಸಿ ಸರ್ವಾನುಮತದಿಂದ ಅನುಮೋದಿಸಲಾಯ್ತು.

ತಾ॥ 30–9–87ರಲ್ಲು ಸಂಘದ 5ನೇ ಸರ್ವ ಸದಸ್ಯರ ಮಹಾಸಭೆಯನ್ನು ಶ್ರೀ ರಾಮಕೃಷ್ಣ ಲಾಡ್ಜ್‌ನಲ್ಲಿ ಶ್ರೀ ಲಕ್ಷ್ಮಣಗೌಡರ ಅಧ್ಯಕ್ಷತೆಯಲ್ಲಿ ಜರುಗಿತು. 1985–86 ನೇ ಸಾಲಿನ ಪರಿಶೋಧಿಸಲ್ಪಟ್ಟ ಲೆಕ್ಕ ಪತ್ರಗಳನ್ನು ಸಭೆಯಲ್ಲಿ ಮಂಡಿಸಿ ಸರ್ವಾನುಮತದಿಂದ ಅನುಮೋದಿಸಲಾಯಿತು. ಇದೇ ಮಹಾಸಭೆಯಲ್ಲಿ ಸಹಕಾರಿ ಇಲಾಖೆಯ ರಿಜಿಸ್ಟ್ರಾರ್‌ರವರ ಆದೇಶದಂತೆ 9 ನಿರ್ದೇಶಕರನ್ನು ಸರ್ವಾನುಮತದಿಂದ ಅವಿರೋಧವಾಗಿ ಆಯ್ಕೆ ಮಾಡಲಾಯಿತು. ಈ ಆಡಳಿತ ಮಂಡಳಿಯ ನಿರ್ದೇಶಕರು ಕರ್ನಾಟಕ ಸರಕಾರದ ಆದೇಶದಂತೆ 3 ವರ್ಷಗಳವರೆಗೆ ಅಧಿಕಾರದಲ್ಲಿರುತ್ತಾರೆ.

ಈ ಹಿಂದೆ ಹೇಳಿದಂತೆ ಬೆಂಗಳೂರು ವಿಶೇಷ ಜಿಲ್ಲಾಧಿಕಾರಿಗಳಿಂದ ಆಜ್ಞೆಯಾಗಿ ಸಿಗಲು ಸ್ವಲ್ಪ ಸಮಯ ಕಾಯ್ಬೇಕಾಗಿ ಬಂತು. ಕೊನೆಗೆ ಜಕ್ಕೂರಿನ ಒಂದು ಸರ್ವೆ ನಂಬರನ್ನು ಪೂರ್ತಿಯಾಗಿಯೂ ಉಳಿದ 4 ಸರ್ವೆ ನಂಬರುಗಳಲ್ಲಿ ಮೂರಕ್ಕೆ ಪ್ರತಿ ಸರ್ವೆ ನಂಬರುಗಳಲ್ಲಿ ಒಂದೊಂದರಲ್ಲಿ ಮೂವತ್ತು ಗುಂಟೆ ಜಮೀನುಗಳನ್ನು ಮಾತ್ರ ವ್ಯವಸಾಯೇತರ ಜಮೀನುಗಳೆಂದು ಪರಿವರ್ತಿಸಲಾದುದರಿಂದ ಈ ರೀತಿಯ ವಿಶೇಷ ಜಿಲ್ಲಾಧಿಕಾರಿಗಳ ಆಜ್ಞೆಯ ವಿರುದ್ಧ ಕರ್ನಾಟಕ ಅಪೀಲು ನ್ಯಾಯಾಧೀಕರಣಕ್ಕೆ ಮೇಲ್ಮನವಿಯನ್ನು ಸಲ್ಲಿಸಲಾಗಿ ಸದ್ರಿ ನ್ಯಾಯಾಧೀಕರಣದಲ್ಲಿ ಈಗ ಒಂದು ವರ್ಷಗಳಿಂದ ನ್ಯಾಯಾಧೀಶರ ಹುದ್ದೆ ಖಾಲಿ ಇರುವುದರಿಂದ ಬೇರೆ ನ್ಯಾಯ ಪೀಠಕ್ಕೆ ವರ್ಗಾಯಿಸಲು ಪ್ರಯತ್ನಿಸಲಾಗಿದೆ.

ಈ ಮೇಲಿನ ಕಾರಣಗಳಿಂದ 1984 ರಿಂದ ಇಲ್ಲಿಯವರೆಗೆ ಸಂಘವು ಕ್ರಯಕ್ಕೆ ಪಡೆದುಕೊಂಡ ಜಮೀನಿನ ಪರಿವರ್ತನೆ ಸ್ಥಗಿತಗೊಳ್ಳುವುದಕ್ಕೆ ಕಾರಣವಾಯಿತಲ್ಲದೆ ಸಂಘದ ಪದಾಧಿಕಾರಿಗಳು ಈ ವಿಷಯದಲ್ಲಿ ಅತೀಕಾತುರದಿಂದ ಕೆಲಸ ಮಾಡುತ್ತಿದ್ದಾರೆ, ಇದು ಶೀಘ್ರವೇ ಕಾರ್ಯಗತವಾಗಲೆಂದು ಹಾರೈಸುತ್ತೇವೆ.

# ಸಂಘದ ಪದಾಧಿಕಾರಿಗಳು 1982 ರಿಂದ 1984ರ ವರೆಗೆ

| | | |
|---|---|---|
| 1. | ಶ್ರೀ ಪೂಜಾರಿ ಮೊಣ್ಣಪ್ಪನವರು | ಮುಖ್ಯ ಪ್ರವರ್ತಕರು |
| 2. | ಡಾ॥ ಕಾಯರಮಾರ್ ವೀರಪ್ಪಗೌಡರು | ಪ್ರವರ್ತಕರು |
| 3. | ಶ್ರೀ ದೇವಜನ ಗಣಪತಿಯವರು | " |
| 4. | ಪೂಜಾರಿ ಪೂವಯ್ಯನವರು | " |
| 5. | ಡಾ॥ ಪಡ್ಡಂಬೈಲು ಮುದ್ದಪ್ಪಗೌಡರು | " |
| 6. | ಶ್ರೀ ಹೊದ್ದೆಟ್ಟಿ ಭವಾನಿಶಂಕರ್ | " |
| 7. | " ಪೂಜಾರಿ ಬೋಪಯ್ಯನವರು | " |
| 8. | " ಪಿ. ತಮ್ಮಪ್ಪನವರು | " |
| 9. | " ಪಿ. ಓಂಪ್ರಕಾಶರವರು | " |
| 10. | " ಅಮೆರಾಮಣ್ಣಗೌಡರು | " |
| 11. | " ತಳೂರು ಮೊಣ್ಣಪ್ಪನವರು | " |
| 12. | " ಸಂಗಾರು ನಾಣಯ್ಯನವರು | " |
| 13. | " ದಂಬೆಕೋಡಿಆನಂದನವರು | " |
| 14. | " ಡಿ. ಆನಂದರವರು | " |
| 15. | " ಬಿ. ಪಿ. ಪೊನ್ನಪ್ಪನವರು | " |
| 16. | " ನೀರಂಪಾಡಿ ರಾಮಚಂದ್ರನವರು | " |
| 17. | " ಕಾಯರಮಾರ್ ರವೀಂದ್ರನಾಥರವರು | ಲೆಕ್ಕಪರಿಶೋಧಕರು |
| 18. | " ಕೋಳುಮಾಡ ತಮ್ಮಯ್ಯನವರು | ಕಾರ್ಯದರ್ಶಿಗಳು |

## 1984 – 85

| | | |
|---|---|---|
| 1. | ಶ್ರೀ ಪಿ. ಎ. ಮೊಣ್ಣಪ್ಪನವರು | ಅಧ್ಯಕ್ಷರು, ನಿರ್ದೇಶಕರು |
| 2. | ಡಾ॥ ಪಿ. ಮುದ್ದಪ್ಪಗೌಡರು | ಖಜಾಂಜಿಗಳು |
| 3. | ಶ್ರೀ ಕೆ. ವಿ. ರವೀಂದ್ರನಾಥರವರು | ಲೆಕ್ಕ ಪರಿಶೋಧಕರು |
| 4. | ಡಾ॥ ಕೆ. ವೀರಪ್ಪಗೌಡರು | ನಿರ್ದೇಶಕರು |
| 5. | ಶ್ರೀ ಬಿ. ಎ. ಗೌಡರು | " |
| 6. | ಶ್ರೀ ಯನ್. ಆರ್. ನಾಣಯ್ಯನವರು | " |
| 7. | ಶ್ರೀಮತಿ ಜಯಲಕ್ಷ್ಮಿ ಮುದ್ದಪ್ಪನವರು | " |

| | | |
|---|---|---|
| 8. | ಶ್ರೀಮತಿ ಲೀಲಾವತಿಯವರು | ನಿರ್ದೇಶಕರು |
| 9. | ಶ್ರೀ ಪಿ. ಗಿರಿಯಪ್ಪನವರು | ” |
| 10. | ಶ್ರೀಮತಿ ತಾರಾ ಪೂವಯ್ಯನವರು | ಕಾರ್ಯದರ್ಶಿ |

**1985 – 86**

| | | |
|---|---|---|
| 1. | ಶ್ರೀ ಬಿ. ಎ. ಗೌಡರು | ಅಧ್ಯಕ್ಷರು |
| 2. | ಶ್ರೀ ಕೆ. ವಿ. ರವೀಂದ್ರನಾಥರವರು | ಖಜಾಂಚಿ |
| 3. | ಡಾ॥ ಪಿ. ಮುದ್ದಪ್ಪಗೌಡರು | ಲೆಕ್ಕ ಪರಿಶೋಧಕರು |
| 4. | ಡಾ॥ ವೀರಪ್ಪಗೌಡರು | ನಿರ್ದೇಶಕರು |
| 5. | ಶ್ರೀ ಪಿ. ಎ. ಪೊಣ್ಣಪ್ಪನವರು | ” |
| 6. | ” ಯನ್, ಆರ್. ನಾಣಯ್ಯನವರು | ” |
| 7. | ” ಕೆ. ಲಕ್ಷ್ಮಣಗೌಡರು | ನಿರ್ದೇಶಕರು/ಅಧ್ಯಕ್ಷರು |
| 8. | ” ಪಿ. ಕೆ. ಪೂವಯ್ಯನವರು | ನಿರ್ದೇಶಕರು |
| 9. | ” ಪಿ. ಗಿರಿಯಪ್ಪನವರು | ” |
| 10. | ” ಎ. ರಾಮಣ್ಣಗೌಡರು | ಕಾರ್ಯದರ್ಶಿ |

**1986–87 — 87–88 — 1989–90**

| | | |
|---|---|---|
| 1. | ಶ್ರೀ ಕೆ. ಲಕ್ಷ್ಮಣಗೌಡರು | ಅಧ್ಯಕ್ಷರು |
| 2. | ” ಕೆ. ವಿ. ರವೀಂದ್ರನಾಥರವರು | ಖಜಾಂಚಿ |
| 3. | ಡಾ॥ ಪಿ. ಮುದ್ದಪ್ಪಗೌಡರು | ಲೆಕ್ಕ ಪರಿಶೋಧಕರು |
| 4. | ಡಾ॥ ಕೆ. ವೀರಪ್ಪಗೌಡರು | ನಿರ್ದೇಶಕರು |
| 5. | ಶ್ರೀ ಪಿ. ಎ. ಪೊಣ್ಣಪ್ಪನವರು | ” |
| 6. | ” ಪಿ. ಬಸವಯ್ಯನವರು | ” |
| 7. | ಶ್ರೀಮತಿ ಜಯಲಕ್ಷ್ಮಿ ಮುದ್ದಪ್ಪನವರು | ” |
| 8. | ಶ್ರೀ ಪಿ. ಕೆ. ಪೂವಯ್ಯನವರು | ” |
| 9. | ಶ್ರೀ ಯನ್. ಆರ್. ನಾಣಯ್ಯನವರು | ” |
| 10. | ಶ್ರೀ ಎ. ರಾಮಣ್ಣಗೌಡರು | ಕಾರ್ಯದರ್ಶಿ |

ಕಾರ್ಯಕಾರಿ ಮಂಡಳಿ
ಕೆಂಪೇಗೌಡ ಗೃಹ ನಿರ್ಮಾಣ ಸಹಕಾರ ಸಂಘ (ನಿ)
ಬೆಂಗಳೂರು

# ಚುಟುಕಗಳು

### ತಕ್ಕಡೆ ಗೋಪಾಲ

ಇದರ್ಲ್ಲೆ ಇತ್ತ್ ಅಂವ ಆಗ್ಯಂದ್ ಕಮಿಟಿ
ಅಂವ ಕೆಲ್ಸ ಮಾಡ್ದೀಗ ಆ ಸಂಘಲಿ ಗೇರಂಟಿ
ಗೊತ್ತಾತ್ ಅಂವಗೀಗ ಕುಡಕೆ ಅಲ್ಲಿಟ್ಟು
ಇನ್ನ್ ಕರ್ದರೆ ಅವನ ಬಾದೊ ಅದ್‌ಬುಟ್ಟ್ ?

### ಭಾಸ್ಕರ ಗೌಡ

ಅವು ಕರ್ದ್‌ರಿಂದ್ ಅಂವ ಅಲ್ಲಿಗೂ ಹೋದೆ
ಇವು ಕರ್ದ್‌ರಿಂದ್ ಇಂವ ಇಲ್ಲಿಗೂ ಹೋದೆ
ದುಡ್ಡ್ ಕೇಳಿರೆ ಮಾತ್ರ ಎಷ್ಟೊ ಸುಳ್ಳೇಳಿ
ಮೀಸೆ ತಿರ್ಗ್‌ಸುದು ತಿಂದ್ ಯಾಕೆಂತ ಕೇಳಿ ॥

### ಪೂಜಾರಿ ಬೋಪಯ್ಯ

ಅದರ್‍ಲ್ಲೂ ಉಟ್ಟು ಅಂವ ಇದರ್‍ಲ್ಲೂ ಉಟ್ಟು
ಗೊತ್ತಾತ್ ಈಗವನ ಬುದ್ದಿ ಹೇಂಗುಟ್ಟು
ಎರಡ್ ದೋಣಿಲಿ ಕಾಲ್ ಹಾಕಿದವು ಹೀಂಗೆ
ಕೆಳಗೆ ಹೋಗದೆ ಮತ್ತೆ ಮೇಲೆಬಾದೇಂಗೆ ?

### ಕುಯ್ಯಮುಡಿ ಸೋಮಣ್ಣ

ಕೊಡಗು ದಕ್ಷಿಣ ಗೌಡ ಸಂಘದಲಿ ಒಂದು
ಕಟ್ಟಡವು ತಲೆ ಎತ್ತಿ ನಿಂತಿಹುದು ಇಂದು
ನಮ್ಮಲಿದೆ ಒಗ್ಗಟ್ಟು ಎಂಬುದಕ್ಕೆ
ಕಟ್ಟಡವೆ ಸಾಕ್ಷಿಯಿದೆ ನಂಬೊದಕ್ಕೆ ॥

### ಹೆಚ್. ಬಿ. ಬಿ.

ಸಂಘದೇಳಿಗೆಗೆಂದು ಮಾಡುವವ ಕೆಲಸ
ತೆಗಳಲೀ ಹೊಗಳಲವ ನಮಗಿಲ್ಲ ವಿರಸ
ಸಂಘದೀ ಗೊಡವೆಯಲಿ ಅವನೆಂದೂ ಇಲ್ಲ
ಇನ್ಯಾಕೆ ತೆಗಳವನು ಸಂಘದವರನೆಲ್ಲಾ ?

### ಪೂಜಾರಿ ಪೂವಯ್ಯ

ಆ ಸಂಘ ಈ ಸಂಘ ಬೇರೆಂತ ಇಲ್ಲೆಲ್ಲಿ
ಕೊಡಗು ಮಂಗ್ಳೂರೊವು ಎಲ್ಲ ಒಂದೆ
ಅಂದಾದ ಇಬ್ಬಾಗ ಒಂದಾಗಿ ಇಂದುಟ್ಟು
ಹೇಳುತೊಳೂ ನಾವೆಲ್ಲ ಈಗ ಒಂದೆ ॥

### ಹೆಚ್. ಬಿ. ಬಿ.

ನಾ ಬರೆವೆ ಕವನವೊ, ಕಥೆಯೊ ಇರಬಹುದು
ಬರೆಯೆ ನಿನಗರಿಯದಿರೆ ನೀನದನು ಓದು
ನಾ ಬರೆವೆ ಕವನಗಳ ತೆಗಳಿನೀ ಹೆಚ್ಚು
ತೋರದಿರು ನಿನಗಿರುವ ಆ ಹೊಟ್ಟೆ ಕಿಚ್ಚು ॥

### ಭವಾನಿ ಶಂಕರ

ಸಣ್ಣ ಜಗಳಗ ಆದು ಸಂಘಲದ್ ಸಾಮಾನ್ಯ
ಅಂತದರ ಕೆಲವಲ್ಲ ದೊಡ್ಡದೇ ಮಾಡಿ
ಸಂಘ ಎರಡುಟ್ಟುಂತ ಸುಮ್ಮನೆ ಅಲ್ಲಿಲ್ಲಿ
ಹೇಳಿಕಂಡ್ ತಿರ್‌ಗಿ ಫಲ ಎನುಟ್ಟು ನೋಡಿ ?

### ಟಿ. ಯುಮ್. ಪೊಣ್ಣಪ್ಪ

ಸಂಘ ಎರಡುಟ್ಟುಂತ ಹೇಳಿದವು ಯಾರ್ ಅದ್
ಸಂಘ ಎರಡೆಲ್ಲ್ಯುಟ್ಟು ? ಇರುದು ಒಂದೆ
ಕೊಡಗ್ ದಕ್ಷಿಣದ ಆ ಕನ್ನಡದ ಸಂಘಂತ
ರಿಜಿಸ್ಟ್ರೇಶನಾಗುಟದ್ ಬಹಳ ಹಿಂದೆ ॥

# ಅಣ್ಣನ ಮರಣದ ಸ್ಮರಣೆ

ಲೇಖಕರು : ಹೊದ್ದೆಟ್ಟಿ ಬೆಳ್ಳಪ್ಪ ಪೆರಾಜೆ

---

[ಆಂಗ್ಲ ಕವಿ ಶ್ರೇಷ್ಠ ಮಿಲ್ಟನ್ ಹೇಳಿದಂತೆ "ಕಾಡಿನಲ್ಲಿರುವ ಅದೆಷ್ಟೋ ಕುಸುಮಗಳು ಉದ್ಯಾನದಲ್ಲಿ ಬೆಳಸಿದ ಹೂಗಳಿಗಿಂತ ಸುವಾಸನೆಯಲ್ಲಿ ಹಾಗೂ ಸೌಂದರ್ಯದಲ್ಲಿ ಹೆಚ್ಚು ಆಕರ್ಷಕವಾಗಿದ್ದರೂ ಅವುಗಳು ಯಾರ ದೃಷ್ಟಿಗೂ ಬೀಳದೆ ಮುರುಟಿ ಹೋಗುತ್ತವೆ" ಎಂಬುದಾಗಿ ಹೇಳುತ್ತಾನೆ. ಕಾಳಿದಾಸನ ಅಭಿಜ್ಞಾನ ಶಾಕುಂತಳಾ ನಾಟಕದಲ್ಲಿ ದುಶ್ಯಂತನು ಶಕುಂತಳೆಯನ್ನು ನೋಡಿದಾಗ "ಅಂತಃ ಪುರದಲ್ಲಿ ಇರುವವರಿಗೂ ದುರ್ಭಲವಾದ ಇಂಥ ಸೌಂದರ್ಯವು ಆಶ್ರಮ ದಲ್ಲಿರುವವರಿಗೆ ಇರುವುದಾದರೆ. ಉದ್ಯಾನದಲ್ಲಿರುವ ಲತೆಗಳನ್ನು ವನದಲ್ಲಿರುವ ಲತೆಗಳು ಹಿಂದೆ ಹಾಕಿದಂತೆಯೇ ಸರಿ" ಎಂಬಂತೆ ಇದೊಂದು ಕುಸುಮ 1947ರಲ್ಲಿ ಕೊಡಗಿನ ಮೂಲೆಯಲ್ಲಿ ಹೊರ ಜಗತ್ತಿನೊಡನೆ ಸಂಪರ್ಕ ಕಠಿಣವಾದ ದಿನಗಳಲ್ಲಿ ಒಬ್ಬ ಹಳ್ಳಿಯ ರೈತರೊಬ್ಬರಿಂದ ರಚಿಸಲ್ಪಟ್ಟ ಭಾಮಿನಿ ಷಟ್ಪದಿಯ ಕವನವು ಮೇಲೆ ಹೇಳಿದ ಉಪಮಾನಕ್ಕೆ ಸಮಾನವಾಗಿದೆ. ಇಂತಹ ಉತ್ತಮ ಕೃತಿಗಳನ್ನು ರಚಿಸುವ ಸಾಮರ್ಥ್ಯ ನಮ್ಮ ಸಮಾಜದ ಬಂಧುಗಳಿಗಿದ್ದರೂ ಅವುಗಳಿಗೆ ತಕ್ಕ ಪ್ರೋತ್ಸಾಹವಿಲ್ಲದೆಯೇ ಇಂತಹ ರತ್ನಗಳೆಷ್ಟು ಭೂಮಾತೆಯ ಗರ್ಭದೊಳಗೆ ಸೇರಿ ದೆಯೊ ತಿಳಿಯದು. ಹೀಗೆ 41 ವರ್ಷಗಳ ಹಿಂದೆ ರಚಿಸಿದ ಈ ಕೃತಿ ಮುದ್ರಣ ವನ್ನು ಕಾಣುತ್ತಿರುವುದು ನಮಗೆಲ್ಲರಿಗೂ ತುಂಬಾ ಹರ್ಷವನ್ನು ತಂದಿದೆ—ಸಂ.]

---

# ಮುನ್ನುಡಿ

ಹೃದಯ ಬಂಧುಗಳೇ,

ಸನ್ 1907ನೆ ಇಸವಿಯಲ್ಲಿ ಉತ್ತರ ಕೊಡಗು ಜಿಲ್ಲಾ ಮಡಿಕೇರಿ ತಾಲೂಕು ಮಡಿಕೇರಿ ನಾಡು ಪೆರಾಜೆಗ್ರಾಮದ ಕುಂಬಳ ಚೇರಿ ಹೊದ್ದೆಟ್ಟಿ ಎಂಬಲ್ಲಿ ಜನ್ಮ ವೆತ್ತಿದ ನನ್ನ ಅಣ್ಣನಾದ ಶ್ರೀ ದಿವಂಗತ ಬೋಜಪ್ಪನವರು 1947ನೆ ಇಸವಿಯಲ್ಲಿ ಮರಣವನ್ನೈದ ಮನ್ಮನ ಪ್ರಲಾಪವನ್ನು ಭಾಮಿನಿ ಶಟ್ಪದಿ ಪದ್ಯರೂಪದಲ್ಲಿ ವಾಚಕ ಮಹಾಶಯರ ಮುಂದಿಡಬೇಕೆಂಬ ಅಲ್ಪವಾದ ಭಾವನೆಯುಃ ಅಧಿಕವಾಗಿ ಹೃದಯದಲ್ಲಿ ಹುದುಗಿ ಕುದಿಯುತ್ತಿದ್ದರೂ ಕನ್ನಡ ಕವಿ ಕೋಗಿಲೆಗಳ ರಸಿಕ ಕಾವ್ಯದ ಕನಕ ರಾಶಿಯೆಡೆಯಲ್ಲಿ ಕಲ್ಲಿದ್ದಲು ಚೂರನ್ನಿರಿಸಿ ಕಾಗೆ ಕೂಗಿದಂತಾಗು ವುದೆಂಬ ಅಸಹ್ಯ ಭಾವದ ಮನ ಸಂಕೋಚದ ಬಹು ನಾಚಿಕೆಯಿಂದ ತಲೆಭಾಗಿ ದಲ್ಲದೆ, ಆಕಾಶದಲ್ಲಿ ಗರುಡ ಹಾರುವುದೆಂದು ಅಡಿಯಲ್ಲಿ ಪತಂಗವು ಕೂಡಾ ಚಲಿಸ ಬೇಡವೇ? ಇದೊಂದು ದೃಢ ಚಿತ್ತದಿಂದ ಸುಗುಣ-ದುರ್ಗುಣ, ಅಳಿವುದು-ಉಳಿ ವುದು, ಸ್ಥಿರ–ಅಸ್ಥಿರ, ಒಳ್ಳೆಯದು–ಕೆಟ್ಟದು. ಮಾನ-ಅವಮಾನ ಹುಟ್ಟಿದಕ್ಕೆರಡ ರಿಂದೊಂದೆ ಎಂದೂಹಿಸಿ ಅಣ್ಣನ ನಿರ್ಜೀವದ ಶವವನ್ನು ದಹಿಸಿದ ವಹ್ನಿಯು ಸಜೀವಿಯಾದ ಮರ್ಮಸ್ಥಾನವಾದ ನನ್ನ ಹೃದಯವನ್ನು ಭೇಧಿಸಿ ಸರ್ವಂಗಗಳಲ್ಲೂ ವ್ಯಾಪಿಸಿ ಸುಡುತ್ತಿರುವ ಉರಿಯನ್ನು ತಡೆಯಲಾರದ ಮನಮರುಕದಿಂದಲೂ. ಅಲ್ಪ ವಿದ್ಯಾವಂತನಾಗಿ ಅನುಭವಹೀನನಾದ ಮಂದ ಬುದ್ದಿಯ ಮೂಢನಾದ ನಾನು ಒಂದೇ ಯೋಚನಾಧೀನನಾಗಿ ಹೇಗೆ ಬರೆಯಬೇಕು? ಎಲ್ಲಿಂದ ಆರಂ ಭಿಸಬೇಕು? ಎಲ್ಲಿಗೆ ಸಮಾಪ್ತಿಗೊಳಿಸಬೇಕು? ಯಾವ ರೂಪ ಛಂದಸ್ಸು ಮಾತ್ರೆ ಎಂದರೇನು? ಪ್ರಾಣವೆಂದರೆ ಹೋದದ್ದೆ–ಎನ್ನುವ ಚಿತ್ತ. ಚಂಚಲತೆಯಿಂದ ಹಂಬ ಲಿಸಿ ಹಮ್ಮೈಸಿ, ವಿರಚಿಸಿರುವ ಈ ಪದ್ಯದಲ್ಲಿ ಮನುಷ್ಯ ಪ್ರಾಣಿಯ ಅವಲೋಕನೆ ಯನ್ನು ಮೂಲವನ್ನಾಗಿಸಬೇಕಲ್ಲದೆ, ಸಮೂಲ ಯೋಚಿಸಿದರೆ ಅದಕ್ಕೆಲ್ಲಾ ನಾನು ಅರ್ಹನಲ್ಲವೆಂದು ಕೈ ಜೋಡಿಸಿ ಪೂಜ್ಯರಾದ ಪರಮರಲ್ಲಿ ಪಾಮರನ ವಂದನೆ.

ದಿವಂಗತ

30–8–1947 ಹೆಚ್. ಬೆಳ್ಯಪ್ಪ

ಶ್ರೀ

# ॥ಅಣ್ಣನ ಮರಣ ಸ್ಮರಣೆ॥

## ಅರಿಕೆ

ಆರು ಗ್ರಾಮದಿ ಮೆರೆವ ಕುಂಬಳ
ಚೇರಿ ಊರೊದೊಟ್ಟಿ ಶೂದ್ರರು
ದಾರಿ ತಮ್ಮಣ್ಣೆನ್ನುವವರ ಸಪ್ತಮದ ಕುವರ ।
ಮೀರಿದುತ್ಸಹದಿಂದ ಬರೆದುದ ।
ನಾಗು ಓದುವರಿದನು ಮುದಿದಿಂ ।
ಬಾರಿ ತಪ್ಪುಗಳಿರಲು ತಿದ್ದುವಿದಾರ ಮತಿಯುತರ ॥

ಜನನ 1907

ಮರಣ : 29–8–1947

ಹಾಡಿನ ರಚನೆ : 28–8–1947 30–8–1947

**ಭಾಮಿನಿ ಷಟ್ಪದಿ :**

ಶ್ರೀ ಮನುಪಮ ಮಹಿಮಗೌರೀ ।
ಪ್ರೇಮಧಾಮವಿರಿಂಚಿ ಮುಖಸುರ
ರಮಣೀಯಕಮಕುಟ ನೀರಾಜಿತಾಂಘ್ರಿಯುಗಾ॥
ಆ ಮಹಾ ಕರುಣಾರಸದ ಮಧು ।
ಈ ಮನುಷ್ಯ ಪತಂಗ ಸೇವಾ
ನಾಮನವ ಮಾಡಿರುವೆ ನುಡಿಸುಗೆ ನೀಕೃತಿಯ ಮುದದೀ ॥೧॥

ಅಣ್ಣ ನಿಮ್ಮಯ ಗುಣವ ಬಣ್ಣಿಪ
ರಣ್ಯರಾರೀ ಜಗದಿ ಹೇಮ ।
ಕ್ಕಣ್ಣ ಶಿವನೇ ಮುನಿದೆ ಏಕೆನ್ನಗ್ರಭವನೊಡನೆ ॥
ಸಣ್ಣ ಮಕ್ಕಳಿಗೇನು ಗತಿ ಮುಂ–
ದಣ್ಣ ದೇವನ ಕಣ್ಣ ಮುಚ್ಚಲು
ಮಣ್ಣು ಕೂಡಿಸಬೇಡ ಕರುಣಾ ಸಿಂಧು ಭವ ಬಂಧು ॥೨॥

ಏನಗೈದರದೇನು ಫಲವಿನಿ ।
ತೇನು ತೋರದು ಸಿರಿ ಮುಖದ ಕಳೇ
ಗೇನು ಕುಂದಕ ತಂದೆ ತಂದ್ಯೆ ವಂದಿಸುವೆ ಸಲಹೊ ॥
ಬೇನೆ ಬೆಸನದಿ ಬೆಂದ ಬೇಗುದಿ ।
ಗಾನು ಪವನಲ್ಲಣ್ಣ ದೇವನು ।
ನೀನು ನಿರ್ದಯ ನಾಗದಿರು ನಿಗಮಾದಿ ವಂದಿತನೇ ॥೩॥

ವಂದೆ ತಾಯಿಯ ಬಸುರೊಳಗೆ ನಾ !
ವ್ಹಂದು ಬಹುದಿನ ಸಂದಂದಿಂದಿಗೀ
ಇಂದಿವರ ತೊರೆದಿರುವ ಬಾಳ್ವೆಯು ಬಂದುದೇ ಯೆನಗೇ ॥
ಮುಂದೆ ಅಣ್ಣಾ ಎನುವ ಋಣ ಸಂ ।
ಬ್ಯಂದ ತೀರಿದುದಲ್ತೆ ಹೇಗೋ ।
ಏಂದ ರಕ್ಷಿಸು ರಕ್ಷಿಸಣ್ಣನ ಪ್ರಾಣವಾಯುವನೂ ॥೪॥

ಹೇಳಲಾರೆನು ಮನದ ಮರುಕವ
ಕೇಳಲಾರೆನು ಮನದ ವಾರ್ತೆಯ
ತಾಳಲಾರೆನು ದುಗುಡವನು ನಾನಿರುವ ಪರಿಯುಂತಾ ।
ಹಾಳುಸಿರಿ ಸಾಮ್ರಾಜ್ಯ ಸುಡಲೀ ।
ಬಾಳು ಗೋಳುಗಳೆಲ್ಲ ವನು ನಾ ।
ಬೀಳು ಗೊಟ್ಟೆನು ಬಿಗಿದ ಮೌನದ ಗಾಢೆ ದುಃಖದಲೀ ॥೫॥

ಜನಕ ಜನನಿಯುರೊಂದೆ ಮತ್ತಾ ।
ಜನಿಸಿರುವ ಮನೆಯೊಂದೆ ವಿದ್ಯಾ ।
ಜನನಿಯು ಭವನವದೊಂದೆ ಆಟಗಳೊಂದೇ ಪಾಠಗಳೂ ॥
ಮನಸುಕನಸಾಯ್ತೇನು ಲೋಕದಿ ।
ಇನಿತೆಸಗಲೋಸುಗವೆ ನಮಗೀ ।
ಜನುಮ ವಿತ್ತೆಯ ಜಾನಕೀಪತಿ ರಾಮ ರಘು ರಾಮಾ ॥೬॥

ಕೆಟ್ಟ ನರಲೋಕದಲೀ ಪುಟ್ಟೀ ।
ಹೊಟಿಗಸನವನೀಯಲೋಸುಗ,
ಪಟ್ಟ ಕಷ್ಟಶ್ರಮವ ಹಾ! ಇನ್ನೆಷ್ಟು ಪೇಳುವೆನೂ ॥
ಇಷ್ಟು ಕರುಣಾರಸವ ನಿರಿಸದೆ,
ಕೊಟ್ಟೆ ಮರಣವ ನಣ್ಣ ದೇವಗೇ
ವಿಠ್ಠಲನೆ ನೀ ಕುಠಿಲಗಾರನೆ ಕುಣಿಸಿ ಕೊಂದೆಯಲಾ ॥೭॥

ಯೆನ್ನ ಅಣ್ಣನ ನೋಡ್ವ ಕಣ್ಣಿಗ ।
ಳೆನ್ನೆರಡು ಕುರುಡಾಗಿ ಹೋದುದೆ ।
ಮುನ್ನ ಅಣ್ಣಾ–ಕರೆದ ನಾಲಗೆ ಮುರುಟಿದುದೆ ಶಿವನೆ ॥
ಕನ್ನೆಯರು ಮೊದಲಿಲ್ಲ ತನ್ನಯ
ಉನ್ನತದ ಸಿರಿಯಿಲ್ಲ ಬಳಿಕಾ ।
ತನ್ನ ಪುತ್ರ ಮಿತ್ರ ಭಾಂಧವರನ್ನುಳಿದು ಕಡೆಗೇ ॥೮॥

ನರಳಿ ಹೊರಳೀ ಕರಗಿ ಮರುಗುವ ।
ಪರಿಯನಿರಕಿಸ ಲೊರೆಯ ಲಸದಳ ।
ಸರಸಿರುಹ ಸಂಭವನು ಗೀರಿಪ ಬರಹ ಬಲು ಬಿರಿಸು॥
ನರರನರಲೋಕದಲಿ ತಿರುಗಿಪ ।
ಪರಮ ಸುಖವೆಂಬಂತೆ ತೋರಿಪ ।
ಭರಿತ ನಾಟಕ ಬೇಡನರಹರಿ ಜನ್ಮ ಬೇಡೆನೆಗೇ ॥೯॥

ರಾಜ ಭರತನ ಜನ್ಮ ಭೂಮಿಯೊ ।
ಳ್ಬೋಜನೆಂಬಾ ಪೆಸರಿಸಿಂ ಜನಿ ।
ಸೀ ಜಗದ ಶಿಶುವೈದ್ಯ ಕಲ್ಪಾಂ ಭೋಜನೆಂದೆನಿಸೀ ॥
ಆ ಜವನ ತುತ್ತಾದಿರೇತಕೆ ।
ಸೋಜಿಗವು ನಲ್ವತ್ತು ಪರುಷದಿ ।
ಹೇಜನಾರ್ಥನ ವರುಷ ನೂರಾಯುಷ್ಯವೆಲ್ಲಿಹುದು ॥ ॥೧೦॥

ಹಿರಿಯಾರಾಸ್ತಿಯ ತೊರೆದು ನೀನಿರು ।
ತಿರುವ ಪರಿಯಂ ತಿರುವ ಮೆರೆಯುವ ।
ಸ್ಥಿರದ ಕೀರ್ತಿ ಧ್ವಜವ ಸ್ಥಾಪಿಸಬೇಕೆನುತಲೊಂದೇ ॥
ಗುರಿಯ ಮುಟ್ಟದ ಮುನ್ನಮೇ ಈ ।
ಪರಿಯ ಮರಣವ ತಂದನೇ ಶ್ರೀ ।
ಹರಿಯು ಸಿರ್ದಯ ನಾದನೇ ಈ ವಿಧಿಯು ವಿದಿಸಿದನೇ ॥೧೧॥

ಹೋಯಿತೇ ಬಗೆ ಬಗೆಯ ಭವಣೆಗೆ ।
ಳಾಯಿತೇ ಸ್ವರ್ಗಾಧಿ ಪಟ್ಟವು
ಕಾಯತೋರದ ನಮ್ಮೆಲ್ಲರನು ದುಃಖಾಬ್ಧಿಯೊಳುನೂಕೀ ॥
ಮಾಯವಾದುವೆ ನಿನ್ನ ಪ್ರಾಣಾ ।
ವಾಯು ಪೋದುವೆ ನಯನ ವಾರಿಯ ।
ತೋಯದಲಿ ಮುಳುಗಿಸಿದೆ ಕಿರು ಬಾಲಕರ ದಿನದಿನವೂ ॥೧೨॥

ನೋಡಲಾರೆಯು ಒಮ್ಮೆನೀಮಾ ।
ಕಾಡಲಾರೆಯು ನಿನ್ನ ತನಯರ
ಪಾಡುಗಳನೀ ನುಡಿದು ಒಡಬಡಿಸೊಮ್ಮೆನಮ್ಮೆಲ್ಲಾ ॥
ಆಡುವೆಳೆಶಿಶುಗಳನು ಮತ್ತಾ ।
ರೂಢಿಯೊಳಗಿಪ ಸಕಲ ವೈಭವ ।
ಬೇಡವೆಂದೆ ವಂದೆ ಮನದೊಳಗಿಂದು ಮಲಗಿದಿರೇ ॥೧೩॥

ಭೂಮಿ ಮನೆ ಧನ ತೆಂಗು ಕಂಗನು ।
ಕಾಮಿ ಪರಿಗಿದು ಕಾಣಲೆಂದೆ ।
ಈ ಮನುಜರರಿವಂದದಲಿ ನೀ ಸರ್ವಸ್ವವನು ತೊರೆದೂ
ಆ ಮಹಾ ಕೈವಲ್ಯ ಪದವಿಯು ।
ಪ್ರೇಮದಲಿ ಮೈ ಮರೆತು ಈ ಪರಿ ।
ಭೂಮಿಯೊಳು ಶ್ರೀರಾಮ ! ರಾಮ ! ಧ್ಯಾನ ಮಾಡುವಿರೇ ॥೧೪॥

ಚಂದ್ರನಂತಿಹ ಮುಖವು ನಿತ್ಯಾ
ನಂದ ವಾಂತಿಹ ಮನವು ಮತ್ತಾ ।
ಸುಂದರದ ತನು ಕಾಂತಿ ಸದ್ಗುಣ ಭರಿತ ನಡೆ ನುಡಿಯೂ ।
ಎಂದು ನೋಡುವೆ ನಿನ್ನೊಡನೆ ಇ ।
ನ್ನೆಂದು ಮಾತನಾಡುವವೆನು ಋಣಸ ।
ಮ್ಮಂದ ವಿಂದಿಗೆ ತೀರಿತೇ ಹಾ ! ಅಣ್ಣ ! ಬೋಜಣ್ಣ ॥೧೫॥

ಯಾರ ಕರೆಯುವೆ ಯಾರಿಗು ಸುರುವೆ ।
ಮಾರ ಪಿತ ಮಧು ಸೂಧ ನಾಚ್ಯುತ ।
ಭೂರಿಚಿಂತೆಯು ಬಿತ್ತು ಬಿತ್ತಿದೆ ಹೃದಯ ಧರಣಿಯಲಿ ॥
ಮೂರು ನಾಲ್ಕಂ ತೇಳು ಮಕ್ಕಳು ।
ಸೇರಿ ಮಲಗಿದೆ ತಾಯ ಬಸುರಲಿ
ಆರರಿಯದಂದಲಿ ಪೋದಿರೆ ನಾಲ್ವರೊಂದಿಗೆ ॥೧೬॥

ಸಾಕು ಸಿರಿಸಂಪತ್ತು ಲೋಕದ ।
ಕಾಕು ವೈಭವವೆಲ್ಲ ಸುಡಲೀ ।
ನಾಕುತಿಂಗಳ ನರಳುವಿಕೆಯನು ನೋಡಿ ಸಾಕಾಯ್ತು
ಬೇಕು ಬೇಕೆನುತೆಲ್ಲವನು ಬಲು ।
ಜೋಕೆಯಿಂ ತಂದಿರಿಸಿಕೊಂಡೀ
ಮೂಕತನದವಿವೇಕ ವಾಯ್ತೆಂದೆನುತ ತೆರಳಿದಿರೇ ॥೧೭॥

ಎಷ್ಟು ಹೇಳಿದರೆಷ್ಟು ಕೂಗಿದ ।
ರೆಷ್ಟು ಬಾಗಿದರೆಷ್ಟು ರೇಗಿದ ।
ರೆಷ್ಟು ಫಲ ನರಸೃಷ್ಟಿಯೊಳಗಿದು ಸ್ಪಷ್ಟವಾದುದೆಲೇ ॥
ಒಟ್ಟು ಜನರರಿವಂತೆ ನೀವಸು ।
ಬಿಟ್ಟು ಸ್ವರವನ್ನಡರಲೆನಗಿದು ।
ಕಟ್ಟ ಕಡೆಗಿಹ ಬಟ್ಟದರ್ಪಣ ನಿಮ್ಮ ಮರಣವಲಾ ॥೧೮॥

ಬಂಧುಗಳು ಇದ್ದೇನು ತನುಸ ।
ಮ್ಮಂದದವರಿದ್ದೇನು ನಾನಾ ।
ಬಂಧುರದ ಮಣಿ ವಸನ ಕನಕಗಳಿದ್ದು ಫಲವೇನೂ ॥
ವಂದು ಬೇಡೆನಗಿಂದು ಪರಮಾ
ನಂದ ಕಂದಮುಕುಂದ ನಿನ್ನಯು
ವಂದೆ ಸ್ಮರಣೆಯ ಸುಖದ ಶರಧಿಯೊಳಿರಿಸಿ ಪೊರೆಗೆನ್ನಾ ॥೧೯॥

ಪಟ್ಟಣವು ಮಡಿಕೇರಿಯುದರೊಳು
ಪುಟ್ಟಿದುದು ಪುದುಪಟ್ಟು ಸದನದಿ
ಪುಟ್ಟಬಾಲಕರಾಗಿ ಬೆಳೆದೀದಿನವು ಪರಿಯಂತ ।
ಬಿಟ್ಟು ಪೋಗುವಿರಯ್ಯೊ ನಿಮ್ಮೊಡ ।
ಹುಟ್ಟಿ ನಾನಿನ್ನ್ಯಾಕೆ ಬದುಕಲಿ
ಕಷ್ಟದಾ ಸಾಗರದಿ ನೂಕೀ ನಾಕ ವೇರಿದಿರೇ? ॥೨೦॥

ಬಾಡಿ ಬಸವಳಿದಿರುವ ಸಿರಿ ಮುಖ ।
ನಾಡಿಯಾಡದೆ ಬಳಕುವಾತನು ।
ನೋಡೆ ಕಣ್ಣಾಲಿಗಳು ಮೇಲೊತ್ತಿಹವು ಕಳೆಯುಡಗೀ ।
ನೋಡ ತೀರದು ಒಡಲ ಮುರುಕವ ।
ನಾಡತೀರದು ಅಣ್ಣದೇವನ ।
ಪಾಡ ನೋಡುವ ಯೋಗವಿಂದೆನ ಗೊದಗಿದುದೆ ಶಿವನೇ ॥೨೧॥

ವರ್ಷ ಋತು ಶ್ರಾವಣವು ಬಹುಳು ।
ತ್ಕರ್ಷವಾದುದು ಸಿಂಹ ಮಾಸವು,
ಹರ್ಷವಹುದೆ ಸರ್ವಜಿತು ಸಂವತ್ಸರವು ಬಳಿಕಾ
ದರ್ಶನವ ದಾಯ್ತಣ್ಣನಿಗೇಕ
ರ್ಕಶದ ಕಾಲನ ಕರದ ಪಾಷವು
ಸ್ಪರ್ಷವಾದುದು ಶುಕ್ರವಾರಕೆ ಮಾಸ ಹನ್ನೆರಡು ॥೨೨॥

ಯೋಗ ಸೌಭಾಗ್ಯದಿ ಶ್ರಾವಣ ಕಾಕಿ ।
ಯಾಗಿದೆ ಕರಣ ಕವ್ರಲವ ।
ವಾಗಿ ಏಕಾದಶ ತ್ರಯೋದಶಿ ಶುಕ್ಲಪಕ್ಷವಿದೂ ।
ಮೂಗಿನಲಿ ಸುಯಿಲಡಗಿ ಮುಖಕ ।
ಪ್ಲಾಗಿರಿಸಿ ಕಳೆಯಡಗಿ ತಣ್ಣನ ।
ಆಗ ಭೋಗಗಳೆಲ್ಲ ಮುಗಿದೀ ದಿನವೆ ದುರ್ದಿನವು ॥೨೩॥

ಸಂದುದಿಂದಿಗೆ ಇಹದ ಸಖಿಭವ
ಬಂಧದಿಂ ಪಾರಾದೆ ಪರಮಾ ।
ನಂದದಿಂ ಪರಲೋಕ ಪಥಪಿಡಿದೈದಿದೆಯು ನೀನೂ ।
ಮುಂದೆ ಅಮರಾನಂದ ಪದವಿಯ
ಪೊಂದಿರೆಂದೆನು ತೊಂದೆ ಮನದಲೀ
ನಿಂದು ಹರಸುವೆ ಮನಸುನುಡಿತನುಗಳಲಿ ಮನನೊಂದು ॥೨೪॥

ಆಲಿಸಲಿ ಗುರುಹಿರಿಯರಿದ,
ನಾಲಿಸಲಿ ಅಮರ ಸಕೀಶ ಮನದೊಳ್
ಗಾಲಿಸಲಿ ಶ್ರೀ ಹರಿಯು ಕರುಣದಿ ಶರಣನೆಂದೆನುತ ॥
ಮೇಲೆನಿತು ಸೂರ್ಯಾದಿ ಚಂದ್ರರು ।
ಕಾಲಕಾಲದ ತಾರೆ ನವಗ್ರಹ ।
ಗಳಾಲಿಸುತ ಸಾಯುಜ್ಯ ವಿತ್ತೆಮ್ಮಣ್ಣನನು ಪೊರೆಗುಂ ॥೨೫॥

ಹುಟ್ಟು ಹೊಂದುಗಳೆಂಬ ನಾಟಕ
ವೆಷ್ಟು ಪರಿಪರಿಕಸಲಿತಸದಳ
ವಿಠ್ಠಲಾಚ್ಯುತ ಕೃಷ್ಣ ಕೃಷ್ಣಾರ್ಪಣವೃದೆಂದೆನುತ ।
ಇಷ್ಟು ಕವಿತಲೆಪತ್ತು ಚಮುಕೃತಿ
ಗುಟ್ಟನರಿಯದೆ ಕಷ್ಟದಿಂದಲಿ
ಪುಟ್ಟ ಬಾಲ ಹೊದ್ದೆಟ್ಟಿಯುವ ಬೆಳ್ಯಪ್ಪ ರಚಿಸಿದನು ॥



# ಕೊಡಗು ಗೌಡ ವಿದ್ಯಾ ಸಂಘ ನಡೆದು ಬಂದ ದಾರಿ

---

ಕೊಡಗಿನ ರಮ್ಯ ವಾತಾವರಣವು ಪ್ರಕೃತಿಯ ಅಮೂಲ್ಯವಾದ ಕೊಡುಗೆ. ಹಚ್ಚ ಹಸಿರಿನಿಂದ, ಬೆಟ್ಟ ಗುಡ್ಡಗಳಿಂದ, ನದಿ ಬಯಲುಗಳಿಂದ ಆವೃತವಾದ ಹಾಗೂ ಕಂಗೊಳಿಸುತ್ತಿರುವ ಕೊಡಗು ಹತ್ತು ಹಲವು ಕೃಷಿಗಳ. ಹತ್ತು ಹಲವು ಜನಾಂಗಗಳ ಆಶ್ರಯದಾತೆ, ಈ ಹಲವು ಜನಾಂಗಗಳಲ್ಲಿ ಗೌಡ ಜನಾಂಗವೂ ಒಂದು.

ಕೊಡಗಿನ ಗೌಡರು ವಿಜಯನಗರ ಸಾಮ್ರಾಜ್ಯದಿಂದ ಇಕ್ಕೇರಿ ಸಂಸ್ಥಾನಕ್ಕಾಗಿ, ದಕ್ಷಿಣ ಕನ್ನಡ ಜಿಲ್ಲೆಗೆ ಬಂದು ನೆಲಸಿ ಅಲ್ಲಿಂದ ಕೊಡಗಿನ ರಾಜರ ಪ್ರೋತ್ಸಾಹದ ಮೇರೆ 1800 ರಿಂದೀಚೆಗೆ ಕೊಡಗು ಜಿಲ್ಲೆಗೆ ಬಂದು ನೆಲಸಿ ಕೊಡಗಿನ ರಾಜರಿಂದ, ಜಮ್ಮ. ಜಹಾಗೀರು, ಉಂಬಳಿ ಜಾಗಗಳನ್ನು ಪಡೆದು ಕೊಡಗಿನಲ್ಲಿ ನೆಲಸಿದ ಜನಾಂಗವಾಗಿದೆ.

ಕೊಡಗಿನಲ್ಲಿ ನೆಲೆಪೂರಿದ ಗೌಡ ಜನರಲ್ಲಿ ವಿದ್ಯೆಯನ್ನು ಪ್ರೋತ್ಸಾಹಿಸುವುದಕ್ಕೋಸ್ಕರ ಜನಾಂಗದ ಹಿರಿಯರು, ಅಭಿಮಾನಿಗಳು ಸೇರಿ 1908ರಲ್ಲಿ ಕುಂಬುಗೌಡನ ಕುಶಾಲಪ್ಪನವರ ನೇತೃತ್ವದಲ್ಲಿ ಕೊಡಗು ಗೌಡ ವಿದ್ಯಾ ಸಂಘವನ್ನು ಮಡಿಕೇರಿಯಲ್ಲಿ ಸ್ಥಾಪಿಸಿದರು. ಈ ಸಂಘವು ಇಂದಿಗೂ ಮಡಿಕೇರಿಯಲ್ಲಿ ನಡೆದುಬರುತ್ತಿರುವುದು, 1908ರಲ್ಲಿ ಸ್ಥಾಪನೆಯಾದ ಸಂಘಕ್ಕೆ ಬೇಕಾದ ಬೈಲಾವನ್ನು 1933ರಲ್ಲಿ ರಿಜಿಸ್ಟ್ರಿ ಮಾಡಿಸಲಾಯಿತು. ಆ ಸಮಯದಲ್ಲಿ ನಮ್ಮ ಹಿರಿಯರು ಪ್ರತಿ ಗ್ರಾಮ ಗ್ರಾಮಕ್ಕೆ ಸಂದರ್ಶನಮಾಡಿ ಜನಾಂಗದವರಿಂದ ವಿದ್ಯಾರ್ಜನೆಗೆ ಪ್ರೋತ್ಸಾಹಿಸಿ. ವಿದ್ಯಾರ್ಥಿ ನಿಲಯವನ್ನು ಮಡಿಕೇರಿಯಲ್ಲಿ ಸ್ಥಾಪಿಸಿ ಎಲ್ಲಾ ಅನುಕೂಲತೆಗಳನ್ನು ಒದಗಿಸಿಕೊಟ್ಟರು. ಅಲ್ಲದೆ ಜನರನ್ನು ಎಚ್ಚರಗೊಳಿಸಲು ವಿದ್ಯಾ ಸಂಘದ ಮಹಾಸಭೆಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ನಡೆಸಿಕೊಂಡು ಬಂದ ಹಲವಾರು ನಿದರ್ಶನಗಳಿವೆ.

ನಮ್ಮ ಜನಾಂಗದವರ ವಿದ್ಯಾರ್ಥಿಗಳ ವ್ಯಾಸಂಗಕ್ಕಾಗಿ ಮೇನ್‌ಕಾಂಪೌಂಡ್ ಆಟದ ಮೈದಾನದಬಳಿ ಒಂದು ಕಟ್ಟಡವನ್ನು (ಮೇಲಿನ ಕಟ್ಟಡ) ಪಡೆದು ಗೌಡ ವಿದ್ಯಾರ್ಥಿ ಭವನವನ್ನಾಗಿ ಮಾಡಿ ವಿದ್ಯಾರ್ಜನೆಗೆ ಸ್ಥಳಾವಕಾಶವನ್ನು ಮಾಡಿಕೊಟ್ಟರು. ತದನಂತರ ಸದ್ರಿ ಕಟ್ಟಡದ ಪಕ್ಕದಲ್ಲಿ 1 ಏಕ್ರೆ 20 ಸೆಂಟ್ಸ್ ಜಾಗವನ್ನು ಸರಕಾರದಿ ಮಂಜೂರು ಮಾಡಿಸಿಕೊಂಡು ಅಲ್ಲಿಯೂ ಕೂಡಾ ಒಂದು ಕಟ್ಟಡವನ್ನು ವಿದ್ಯಾರ್ಥಿನಿಯರ ವಸತಿಗೋಸ್ಕರ ಒಂದು ವಿದ್ಯಾರ್ಥಿನಿ ನಿಲಯವನ್ನು ಕಟ್ಟಿಸಲಾಯ್ತು. ಕೊಡಗಿನಲ್ಲಿ ಪ್ರೌಢ ಶಾಲೆಗಳ ಕೊರತೆಯಿದ್ದ ಆ ಸಂದರ್ಭಗಳಲ್ಲಿ ಹಳ್ಳಿ ಗಾಡಿನಲ್ಲಿ ವಾಸಿಸುತ್ತಿದ್ದ ನಮ್ಮ ಜನಾಂಗದ ಬಹುತೇಕ ಮಂದಿಗೆ ವಿದ್ಯಾರ್ಜನೆಗೆ ಸಕಲ ಸೌಕರ್ಯಗಳನ್ನು ಒದಗಿಸಿಕೊಟ್ಟ ನಮ್ಮ ಹಿರಿಯರು ಅಭಿನಂದನಾರ್ಹರು. ಪ್ರಸ್ತುತ ಆ 1-20 ಏಕ್ರೆ ಜಾಗದಲ್ಲಿ 0-30 ಸೆಂಟ್ಸ್ ಜಾಗವನ್ನು ಗೌಡ ಸಮಾಜ, ಮಡಿಕೇರಿ, ಕೊಡಗು ಇವರಿಗೆ ಕೊಟ್ಟು ಸದ್ರಿ ಜಾಗದಲ್ಲಿ ಒಂದು ಭವ್ಯವಾದ ಸಕಲ ಅನುಕೂಲತೆ

ಗಳಿಂದ ಕೂಡಿದ ಒಂದು ಕಲ್ಯಾಣ ಮಂಟಪವನ್ನು ಸುಮಾರು ಹದಿನೈದು ಲಕ್ಷ ರೂಪಾಯಿಗಳ ಖರ್ಚಿನಲ್ಲಿ ಕಟ್ಟಿಸಿ ನಮ್ಮ ಜನಾಂಗದವರಿಗೆ ಅರ್ಪಿಸಿರುವುದು ಒಂದು ಹೆಮ್ಮೆಯ ಸಾಧನೆಯಾಗಿದೆ.

**ಕೊಡಗು ಗೌಡ ವಿದ್ಯಾ ಸಂಘದ ವತಿಯಿಂದ ಮೈಸೂರಿನಲ್ಲಿ ಕಟ್ಟಡ.** ಮೈಸೂರಿನಲ್ಲಿ ವಾಸಿಸುತ್ತಿರುವ ಗೌಡ ಜನತೆಯು ಕೊಡಗು ಗೌಡ ಸಂಘ ಎಂಬ ಸಂಸ್ಥೆಯನ್ನು 10–2–1960 ರಲ್ಲಿ ಸ್ಥಾಪಿಸಿ ಅಲ್ಲಿ ಒಂದು ಕಟ್ಟಡಕ್ಕೆ ಬೇಕಾದ 100 × 220 ಅಡಿ ಜಾಗವನ್ನು ಮೈಸೂರಿನ ಜಯಲಕ್ಷ್ಮಿ ಬಡಾವಣೆಯಲ್ಲಿ ಖರೀದಿಸಿದರು. ಅಲ್ಲಿ 1976 ರಿಂದ 1979ರ ತನಕ ಕೊಡಗು ಗೌಡ ವಿದ್ಯಾ ಸಂಘದ ಕಟ್ಟಡ ಸಮಿತಿಯವರ ಸತತ ಪರಿಶ್ರಮದ ಫಲವಾಗಿ ರೂಪಾಯಿ ಮೂರು ಲಕ್ಷದ ವೆಚ್ಚದಿಂದ ನೂತನ ಮಾದರಿಯ 2 ಕಟ್ಟಡಗಳನ್ನು ವಿದ್ಯಾರ್ಥಿ ನಿಲಯಕ್ಕಾಗಿ ಕಟ್ಟಿಸಿ ರುವರು, ಪ್ರಸ್ತುತ "ಕೊಡಗು ಗೌಡ ವಿದ್ಯಾರ್ಥಿ ನಿಲಯ" ಮೈಸೂರು ಇದರಲ್ಲಿ ಪ್ರತಿವರ್ಷ 30 ವಿದ್ಯಾರ್ಥಿಗಳು ವ್ಯಾಸಂಗಮಾಡಿಕೊಂಡು ಬರುತ್ತಿರುವ ಒಂದು ಶಿಸ್ತಿನ ವಿದ್ಯಾರ್ಥಿನಿಲಯವೆನಿಸಿಕೊಂಡಿದೆ. **ಕೊಡಗು ಗೌಡ ವಿದ್ಯಾ ಸಂಘದಿಂದ ವಿದ್ಯಾರ್ಥಿ ವೇತನ.** ಮೊದಲು ಕೊಡಗು ಗೌಡ ವಿದ್ಯಾ ಸಂಘದಿಂದ ನಮ್ಮ ಜನಾಂಗದವರ ವಿದ್ಯಾಭ್ಯಾಸ ಕ್ಕಾಗಿ ನಮ್ಮ ಹಿರಿಯರು ಜನರಿಂದ ಹಣ ವಸೂಲಿಮಾಡಿ ಸಾಲದ ರೂಪದಲ್ಲಿ ಧನ ಸಹಾಯ ಮಾಡುತ್ತಿದ್ದರು. ಈ ಸಾಲದ ಹಣದ ಸಹಾಯದಿಂದ ನಮ್ಮ ಜನಾಂಗದ ಕೆಲವರು ವಿದ್ಯಾಭ್ಯಾಸ ಮಾಡಿ ಉದ್ಯೋಗಗಳನ್ನು ಪಡೆದಿರುವರು. ಆದರೆ ಈಗ ಅದನ್ನು ನಿಲ್ಲಿಸಿ ನಮ್ಮ ಜನಾಂಗದ ವಿದ್ಯಾರ್ಥಿಗಳು ಪರೀಕ್ಷೆಗಳಲ್ಲಿ ಹೆಚ್ಚಿನ ಅಂಕಗಳನ್ನು ಪಡೆದ ಪ್ರತಿಭಾ ವಂತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನವನ್ನು ಪ್ರತಿವರ್ಷವೂ ಕೊಡುತ್ತಾಬರುತ್ತಿದೆ. ಇದಕ್ಕಾಗಿ ಕೊಡಗು ಗೌಡ ವಿದ್ಯಾ ಸಂಘದಲ್ಲಿ ಶಾಶ್ವತ ವಿದ್ಯಾರ್ಥಿ ವೇತನ ನಿಧಿಗಳನ್ನು ಸ್ಥಾಪಿಸಿದ್ದಾರೆ. ಈಗ ಇಂತಹ ಶಾಶ್ವತ ನಿಧಿಗಳ ಹಣವು ಸುಮಾರು 35,000–00 ಕ್ಕೆ ಏರಿದೆ. ಇದರಿಂದ ಬರುವ ಬಡ್ಡಿ ಸುಮಾರು 3,900–00 ನ್ನು ಏಳನೇ ತರಗತಿ ಯಸ್.ಯಸ್.ಯಲ್.ಸಿ. ಎರಡನೇ ಪಿ.ಯು.ಸಿ. ಅಂತಿಮ ಪದವಿಗಳಲ್ಲಿ ಹೆಚ್ಚು ಅಂಕಗಳನ್ನುಗಳಿಸಿದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಕೊಡಲಾಗುತ್ತಿದೆ. ಪ್ರಸ್ತುತ ನಮ್ಮ ಜನಾಂಗದವರು ಮೃತಪಟ್ಟಾಗ ಅವರ ಹೆಸರಿನಲ್ಲಿ ವಿದ್ಯಾರ್ಥಿ ವೇತನ ನಿಧಿಯನ್ನು ಸ್ಥಾಪಿಸುವುದು ರೂಡಿಯಾಗಿ ಬರುತ್ತಿದೆ. ಮತ್ತು ಮೃತಪಟ್ಟ ವ್ಯಕ್ತಿಗಳ ಹೆಸರನ್ನು ಶಾಶ್ವತವಾಗಿ ಉಳಿಸುವ ಕಾರ್ಯಕ್ರಮವಾಗಿ ನಡೆದು ಬರುತ್ತಿರುವುದು ಪ್ರಶಂಸನಾರ್ಹವಾಗಿದೆ.

ಕೊಡಗು ಗೌಡ ವಿದ್ಯಾ ಸಂಘವು ನಮ್ಮ ಜನಾಂಗದವರಲ್ಲಿ ಅಂದರೆ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಚರಿಸುವ ಸಂಸ್ಕೃತಿ. ಪದ್ಧತಿ, ಆಚಾರ. ವಿಚಾರ, ನಡೆ ನುಡಿಗಳನ್ನು ಅಭ್ಯಸಿಸಿ. ಎಲ್ಲರೂ ಪದ್ಧತಿಗಳನ್ನು ಏಕ ರೀತಿಯಲ್ಲಿ ಆಚರಿಸಲು ಅನುಕೂಲವಾಗುವಂತೆ "ಗೌಡ ಸಂಸ್ಕೃತಿ" ಎಂಬ ಪುಸ್ತಕವನ್ನು 1985 ರಲ್ಲಿ ಪ್ರಕಟಿಸಿ ಪ್ರಥಮ ಗೌಡ ಸಮ್ಮೇಳನ" ಸುಳ್ಯದಲ್ಲಿ ಬಿಡುಗಡೆ ಮಾಡಿ ಸ್ವಜಾತಿ ಭಾಂಧವರಿಗೆ ಪದ್ಧತಿಗಳ ಅನುಸರಣೆ. ಕ್ರಮ ವನ್ನು ತಿಳಿಸಲು ಸಹಾಯ ಮಾಡುವುದು. ಅಲ್ಲದೆ ಈ ಪುಸ್ತಕವು ಪ್ರತಿಯೊಬ್ಬ ಗೌಡನ ಮನೆಯಲ್ಲಿರಬೇಕಾದ್ದು ಅಗತ್ಯ. ಈ ಪುಸ್ತಕವು ಹುಟ್ಟಿನಿಂದ ಸಾಯುವ ತನಕ ಮತ್ತು ಸತ್ತಂತರದ ಪದ್ಧತಿಗಳನ್ನು ಅಲ್ಲದೆ 10 ಕುಟುಂಬ 18 ಗೋತ್ರ ಎಲ್ಲಾ ವಿವರಗಳನ್ನೊಳಗೊಂಡ ಏಕೈಕ ಪುಸ್ತಕವಾಗಿರುತ್ತದೆ. ಕೊಡಗು ಗೌಡ ವಿದ್ಯಾ ಸಂಘದಲ್ಲಿ ನಮ್ಮ ಜನಾಂಗದ ಹೆಚ್ಚಿನವರು ಪಾಲ್ಗೊಂಡು ಸಮಾಜ ಸೇವೆಯಲ್ಲಿ ಸಮರ್ಪಿಸಿಕೊಳ್ಳಬೇಕೆಂಬ ಸದುದ್ದೇಶದಿಂದ ನಮ್ಮ ಸಂಘಕ್ಕೆ ಹೆಚ್ಚಿನ ಸದಸ್ಯರನ್ನಾಗಿ ಮಾಡುವ ಕಾರ್ಯಕ್ರಮವನ್ನಿಟ್ಟುಕೊಂಡು 1981ರಲ್ಲಿ 300 ಸದಸ್ಯರ ಸಂಖ್ಯೆ ಯನ್ನು ಈಗ 1600ಕ್ಕೆ ಏರಿಸಿರುತ್ತೇವೆ. ಅಲ್ಲದೆ ನಮ್ಮ ಆಡಳಿತ ಮಂಡಳಿಯವರಲ್ಲಿ ಹೆಚ್ಚು ಸದಸ್ಯರನ್ನು ಮಾಡಿ ದವರಿಗೆ ಬಹುಮಾನವನ್ನು ಕೊಡುವ ಕಾರ್ಯಕ್ರಮವೂ ಮತ್ತು ಹೆಚ್ಚು ವಿದ್ಯಾರ್ಥಿ ವೇತನ ನಿಧಿಯನ್ನು ಶೇಖರಿಸಿ ದವರಿಗೆ ಬಹುಮಾನ ಕೊಡುವ ಕಾರ್ಯಕ್ರಮವನ್ನಿಟ್ಟುಕೊಂಡಿದ್ದೇವೆ.

ಕೊಡಗು ಗೌಡ ವಿದ್ಯಾ ಸಂಘವು ಸರ್ಕಾರದಿಂದ ½ ಎಕರೆ ಜಾಗವನ್ನು ನಮ್ಮ ಜನಾಂಗದವರು ಮೃತ ಪಟ್ಟಾಗ ಶವಸಂಸ್ಕಾರ ಮಾಡುವುದಕ್ಕೋಸ್ಕರ ಮಂಜೂರು ಮಾಡಿಸಿಕೊಂಡು ಮಡಿಕೇರಿ ಪಟ್ಟಣದಲ್ಲಿ ಅನುಕೂಲತೆ ಯನ್ನು ಒದಗಿಸಿಕೊಟ್ಟಿದೆ. ಅಲ್ಲದೆ ಈ ಶ್ಮಶಾನ ಜಾಗಕ್ಕೆ ಒಂದು ಆವರಣ ಗೋಡೆ ಮತ್ತು ಒಂದು ಚಿತಾಗ್ರಹ ವನ್ನು ದಿ॥ ಚೆರಿಯಮನೆ ಪೊನ್ನಪ್ಪನವರ ಸ್ಮರಣಾರ್ಥ ಅವರ ಮಗಳು ಮತ್ತು ಅಳಿಯ ಪೈಕೇರ ಘನಾವತಿ ಮತ್ತು ಪೊನ್ನಪ್ಪನವರು ರೂಪಾಯಿ 47,000_00 ವೆಚ್ಚದಲ್ಲಿ ಕಟ್ಟಿಸಿ ಕೊಟ್ಟಿರುವರು. ಅವರ ಈ ಸೇವೆಯು ನಮ್ಮ ಜನಾಂಗಕ್ಕೆ ಅವಿಸ್ಮರಣೀಯವಾಗಿದೆ.

ಕೊಡಗು ಗೌಡ ವಿದ್ಯಾ ಸಂಘವು ನಮ್ಮ ಮತ್ತು ಇತರ ಜನಾಂಗದವರ ವಿವಾಹ ನಡೆಸಲು ಅನುಕೂಲ ವಾಗುವಂತೆ ಮಡಿಕೇರಿಯ ಗೌಡಬೋರ್ಡಿಂಗ್‌ನಲ್ಲಿ ರಿಯಾಯಿತಿ ದರದಲ್ಲಿ ವಿವಾಹನಡೆಸಲು ಅನುಕೂಲತೆಗಳನ್ನು ಒದಗಿಸಿಕೊಡಲಾಗುತ್ತಿದೆ. ಮತ್ತು ನಮ್ಮ ಜನಾಂಗದವರಲ್ಲಿ ವಿವಾಹ ಸಮಾರಂಭದಲ್ಲಿ ಆಚರಿಸಲಾಗುವ ಸಾಮಾಜಿಕ ಪಿಡುಗಾದ ಚಪ್ಪರ ಸಮಾರಂಭದ ದುಂದುವೆಚ್ಚವನ್ನು ನಿಲ್ಲಿಸಲು ಪ್ರೋತ್ಸಾಹಿಸಿ, "ಒಂದು ದಿನದ ಸಮಾರಂಭ"ಗಳಿಗೆ ಆದ್ಯತೆಯನ್ನು ಕೊಡಲು ಪ್ರಯತ್ನಿಸುತ್ತಿದೆ. ನಮ್ಮ ಜನಾಂಗದ ಮಾತೃ ಸಂಸ್ಥೆಯಾದ ಕೊಡಗು ಗೌಡ ವಿದ್ಯಾ ಸಂಘವು ಕೊಡಗಿನಲ್ಲಿರುವ ಎಲ್ಲಾ ಸಮಾಜಗಳಿಗೂ ಸಂಸ್ಥೆಗಳಿಗೂ ಪ್ರೋತ್ಸಾಹವೀಯುವುದಲ್ಲದೆ, ಜನಾಂಗದವರನ್ನು ವಿದ್ಯಾವಂತರನ್ನಾಗಿಸುವಲ್ಲಿ ಆದರ್ಶ ವ್ಯಕ್ತಿಗಳನ್ನು ನಿರ್ಮಿಸುವಲ್ಲಿ ಸದಾ ಪ್ರಯತ್ನಿಸುತ್ತಿದೆ. ಇದಕ್ಕೆ ತಮ್ಮೆಲ್ಲರ ಬೆಂಬಲ ಸಹಕಾರ ಕೋರಲಾಗಿದೆ.

## ಕೊಡಗು ಗೌಡ ಸಂಘದ ಅಧ್ಯಕ್ಷರುಗಳು

| | | |
|---|---|---|
| 1. | ದಿ. ಕುಂಬುಗೌಡನ ಕುಶಾಲಪ್ಪನವರು | 1908–1918 |
| 2. | ದಿ. ತೆಕ್ಕಡೆ ಸುಬ್ಬಯ್ಯನವರು | 1918–1922 |
| 3. | ದಿ. ಮೂಟೆರ ಅಣ್ಣಯ್ಯನವರು | 1922–1924 |
| 4. | ದಿ. ಶಿರಕಜೆ ಪೊನ್ನಪ್ಪನವರು | 1924–1925 |
| 5. | ದಿ. ಚೆರಿಯಮನೆ ಕುಶಾಲಪ್ಪನವರು | 1925–1927 |
| 6. | ದಿ. ನಿಡ್ಯಮಲೆ ಮುದ್ದಪ್ಪ, ಬಿ.ಎ.ಬಿ.ಎಲ್. | 1927–1928 |
| | " | 1940–1949 |
| 7. | ದಿ. ತೆಕ್ಕಡೆ ಆನಂದಯ್ಯನವರು | 1928–1932 |
| | " | 1937–1939 |
| 8. | ದಿ. ಬಡ್ಡನ ಮುತ್ತಣ್ಣನವರು | 1932–1934 |
| 9. | ದಿ. ಉಳುವಾರನ ಅಪ್ಪಯ್ಯನವರು | 1934_1936 |

10. ವಿ. ನಿಡ್ಯಮಲೆ ಸೋಮಣ್ಣ ಬಿ. ಎ. ಬಿ. ಎಲ್. 1929–1937
11. ದಿ. ಕೋರನ ದೇವಯ್ಯ ಮಾಜಿ ಶಾಸಕರು 1949–1956
12. ದಿ. ತೋಟಂಬೈಲು ಮಾದಪ್ಪನವರು 1956–1958
13. ದಿ. ಚೆರಿಯಮನೆ ಪೊನ್ನಪ್ಪನವರು 1958–1961
14. ದಂಬೆಕೋಡಿ ಎ. ಚಿಣ್ಣಪ್ಪ ಬಿ.ಕಾಂ.ಬಿಯಲ್. 1961–1964
" 1968–1971
15. ತೋಟಂಬೈಲು ಕೆ. ಚಂಗಪ್ಪ ಬಿ.ಕಾಂ.ಬಿ.ಎಲ್. 1964–1968
16. ಪಾಂಡನ ಡಿ. ಸುಬ್ಬಯ್ಯ (ಮಾಜಿ ಶಾಸಕರು) 1974–1981
17. ಕುದುಪಜೆ ಬಿ. ಕೃಷ್ಣಪ್ಪ ಎಂ.ಎ.ಬಿ.ಎಲ್. 1981 ರಿಂದ



## ಕೊಡಗು ಗೌಡ ವಿದ್ಯಾರ್ಥಿ ಸಂಘದ ವೇತನ ನಿಧಿಗಳು

| | ಹೆಸರು | ಸ್ಥಾಪನೆ | ಅಸಲು | ಬಡ್ಡಿ | ಬೇಂಕ್ |
|---|---|---|---|---|---|
| 1 | ದಿ. ಪಟ್ಟಡನೀಲಪ್ಪ ಮುತ್ತಣ್ಣ | 1977 | 1,000–00 | 100–0– | ವಿಜಯ ಬೇಂಕ್ |
| 2 | ಚೆರಿಯಮನೆ ಕುಶಾಲಪ್ಪ | 1978 | 10,101_00 | 1010–00 | ಕೆನರಾ ಬೇಂಕ್ |
| 3 | ಕೊಡಗು ಗೌಡ ವಿದ್ಯಾ ಸಂಘ | 1979 | 4,000–00 | 400–00 | " |
| 4 | " | 1982 | 1.000–00 | 100_00 | " |
| 5 | ಚೆರಿಯಮನೆ ಬೋಳಮ್ಮ ಪೊನ್ನಪ್ಪ | 1982 | 1,000–00 | 100–00 | ಕಾರ್ಪೊರೇಷನ್ ಬೇಂಕ್ |
| 6 | ಕುದುಪಜೆ ಬಿ. ಕೃಷ್ಣಪ್ಪ | 1984 | 1,000–00 | 115–00 | ಡಿ.ಸಿ.ಸಿ. ಬೇಂಕ್ |
| 7 | ಕೊಡಗುಗೌಡ ವಿದ್ಯಾ ಸಂಘ | 1984 | 1,000–00 | 115–00 | " |
| 8 | ಕಡ್ಯದ ಬಿದ್ದಪ್ಪ | 1984 | 1,000–00 | 115–00 | " |
| 9 | ಚೆರಿಯಮನೆ ಪೊನ್ನಪ್ಪ | 1985 | 1,000–00 | 115–00 | " |

| | ಹೆಸರು | ಸ್ಥಾಪನೆ | ಅಸಲು | ಬಡ್ಡಿ | ಬೇಂಕ್ |
|---|---|---|---|---|---|
| 10 | ಕೋರನ ಪೂಣಚ್ಚ ತಿಲಕ | 1985 | 2,000–00 | 230_00 | ಡಿ.ಸಿ.ಸಿ. ಬ್ಯಾಂಕ್ |
| 11 | ಕೊಡಗು ಗೌಡ ವಿದ್ಯಾ ಸಂಘ | 1985 | 3,000–00 | 330–00 | ವಿಜಯ ಬೇಂಕ್ |
| 12 | ದಿ. ಬಾರನ ಗೌರಮ್ಮ ಮುದ್ದಪ್ಪ | 1986 | 3,000–00 | 345–00 | ಡಿ.ಸಿ.ಸಿ. ಬೇಂಕ್ |
| 13 | ಕುರಂಜಿ ವೆಂಕಟ್ರಮಣ ಗೌಡ | 1986 | 1,000–00 | 115–00 | ವಿಜಯ ಬೇಂಕ್ |
| 14 | ತೆಕ್ಕಡೆ ಕಾವೇರಮ್ಮ ಮಂದಣ್ಣ | 1986 | 1,000–00 | 115–00 | " |
| 15 | ಕೋಳಿಬೈಲು ಬೆಳ್ಳಪ್ಪ | 1986 | 1,000–00 | 115–00 | " |
| 16 | ದಿ. ದೊಡ್ಡಡ್ಕ ದೇವಪ್ಪ | 1986 | 1,000–00 | 115–00 | " |
| 17 | ಮೊಟ್ಟೇರ ಸುಬ್ಬಯ್ಯ ಬೋಜಪ್ಪ | 1986 | 1,000–00 | 115–00 | " |
| 18 | ದಿ. ಕುಂಬುಗೌಡನ ಮುದ್ದಪ್ಪ | 1986 | 1,000–00 | 115–00 | " |
| 19 | ಮೊಟ್ಟೇರ ಯಂ. ಬಸಪ್ಪ | 1987 | 500–00 | 57–50 | " |
| 20 | ತೋಟಂಬೈಲು ಚಂಗಪ್ಪ | 1987 | 1,000–00 | 115–00 | " |
| 21 | ದಿ. ಗುಡ್ಡೇರ ಗಣಪತಿ ಬೋಜಮ್ಮ | 1987 | 1,000–00 | 115–00 | " |
| 22 | ದಿ. ಕುಂಞಳಿರ ಮಾದಪ್ಪ | 1988 | 1,000–00 | 115–00 | " |

ಕುದುಪಜೆ ಬಿ. ಕೃಷ್ಣಪ್ಪ ಎಂ.ಎ.ಬಿ.ಎಲ್.
ಅಧ್ಯಕ್ಷರು
ಕೊಡಗು ಗೌಡ ವಿದ್ಯಾ ಸಂಘ
ಮಡಿಕೇರಿ



# ಕಂಡಿರಾ .ಮಕ್ಕಳ ಮಾರಾಟದ ಸಂತೆ

—ಶ್ರೀ ಯಂ. ಯಂ. ಗಿರಿ
ಮಲ್ಲಾರ

---

(ವರದಕ್ಷಿಣೆ ಎಂಬ ಅಂಟು ರೋಗ ನಮ್ಮ ಸಮಾಜವನ್ನು ಆವರಿಸುತ್ತಾ ಬರುತ್ತಿರುವ ಈ ಕಾಲದಲ್ಲಿ ಅದನ್ನು ಖಂಡಿಸುವವರು ಬೇಕಾದಷ್ಟು ಮಂದಿಯನ್ನು ಕಾಣುತ್ತಿದ್ದೇವೆ. ಆದರೆ ಈ ವಿಷಯದಲ್ಲಿ ನಿಷ್ಠಾವಂತರಾಗಿ ನಡೆಯುವ ಯುವಕರೆಷ್ಟಿದ್ದಾರೆ? ಇದಕ್ಕೆ ಯುವಕರೇ ಕಾರಣವಲ್ಲ. ಸಮಾಜವೂ ಕಾರಣವಾಗಿದೆ. ಹೆಚ್ಚಿನ ತಂದೆ ತಾಯಿಗಳೂ ಇದಕ್ಕೆ ಕಾರಣರಾಗಿದ್ದಾರೆ. ಸಮಾಜದ ಈಗಿನ ಪರಿಸ್ಥಿತಿ ಯುವಕರನ್ನು ವರದಕ್ಷಿಣೆಯ ಕಡೆಗೆ ವಾಲುವಂತೆ ಮಾಡಿ ಸಮಾಜದಲ್ಲಿ ಆರ್ಥಿಕ ಅಸ್ಥಿರತೆ, ವಿದ್ಯಾವಂತ ಯವಕರಲ್ಲಿ ನಿರುದ್ಯೋಗ ಸಮಸ್ಯೆಯೂ ಇನ್ನೊಂದು ಕಾರಣವಾಗಿದೆ. ಗುಣ ನಡತೆಯ ಮೇಲೆ ವ್ಯಕ್ತಿಯನ್ನು ಅಳತೆಮಾಡುವರು ಎಷ್ಟು ಜನರಿದ್ದಾರೆ? ಸಮಾಜದಲ್ಲಿ ಭೌತಿಕ ಪ್ರಗತಿಯ ಮೇಲೆಯೇ ಜನರ ಆಶಕ್ತಿ ಹೆಚ್ಚುತ್ತಿದ್ದು ಅಧ್ಯಾತ್ಮಿಕ ಶಕ್ತಿಯನ್ನು ಅಭಿವೃದ್ಧಿಗೊಳಿಸುವ ಕಾರ್ಯ ಕುಂಟಿತಗೊಂಡಿದೆ. ಇದರೊಡನೆ ದೇಶದಲ್ಲಿ ನಿರುದ್ಯೋಗ ಸ್ಥಿತಿಯೂ ಈಗಿನ ವಿದ್ಯಾಭ್ಯಾಸ ಕ್ರಮವೂ ಯುವಕರು ಈ ರೀತಿಯ ವರದಕ್ಷಿಣೆ ಪಿಡುಗಿಗೆ ಬಲಿಯಾಗಲು ಕಾರಣವಾಗಿದೆ. ಇದಕ್ಕೆ ಶ್ರೀ ಗಿರಿಯವರು ಹೇಳಿದಂತೆ ಯುವಕರಲ್ಲಿ ಆತ್ಮ ವಿಶ್ವಾಸ ಆತ್ಮ ಶಕ್ತಿ ಬೆಳೆಯುವಂತಾಗಬೇಕು. ಶ್ರೀ ಗಿರಿಯವರು ತಮ್ಮ ಲೇಖನದ ಮೂಲಕ ಯುವಕರಲ್ಲಿ ಆತ್ಮ ಶಕ್ತಿಯನ್ನು ಪಡೆಯಲು ಕರೆ ನೀಡಿದ್ದಾರೆ. ಆದರೆ ಈ ಯುವಕರ ಆತ್ಮ ನಿರ್ಧಾರವೊಂದೇ ಸಾಲದು ಅವನು ಸಮಾಜದಲ್ಲಿ ತಲೆಎತ್ತಿ ನಡೆಯಬೇಕಾದರೆ ಅವನ ಆರ್ಥಿಕ ಸ್ಥಿತಿಯನ್ನು ಸುಧಾರಿಸುವ ಯೋಜನೆಗಳು ಕಾರ್ಯಗತವಾಗಬೇಕು. ಯುವಕ ಯುವತಿಯರಿಬ್ಬರೂ ಇದನ್ನು ಅರಿತವರಾಗಿರಬೇಕು. ಸಮಾಜದ ಹಿರಿಯರಾದ ಮುಂದಾಳುಗಳೆನಿಸಿಕೊಂಡವರಿಂದ ಇದರ ಅನುಷ್ಠಾನವಾಗಬೇಕು. ಇದಕ್ಕೆ ಶ್ರೀ ಗಿರಿಯವರಂತಹ ದೃಢ ನಿರ್ಧಾರ ವಿರುವ ಕಷ್ಟ ಖಂಡಿತವಾಗಿ ನುಡಿಯುವ ನಡೆಯುವ ಸಮಾಜದ ಮುಖಂಡರುಗಳ, ತಾತ್ವಿಕರ ಅವಶ್ಯಕತೆ ಇದೆ.) ಸಂ.]

---

ಸಂತೆಯೆಂದ ಮೇಲೆ ಗದ್ದಲವಿರಲೇಬೇಕು. ಗದ್ದಲವಿದ್ದಲ್ಲಿ ಬಡವ ಬಲ್ಲಿದರೊಳಗೆ ವೈಷಮ್ಯವಿರಬೇಕು. ನೂರಾರು ಜನರು ಸೇರಿ ಚದುರುವ ಸ್ಥಳವಾಗಿರಬೇಕು. ಊರು ಯಾವುದಾದರೂ ಏನು ? ನಮ್ಮೂರೇ ಎನ್ನಿ. ಏಕೆಂದರೆ ಒಂದಲ್ಲ ಒಂದು ದಿನ ನಾನೂ ನೀವೂ ಈ ಸಂತೆಯಲ್ಲಿ ಕೊಳ್ಳುವವರಾಗಲೀ, ಮಾರುವವರಾಗಲೀ ಆಗಲೇ ಬೇಕಾಗಿದೆ. ಮನಸ್ಸನ್ನು ಒಂದು ಕ್ಷಣ ಶಾಶ್ವತವಾಗಿರಿಸಿ ಚಿಂತಿಸಿನೋಡಿರಿ. ಈ ಸೃಷ್ಟಿಯ ಆದಿಯಿಂದಲೂ ಆಗಿರುವ ಜೀವಜಂತುಗಳ ಬೆಳವಣಿಗೆಯ ವಿಧಾನವನ್ನು ಬೀಜವೊಂದು ಮಣ್ಣಿನಲ್ಲಿ ಬೆರೆತೊಡನೆಯೇ ಕಾಲಾವಧಿಯಲ್ಲಿ ಮೊಳಕೆ ಒಡೆದು ಗಿಡವಾಗುತ್ತದೆ. ಗಿಡ ಬೆಳೆದು ಮರವಾಗುತ್ತದೆ. ಮರದಲ್ಲಿ ಹೂ ಬಿಟ್ಟು ಕಾಯಿ ತುಂಬುತ್ತದೆ ಕಾಯಿ ಹಣ್ಣಾಗಿ ಬೀಜವನ್ನು ಬಿಟ್ಟು ಕೊಳೆತು ಹೋಗುತ್ತದೆ. ಪುನಃ ಬೀಜ ಇದೇ ವೃತ್ತದಲ್ಲಿ ಕೊನೆಗಾಣುತ್ತದೆ. ಸುತ್ತುವ ಪ್ರಪಂಚದಲ್ಲಿರುವ ಎಲ್ಲಾ ಜಡ ಜೀವಗಳೂ ಈ ಸುತ್ತ ಬರುತ್ತಲೇ ಇವೆ, ಇದರಿಂದಲೇ ನಮ್ಮ ದೃಷ್ಟಿಗೆ ಗೋಚರಿಸುವ ದೃಷ್ಟಿಯಲ್ಲಾ ನಿರಂತರ ಬದಲಾವಣೆಯ ಸಮೂಹವಾಗಿರುವುದು. ಈ ಬುದ್ಧಿ ಜೀವಿ ಎನಿಸಿರುವ ಮನುಷ್ಯನಲ್ಲೂ, ಸೃಷ್ಟಿ ಬೆಳವಣಿಗೆ ಅಂತ್ಯದ ವಿಧಾನವನ್ನು ನೋಡಿ ಬಾಲ್ಯ, ಯೌವನ, ಮುಪ್ಪುಯೆಂಬ ಮೂರು ಜೀವನದ ಮಜಲುಗಳಲ್ಲಿ ಮನುಷ್ಯನ ದೇಹ ಮನಸ್ಸುಗಳೂ ಅವುಗಳ ಶಕ್ತಿ ಸಾಮರ್ಥ್ಯಗಳು ಬದಲಾವಣೆ ಹೊಂದುವು ದಲ್ಲದೆ ಆ ಕಾಲದ ಧರ್ಮವೂ (ನಡೆ–ನುಡಿ) ಬೇರೆ ಬೇರೆಯಾಗುತ್ತದೆ. ಯೌವನವೆಂಬ ಮಧ್ಯಕಾಲದಲ್ಲಿ ಗಂಡು ಹೆಣ್ಣುಗಳ ಆಕರ್ಷಣೆಯಿಂದ ಮುಂದಿನ ಸಂತತಿ ಬೆಳೆಯುತ್ತದೆ. ಇದು ಸೃಷ್ಟಿ ಮುಂದರಿಕೆಗೊಂಡು ನಿಸರ್ಗ ನಿಯಮ ಮನುಷ್ಯನ ಬುದ್ಧಿಯು ಆದಿಯಿಂದ ವಿಕಾಸವಾಗುತ್ತಾ ಬಂದಂತೆ ಉತ್ತಮ ಸಂತಾನ ಉನ್ನತ ಬಾಳ್ವೆಗಾಗಿ ಸಂತಾನ ವರ್ಧಿಸುವ ಯೌವನಸ್ಥೆ ಹೆಣ್ಣು ಗಂಡುಗಳನ್ನು ಸಂಗಾತಿಗಳನ್ನಾಗಿ ಮಾಡಿದರು. ಮುಂದೊಂದು ದಿನ ಮದುವೆ ಯಂತ ಹೆಸರಿಟ್ಟು ಅವರಿಬ್ಬರೂ ಅವರ ಸಂತತಿಯನ್ನೂ ಕುಟುಂಬವೆಂತ ಕರೆದರು. ತಮ್ಮ ತಮ್ಮ ಕುಟುಂಬದ ಶ್ರೇಯೋಭಿವೃದ್ಧಿಗಾಗಿ ಅವರು ಅಜೀವ ಪರಿಯಂತ ಒಗ್ಗೂಡಿಬಾಳುವ ಸಂಪ್ರದಾಯವಾಯ್ತು. ಇಂತಹ ಕುಟುಂಬಗಳ ಕೂಟಕ್ಕೆ ಸಮಾಜವೆಂತ ಹೆಸರಿಟ್ಟು ನಿತ್ಯ ನಡುವಳಿಗಾಗಿ ಹಲವಾರು ನಿಯಮಗಳನ್ನು ತಮಗೆ ತಾವೇ ವಿಧಿಸಿಕೊಂಡರು. ಅದು ಕಾಲಕ್ರಮೇಣ, ಸಾಮಾಜಿಕ ನ್ಯಾಯಶಾಸ್ತ್ರವೆಂತ ಪರಿವರ್ತನೆಯಾಯ್ತು. ಇದು ಬಹಳ ಹಿಂದಿನ ದಿನಗಳಲ್ಲೇ ನಡೆದಿರುವ ಕಾರ್ಯ ಹೀಗೆ ಕಾಲವು ಎಲ್ಲವನ್ನೂ ಬದಲಾಯಿಸುತ್ತದೆಂತಾದ ಮೇಲೆ ಸಮಾಜವೂ ಕಾಲಕ್ಕನುಸರಿಸಿ ಬದಲಾಗಲೇ ಬೇಕಾಗಿದೆ. ಎಲ್ಲ ಕಾಲದೊಂದಿಗೆ ಬದಲಾವಣೆಯಾಗದೋ ಅಲ್ಲಿ ಸಮಾಜದಲ್ಲಿ ದ್ವೇಷ, ಅಸೂಯೆ, ಅಸಹ್ಯ, ಭಾವನೆಗಳು ಬರಲೇಬೇಕು. ಉದಾಹರಣೆಗೆ ನಮ್ಮ ದೇಶದಲ್ಲಿಯೇ ಪುರಾಣವಲ್ಲ ಹಿಂದಿನ ಚರಿತ್ರೆ ಕಾಲದಲ್ಲಿಯೇ ಬಹು ಹಿಂದೆ ಈ ಮದುವೆ ವಿಧಿಯನ್ನು ಪ್ರಾಯಸ್ಥ ವಧುವಿನ ಕೈಯಲ್ಲಿ ಹೂಮಾಲೆ ಕೊಟ್ಟು ಉತ್ಸಾಹಿ ಯುವಕರನ್ನೆಲ್ಲಾ ಒಟ್ಟು ಸೇರಿಸಿ ಹುಡುಗಿಗೆ ಇಚ್ಛೆಯಿರುವ ಹುಡುಗನನ್ನು ಮದುವೆಯಾಗಲು ಸಮಾಜವೂ, ಹೆತ್ತವರೂ. ಅನ್ಕೂಲ ಒದಗಿಸಿ ಕೊಡುತ್ತಿದ್ದರು. ಈ ಪದ್ಧತಿಗೆ "ಸ್ವಯಂವರ" ವೆಂದರೆ ಸ್ವಂತ ಚುನ್ನಾಕೆ ಹಕ್ಕು ಹೆಣ್ಣಿಗೆ ಕೊಟ್ಟಿದ್ದರು. ಐದಾರು ವರ್ಷಗಳ ಅಪ್ರಾಯಸ್ಥ ಮಕ್ಕಳೊಳಗೆ ಮದುವೆ ಮಾಡಿಸುವ ವಿಧಿ ಪ್ರಾರಂಭ ವಾಯ್ತು. ಈ ಪದ್ಧತಿಯಿಂದ ಗಂಡು ಹೆಣ್ಣಿನ ಚುನ್ನಾಕೆಯ ಸಂಪೂರ್ಣ ಹೊಣೆಯನ್ನು ಹೆತ್ತವರು ಮತ್ತು ಸಮಾಜ ವಹಿಕೊಂಡಿತ್ತು. ಈ ಕ್ರಮ ಪ್ರಾಯಃಶ ಹೆಂಗಳೆಯರ ಪತಿವ್ರತ್ಯ, ಪವಿತ್ರತೆಯ ಕುರಿತಾದ ವಿಪರೀತ ಚಿಂತನೆಯಾಗಿರಬಹುದು. ಈ ಪದ್ಧತಿಯನ್ನು ಈ ದೇಶದಲ್ಲೇ ಕಳೆದ ಶತಮಾನದ ಕೊನೆ ದಿನಗಳಲ್ಲಿ ಸರಕಾರವೇ ಸಿದ್ಧವೆಂತ ಕಾನೂನು ರಚಿಸುವಷ್ಟು ಲೋಪ ದೋಷಗಳ ಅನುಭವ ಸಮಾಜಕ್ಕೊದಗಿಸಿತ್ತು. ಕಾರಣ ಹೋದಲ್ಲೆಲ್ಲಾ ಬಾಲ್ಯ ವಿಧವೆಯರ ಪರಿತಾಪ ಸಮಾಜ ಸುಧಾರಕರ ಹೃದಯ ಸುಟ್ಟಿರಬೇಕು. ಬರು ಬುರುತ್ತಾ ನಮ್ಮ ಆಚರಣೆಗಳು ಕಾಲದೊಂದಿಗೆ ಕಾಲು ಹಾಕುತ್ತಿರುವಾಗ ಇಲ್ಲಿ ಏನೋ ಒಂದು ಅಲ್ಪ ಕಾಲಾವಧಿಯಲ್ಲಿ ಹೆಣ್ಣು ಸಂತತಿ ಹೆಚ್ಚಾಗಿ ಗಂಡು ಸಂತತಿ ಕಡಿಮೆಯಾಗಿತ್ತು, ಈ ತುಸು ಏರು ಪೇರಿನ ಸಮಯ ಆಚರಣೆಯಲ್ಲಿ ಹಾಲಿಗೆ ಹುಳಿ ಹಿಂಡಿ ದಂತಾಯ್ತು. ಪ್ರತಿ ಹೆಣ್ಣಿಗೆ ಬೇಕು ಪ್ರತಿ ಗಂಡು ಸಿಕ್ಕುವ ದಾಮಾಶಯವೇ ಕಡಿಮೆಯಿದ್ದಾಗ ವಿಧವೆಯರು ಮರು ಮದುವೆಯಾಗಿ ಎರಡು ಗಂಡನ್ನು ಬಳಸುವ ವಿಧಾನವೂ ಕೂಡಿಕೊಂಡಿತು. ಆಗ ಪೋಷಕರು ತಮ್ಮ ಮಗಳಿಗೆ ಒಂದು ಗಂಡನ್ನು ದೊರಕಿಸಿಕೊಳ್ಳುವ ತರಾ ತುರಿಯಲ್ಲಿ ಗಂಡಿಗೆ ಅಮಿಷೆ ಒಡ್ಡಿ ಒಲಿಸಿಕೊಳ್ಳಲು ಮೊದಲಿಟ್ಟಿತು.

ಇದಕ್ಕೆ ನಿಸರ್ಗವೂ ಸಹಾಯಕವಾಯ್ತು. ಏಕೆಂದರೆ, ಪ್ರಾಯ ಪ್ರಬುದ್ಧ ಹೆಣ್ಣು ಗಂಡುಗಳು ಕಾದು, ಕಾದು ಸಮಾಜದ ಕಣ್ಣು ತಪ್ಪಿಸಿ ಜೊತೆಗೂಡಿದಾಗ ಗರ್ಭಧರಿಸಿ ಸಮಾಜದೆದುರು ಸಾಕ್ಷಿಯಾಗಿ ನಿಲ್ಲುವುದು ಹೆಣ್ಣು ಸಂತತಿ ಗಂಡು ಊರೂ ಬಿಟ್ಟೋ ಸುಳ್ಳು ಹೇಳಿ ತಪ್ಪಿಸಿ ಕೊಳ್ಳುವ ಸಾಧ್ಯತೆಯಿದೆ. ಈ ಅನಿವಾರ್ಯತೆ ಸೃಷ್ಟಿಯ ನಿಸರ್ಗ ವಿಧಿಯಲ್ಲೇ ಅಡಗಿರುತ್ತದೆ. ಈ ದುರಂತಕ್ಕೆ ತಮ್ಮ ತಮ್ಮ ಹೆಣ್ಣು ಮಕ್ಕಳು ಬಲಿ ಬೀಳದಂತೆ, ತಂದೆ ತಾಯಿಯರು ಅವರವರ ಶಕ್ತ್ಯಾನುಸಾರ, ಧನ-ಕನಕ ಒದಗಿಸಿ ಗಂಡು ಗೊತ್ತು ಮಾಡಲು ಪ್ರಾರಂಭವಾಯ್ತು. ಈ ನಡಾವಳಿಕೆ ಮಗಳಿಗೆ ಕೊಡುವ ಬಳುವಳಿಯಂತ ಕರೆದು ಸಮಾಜವೂ ಮಾನ್ಯ ಮಾಡಿತು. ಕಾರಣ ಇದೇ ಸಮಾಜ ಹಿಂದೊಂದು ಕಾಲ ಹೆಣ್ಣು ಮಕ್ಕಳನ್ನು ಬಾಲ್ಯದಲ್ಲಿ ತಂದೆ ತಾಯಿಯ ಪೋಷಣೆಯಲ್ಲೂ, ಯೌವನದಲ್ಲಿ ಪತಿಯ ಅಧೀನದಲ್ಲಿಯೂ ಮುಪ್ಪಿನಲ್ಲಿ ಮಕ್ಕಳ ಸಂರಕ್ಷಣೆಗೆ ಒಳಪಟ್ಟು ಹೆಣ್ಣು ಬಾಳತಕ್ಕದ್ದು. ಅವಳು ಮದುವೆಯಾಗಿ ಗಂಡನ ಮನೆಗೆ ಹೋಗುವಂತವಳು. ಆದ್ದರಿಂದ ಹೆತ್ತವರ ಸುಖ ದುಃಖಕ್ಕೆ ಬಾಧ್ಯರು ಗಂಡು ಮಕ್ಕಳು ಮಾತ್ರವೆಂತ ಭಾವಿಸಿ ಹೆತ್ತವರ ಎಲ್ಲಾಗಳಿಗೆಯೂ ಗಂಡು ಮಕ್ಕಳಿಗೆ ಇರತಕ್ಕದಲ್ಲದೆ ಹೆಣ್ಣು ಮಕ್ಕಳಿಗೆ ಪಿತ್ರಾರ್ಜಿತದಲ್ಲಿ ಹಕ್ಕಿಲ್ಲವೆಂತ ಹೇಳಿ ಅವರನ್ನು ಸರ್ವ ಕಾಲಕ್ಕೂ ಪರಾಧೀನ ಮಾಡಿತ್ತು. ಈ ತಪ್ಪಿನ ಅರಿವಿನಿಂದಲೇ ಸಮಾಜವು ಬಳುವಳಿಯ ತಿದ್ದುಪಡಿ ತಂದುದಿರಬಹುದು. ಅಂತೂ ನಡವಳಿಕೆಯಾದ ಮೇಲೆ ರಾಜರುಗಳೂ ಭೂಮಿಯನ್ನೆ ಮಗಳಿಗೆ ಕೊಡುತ್ತಿದ್ದರೆ ಜಮೀನ್ದಾರರು ಒಂದು ತುಂಡು ಹಿಡುವಳಿ ಸಾಹುಕಾರರು ಒಂದಷ್ಟು ಹಣವೋ ಚಿನ್ನದೊಡವೆಯನ್ನೊ ಕೊಡುತ್ತಿದ್ದರು. ಇದರಿಂದ ಬಹು ಬೇಗನೆ ಸಮಾಜದಲ್ಲಿ ಈ ವರ್ಗದ್ವೇಷಗಳುಂಟಾಯ್ತು. ಕಾರಣ ಬಡವರೇ ಜಾಸ್ತಿಯಿರುವ ನಮ್ಮ ದೇಶದಲ್ಲಿ ಬಡವರ ಮಕ್ಕಳಿಗೆ ಎಲ್ಲಿಂದ ಗಂಡನ್ನು ಕೊಂಡುಕೊಳ್ಳುವುದೆಂತ ಹುಯಿಲೆದ್ದಿತು. ಆಗ ಬುದ್ಧಿವಂತರು, ಬಲಾಢ್ಯರು, ಬಾಹ್ಯದಲ್ಲಿ ಕಾಣಿಸಿಕೊಳ್ಳದೆ, ಒಳಗಿಂದೊಳಗೆ ಕಾರ್ಯ ಸಾಧಿಸಿಕೊಳ್ಳಲು ತೊಡಗಿದರು. ಇದು ಎಲ್ಲಾ ವರ್ಗಗಳಲ್ಲೆ ಈಗ ಸಾರ್ವತ್ರಿಕವಾಗಿರುವ ಭ್ರಷ್ಟಾಚಾರದ ದಂಧೆಯಾಯ್ತು. ಇಂತಹ. ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲಾ ಬರುವುದು ಸಹಜ. ಹೀಗಾಗಿ ಈ ಕಾಲದಲ್ಲಿ ಗಂಡಿನ ವಿದ್ಯೆ. ಉದ್ಯೋಗ, ಅಂತಸ್ಥಿಗನುಸರಿಸಿ 'ವರದಕ್ಷಿಣೆ' ಪಡೆಯುವುದು ಎಂಬ ಹೊಸ ಹೆಸರಿನ ವ್ಯಾಪಾರ ಸಂಸ್ಥೆಯಾಯ್ತು. ಅದರಲ್ಲೂ ಐಶ್ವರ್ಯ ಅಂತಸ್ತು ಉದ್ಯೋಗ ಹೊಂದಿದ್ದ ಸಮರ್ಥ ಉಮೇದ್ವಾರಿಗೆ ತುಂಬಾ ದಕ್ಷಿಣೆ ಪಡೆಯುವ ಹಕ್ಕೆಂತ ಈಗಿನ ಸಮಾಜವೂ ಭಾವಿಸಿರುವುದು ನಮ್ಮ ಈ ತಲೆಮಾರಿನಲ್ಲೊಂದು ದೊಡ್ಡ ದುರಂತವೇ ಸರಿ. ಆಲೋಚಿಸಿರಿ, ನಮ್ಮ ಹಿರಿಯರು ದಕ್ಷಿಣೆಯೆಂಬುದನ್ನು ನಮ್ಮ ಪರವಾಗಿ ಕೆಲಸ ಮಾಡುವ,ಪೌರೋಹಿತ್ಯ ಬ್ರಾಹ್ಮಣರಿಗೆ ಕೊಡುತ್ತಿದ್ದರು. ಆ ಪೌರೋಹಿತ್ಯ ಸಂತತಿ ಎಲ್ಲಾ ಕಾಲಕ್ಕೂ ದಕ್ಷಿಣೆ ಪಡೆಯುವವರಲ್ಲದೆ ಕೊಡುವವರಾಗಿರಲಿಲ್ಲ. ಆದರೆ ಈಗ ಇಲ್ಲಿ ಹಾಗಾಗದು. ಮಗನಿಗೆ ಧಾರಾಳ ದಕ್ಷಿಣೆ ತಕ್ಕೊಂಡವನು ಮಗಳ ಮದುವೆಯಲ್ಲಿ ಕಕ್ಕಲೇ ಬೇಕಾಗಿದೆ. ದಿನ ಕಳೆದಂತೆ ಈ ಅನುಭವ ಸಾರ್ವತ್ರಿಕವಾಗಿ ಮನಸ್ಸಿನ ಒಳಗೆ ನಾಚಿಕೆ ಹುಟ್ಟಿಸಿರುವುದರಿಂದ ಈಗೀಗ ಸಭೆ ಸಮಾರಂಭ ವಿದ್ಯಾರ್ಥಿ ವೇದಿಕೆಗಳಲ್ಲಿ ವರದಕ್ಷಿಣೆಯನ್ನು ಖಂಡಿಸಲು ಹೊರಟಿರುತ್ತಾರೆ. ಕಾಲೇಜಿನಲ್ಲಿ ಭಾಷಣ ಬಿಗಿದು ಮೊದಲು ಸಂಪಾದಿಸಿದವರೇ ಮುಂದೆ ಮದುವೆ ಸಮಯದಲ್ಲಿ ಸೈಟೋ, ಸ್ಕೂಟರೋ, ಉದ್ಯೋಗಕ್ಕೋ ಮಾವನಿಗೆ ತಾಕೀತು ಮಾಡುವುದು ನಡೆಯುತ್ತದೆ. ಇತ್ತ ತಂದೆ ತಾಯಿಯರು ಹೆಣ್ಣು ಸಂತತಿಯನ್ನು ಗರ್ಭದಲ್ಲಿಯೇ ನಿರ್ಮೂಲಗೊಳಿಸಿ ಸುಕ್ಷೇಮಿಗಳಾಗಲು ಈಗಿನ ಹೊಸ. ಹೊಸತು, ವೈದ್ಯ ಚಿಕಿತ್ಸೆಗಳನ್ನು ಉಪಯೋಗಿಸಲು ಪ್ರಾರಂಭವಾಗಿದೆ, ಈ ಎಲ್ಲಾ ವೈಪರೀತ್ಯಗಳ ಆಶೆ ಗುರಿಯೇನೆಂದರೆ ನಮ್ಮ ಕಾಲ ಕಳೆಯಲಿ, ಮುಂದೆ ಏನಾದರೂ ಆಗಲಿಯೆಂಬ ಕನಸಿನ ಸಿದ್ಧಾಂತವೇ ನಮ್ಮ ಗುರಿಯಂತಾಗಿದೆ. ಇಷ್ಟಾದರೂ ಈ ಎಲ್ಲಾ ಅನಾಹುತ ಆಚರಣೆಯ ಮೂಲ ರೋಗವೆಲ್ಲಿದೆ ಎಂದು ಪ್ರಶ್ನಿಸುವ ಗೊಡವೆಗೆನಾದರೂ ಹೋಗಿಲ್ಲವೆಂದು ವ್ಯಸನ ಪೂರ್ವಕ ಹೇಳ ಬಯಸುತ್ತೇನೆ. ನಮ್ಮ ಮಕ್ಕಳು ನಾವು ಬೆಳೆಸಿದಂತೆ ಬೆಳೆಯುತ್ತಾರೆಂತ ಒಪ್ಪುವುದಾದರೆ ಈಗಿನ ಯುವ ಜನಾಂಗವನ್ನು ಸಿದ್ಧ ಉಡುಪನ್ನಾಗಿ ತಯಾರಿಸುವ ಈಗಿನ ವಿದ್ಯಾಲಯಗಳು ಅಲ್ಲಿ ದೊರಕುವ ವಿದ್ಯಾರ್ಜನೆಯ ಪರಿಣಾಮವೂ ಕೇವಲ ವ್ಯಕ್ತಿ. ವ್ಯಕ್ತಿಗಳಲ್ಲಿ ಸ್ಪರ್ಧೆ ಹುಟ್ಟಿಸಿ ಕಡಿಮೆ ಶ್ರಮದಿಂದ ಹೆಚ್ಚು ಸಂಪಾದಿಸಿ ಎಲ್ಲರಂತೆ ತಾನೂ ಮೆರೆದಾಡಲೇ ಬೇಕಾದ ಅನಿವಾರ್ಯತೆಯನ್ನು ಮಾತ್ರ. ಹುಟ್ಟಿಸುತ್ತದೆಂತ ನಾನು ಅಂಜದೆ ಹೇಳಬಯಸುತ್ತೇನೆ. ಕಾರಣ ವಿದ್ಯಾರ್ಥಿಯ ಯುವಕ ಪ್ರಾಯವೆಲ್ಲಾ

ಮುಗಿದಾಗ ಅವನಿಗೆ ಸಿಕ್ಕುವುದು ವಿದ್ಯೆಗಾಗಿ ಖರ್ಚು ಮಾಡಿದ್ದ ಆಯುಷ್ಯಕ್ಕೆ ಪ್ರತಿಫಲವಾಗಿ ಒಂದು ಡಿಗ್ರಿ ಪತ್ರ ಮಾತ್ರ. ಆ ಸರ್ಟಿಫಿಕೇಟ್‌ನಿಂದಲೇ ಮುಂದೆ ಅವನು ಮದವೆಯಾಗಿ ಸಂಸಾರ ಮಾಡಬೇಕಾಗಿದೆ. ಅವನಿಗೂ ಸಮಾಜದ ಸರಿ ಸಮಾನದಲ್ಲಿ ತಗ್ಗದೆ ನಡೆಯುವ ಬಯಕೆ ಇರುತ್ತದೆ. ಹಾಗಾದರೆ ಆ ಬಡಪಾಯಿ ತಾನೇನು ಮಾಡಬಹುದು ? ಮದುವೆಯಾಗಿ ಬರುವ ಹುಡುಗಿ ಗಂಟು ತರಲೇಬೇಕೆನ್ನಬೇಡವೇ ? ಇಲ್ಲದಿದ್ದರೆ ಸಂಸಾರಕ್ಕೆ ವಸತಿ ಹೂಡುವುದೆಂತು ? ಎಷ್ಟು ತಂದೆ ತಾಯಿಯರು ಇದ್ದಷ್ಟು ಕಾಲ ಮಕ್ಕಳಿಗೆ ಖರ್ಚು ಕೊಟ್ಟು ಸಾಕಬಲ್ಲರು ಇದು ನಿರ್ಮಲ ಮನಸ್ಸಿನಿಂದ ವಿಚಾರಿಸಿದಾಗ ಹೆತ್ತವರು ಉತ್ತಮ ಸಸಿಗಳನ್ನು ತಯಾರಿಸಿ ಮಾರ್ಕೇಟಿಗೆ ಬಿಟುಗಡೆ ಮಾಡುವಷ್ಟು ಅಸಹ್ಯಕರವಾಗಿ ಕಾಣುವುದಿಲ್ಲವೇ ? ದನ, ಕೋಳಿ, ಕುರಿಗಳನ್ನು ಮಾರಿದಂತೆ ನಮ್ಮ ಗಂಡು ಮಕ್ಕಳನ್ನು ಖರ್ಚು ಕೊಟ್ಟು ಸಾಕಲಾರದೆ ಮಾರಿಕೊಳ್ಳುವ ತಂದೆತಾಯಿಯರ ಸ್ಥಿತಿಗಾಗಿ ಮರುಕಗೊಳ್ಳುವುದೇ ? ಕೋಪಿಸಿ ಕೊಳ್ಳುವುದೇ ತುಚ್ಛರಂತ ಹಳಿಯುವುದೇ ? ಏನು ಮಾಡಿದರ ಪರಿಣಾಮ ಸಿಗಬಹುದು, ? ಇನ್ನೂ ಈಚೆ ಹುಡುಗನಲ್ಲಾದರೂ ಸ್ವಾಭಿಮಾನ ಉಳಿದಿದಯೇ ? ಸ್ವಾಭಿಮಾನಕ್ಕೆ ಅಂಟಿಕೊಂಡರೆ ಹೊಟ್ಟೆಗೆ ಗತಿಯಿಲ್ಲ, ದುಡಿದು ತಿನ್ನಲು ಕಲಿಸಲಿಲ್ಲ. ಕಲಿಯಲಿಲ್ಲ ಯಾರಿಂದಲೇ ಆದರೂ ಸಂಬಳ ಪಡೆದೇ ಜೀವಿಸಬಲ್ಲ ಗುಲಾಮಗಿರಿ ಉದ್ಯೋಗ ಪಡೆಯುವ ಅರ್ಹತೆಯ ಪತ್ರ ಮಾತ್ರ ಅತನ ಕೈಯಲ್ಲೆ ಇರುವುದು. ಆದ್ದರಿಂದ ಇದೀಗ ಪ್ರಪಾತದ ತುತ್ತ ತುದಿ ಅಂಚಿಗೆ ತಲಪ್ಪಿರುತ್ತೇವೆಂತ ಇಡೀಯ ಸಮಾಜಕ್ಕೆ ಸಮಾಜವೇ ಕಂಡುಕೊಳ್ಳದಿದ್ದರೆ ಯುವಕರೆಗೆ, ಯುವಕರೇ ಎಚ್ಚೆತ್ತು ಕೊಳ್ಳದಿದ್ದರೆ ನಾವು ಮುಂದುವರಿಯುವುದು ಮನುಷ್ಯರಾಗಿ ಅಲ್ಲ, ಮೃಗಗಳಾಗಿ ಎಂಬ, ದನ್ನು ಮರೆಯಬೇಡಿರಿ. ಯುವಕರೇ, ಯುವತಿಯರೇ ದಯವಿಟ್ಟು ಯೋಚಿಸಿರಿ. ಧೈರ್ಯ ಕಾರ್ಯವನ್ನು ನಿಮ್ಮ ಅಂತರ್ಯದಲ್ಲಿ ಸ್ಥಾಪಿಸಿರಿ. "ಪ್ರಾಯ ಪ್ರಬುದ್ಧತೆಯವರೆಗೆ ತಂದೆ ತಾಯಿಯರು ಸಾಕಿ ಸಲಹಿದರೆ ಸಾಕು ಮುಂದೊಂದು ದಿನವೂ ಅವರ ಅನ್ನದ ಪಾಲಿಗೆ ಕೈ ಚಾಚ ಬಾರದಂತ" ನಿರ್ಧಾರ ಮಾಡಿರಿ, ಯೌವನದೊಡನೆ ನಿಮಗಿರುವ ಕೈ ಕಾಲುಗಳಿಗೂ ಶಕ್ತಿಹೆಚ್ಚಿದೆಯೆಂಬುದನ್ನು ನೆನಪಿಡಿರಿ. ಸ್ವಂತ ದುಡಿಮೆಯಿಂದ ಪ್ರತಿಯೊಂದು ಜೋಡಿಯು ದುಡಿದು ಸಿಕ್ಕಿದ ಅವರವರ ಅದಾಯದಲ್ಲಿಯೇ ಸಂತೃಪ್ತಿ ಜೀವನ ನಡೆಸುವ ಕಲೆಯನ್ನು ಕಲಿತು ಜಾಣ್ಮೆ ಕಲಿಯಿರಿ. ಕಾಣುವುದಿಲ್ಲವೇ ಲೋಕದಲ್ಲಿ ಬೀದಿಯಲ್ಲಿಯೇ ಬಸಿರು, ಬಾಣಂತಿತನ ಕಳೆಯುವ ಬಡತನದಿಂದ ಏಳುಪ್ಪರಿಗೆಯಲ್ಲಿ ವಿರಾಜಮಾನರಾಗುವ ಮಹಾನು ಭಾವರವರೇಗಿನ ಮನುಜ ವರ್ಗ ಅಂತರಗಳನ್ನು ನೀವು ಯಾವುದಾದರೂ ಕೊನೆಯವರು ತಾನೆ ? ಮತ್ತೇಕೆ ಹೆದರಿಕೆ ? ವಿಶಾಲ ಪ್ರಪಂಚದಲ್ಲಿ ವಿಶಾಲ ಕಾರ್ಯಕ್ಕೆಡೆ ಇದೆ. ಧೈರ್ಯದಿಂದ ಮುನ್ನುಗ್ಗಿರಿ, ಆಗ ನೀವು ಮನುಷ್ಯರಲ್ಲ ದೇವತೆಗಳಾಗುತ್ತೀರಿ. ನಿಮ್ಮ ಗೆಲುವು ಇಡೀಯ ಸಮಾಜದ ಗೆಲುವಾಗಿ ಪರಿವರ್ತಿಸುತ್ತದೆ ಏಳಿರಿ । ಎದ್ದೇಳಿರಿ ।। ಈ ಕೊಳ್ಳುವ ಮಾರುವ ಅಸಹ್ಯ ಪದ್ಧತಿಯ ಕಳಂಕವನ್ನು ನಿಮ್ಮ ನಿಮ್ಮ ಹೆತ್ತವರ ತಲೆಯಿಂದ ಕಿತ್ತು ನಿಮ್ಮ ಭುಜಕೇರಿಸಿಕೊಳ್ಳಿರಿ । ನಾಚಿಕೆಯಾಗುವುದಿಲ್ಲವೇ ? ನೀವು ಮುಂದೆ ಒಂದಲ್ಲ ಒಂದು ದಿನ ಸಾಯಲೇಬೇಕು. ಹಾಗೆ ಕಣ್ಮರೆಯಾಗುವ ಈ ಕ್ಷಣಿಕ ಜೀವನದಲ್ಲಿ ಇಂತಹ ಹೇಸಿಕೆ ಕೆಲಸಗಳನ್ನೇಕೆ ಮಾಡುರುವಿರಿ ? ಪೂರ್ಣ ನಿರ್ಧಾರದಿಂದ ಎದ್ದು ನಿಂತು ಸುಟ್ಟು ಹಾಕಿರಿ. ಸ್ವಾಮಿ ವಿವೇಕಾನಂದರ ವೀರ ವಾಣಿಯನ್ನು ಸ್ಮರಿಸಿರಿ ।। ಕಾಳರಾತ್ರಿಯನ್ನು ಮುಗಿಸಿ ; ಹೊಸ್ತಿಲೊಂದಕ್ಕೆ ಕಾಲಿಡಿರಿ. ನೀವೇ ಮುಂದಿನ ಜನಾಂಗದ ಶಿಲ್ಪಿಗಳು ಜಯವಾಗಲಿ ಯುವಕ ಯುವತಿಯರ ಸಮುದಾಯಕ್ಕೆ ಆ ಮೂಲಕ ಸಮಾಜಕ್ಕೆ ದೇಶಕ್ಕೆ ಸುಂಗಧವನ್ನು ಲೇಪಿಸಿರಿ.

# ವಿಲಾಯಿತಿ ಕಟ್ಟಳೆ ಅಡಿಯಲ್ಲೂ ಸ್ವತಂತ್ರ ಕಂಡರು

ಲೇಖಕರು
**ಕಾನತ್ತಿಲ ಪದ್ಮಯ್ಯ ಗೌಡರು**

---

[ಶ್ರೀ ಪದ್ಮಯ್ಯಗೌಡರು ತಮ್ಮ ಹಿರಿಯರು ಹಿಂದಿನ ಕಾಲದಲ್ಲಿ ತಮ್ಮ ಮನೆತನದ ಅಭಿವೃದ್ಧಿಗೆ ಪಟ್ಟ ಪ್ರಯತ್ನ ಮತ್ತು ಮನೆತನದ ಸ್ಥಾನಮಾನಗಳೇನೆಂಬುದನ್ನೂ ಆತ್ಮವಿಶ್ವಾಸವಿದ್ದವರು – ತಮಗೆ ಯಾವುದೇ ಕಷ್ಟಗಳಿದ್ದರೂ ತನ್ನ ತನ ಉಳಿಸಿಕೊಳ್ಳುವುದಕ್ಕಾಗಿ – ಹಣದ - ಅಧಿಕಾರದ ಆಶೆಗಳಿಗೆ ಮನಸೋಲದೆ ತನ್ನತನವನ್ನು ತೋರಿಸಿಕೊಟ್ಟಿದ್ದಾರೆಂದು ವಿವರಿಸಿದ್ದಾರೆ.

ಸಂ]

---

ಉಗ್ರಾಣಿಕೆಗೆ ರಾಜಿನಾಮೆ ಸಲ್ಲಿಸಿದ್ದರು. ದೀರ್ಘ ಯೋಚನೆಯ ನಂತರ ಮುಂದಿನ ಯೋಜನೆ ರೂಪಿಸಿರಬೇಕು. ಮರುದಿನ ಮುಂಜಾವಿಗೆ ಎರಡು ಜನಕ್ಕೆ ಬೇಕಾಗುವ ಬುತ್ತಿ ತಯಾರಿಸಿಡುವಂತೆ ಮೊದಲ ದಿನ ಸಂಜೆಯೇ ಅಜ್ಜಿಗೆ ಹೇಳಿದ್ದರು. ಬೇಕಾದ ಬಟ್ಟೆ, ಬರೆ ವಗೈರೆ ಮೂಟೆ ಕಟ್ಟಿ ಬುತ್ತಿ ಸಹಿತ ಬೆಂ ಬೆಳಕಿನಲ್ಲಿ ಮನೆಯಿಂದ ಹೊರ ಬಿದ್ದರು, ಕರಾವಳಿಯ ಕಾಸರಗೋಡಿನ ಕಡೆಗೆ ಅವರ ಪ್ರಯಾಣವಾಗಿತ್ತು. ಬೇಕಲದವರೆಗೂ ಹೋಗಿರಬೇಕು.

ಬೇಕಲದ ರಾಮಪ್ಪಯ್ಯ ಸುಳ್ಯದಲ್ಲಿ ಹೆಡ್‌ಕಾನ್‌ಸ್ಟೇಬಲ್ ಆಗಿದ್ದು ಅಂಗಳ ಬದಿಯ ಕಟ್ಟಡದಲ್ಲಿ ಬಿಡಾರ ಹೂಡಿದ್ದರು. ಬೇಕಲದ ಅವರ ಮನೆ ಬಂಗಿ ಮನೆಯೆಂದೇ ಪ್ರತೀತಿಯಲ್ಲಿತ್ತು. ಮನೆಯವರು ಬಂಗಿ ವ್ಯಾಪಾರ ನಡೆಸುತ್ತಿದ್ದಿರಬೇಕು. ಅವರ ಶಿಫಾರಸು ಪ್ರೋತ್ಸಾಹಗಳಿಂದ ಬಂಗಿ ವ್ಯಾಪಾರದ ಗೀಳು ಹಿಡಿದು ಮಾಹಿತಿಗಾಗಿ ಬೇಕಲಕ್ಕೆ ಹೋಗಿರಬೇಕು. ಕಬರು ಗೋತ್ರದ ನಮಗೆ ಅಮಲು ಪದಾರ್ಥದ ಸೇವನೆಗೆ ನಿಷ್ಠುರ ನಿಷಿದ್ಧವಿದ್ದರೂ ವ್ಯಾಪಾರಕ್ಕೇನಂತೆ ! ಮರಳಿ ಬಂದವರೇ ವ್ಯಾಪಾರ ಪ್ರಾರಂಭಿಸಿದರು. ಕೆಲವು ಕಾಲ ವ್ಯಾಪಾರ ಮುಂದುವರಿಯಿತು. ಆದರೆ ಅಬಕಾರಿಗಳ ಲೆಕ್ಕ ತಪಾಸಣೆಯ ಕಿರುಕುಳ ಅಜ್ಜನಿಗೆ ಸರಿ ಬೀಳದೆ ವ್ಯಾಪಾರವನ್ನೇ ನಿಲ್ಲಿಸಿಬಿಟ್ಟರು. ತಮಾಷೆಯೆಂದರೆ ಬಂಗಿ ಹೆಸರು ಅಜ್ಜನಿಗೂ ತಟ್ಟಿತ್ತು. ಬಂಗಿ ಅಮೋದಕರೆಲ್ಲರೂ ಬಂಗಿ ಅಣ್ಣಪ್ಪ ಎಂದೇ ಹೆಸರಿಸಿದರು.

ಅವರ ಕಾಲ್ನಡಿಗೆಯ ಪ್ರಯಾಣ ಶೈಕ್ಷಣಿಕವೂ ಆಗಿತ್ತು. ಮಾರ್ಗದ ಇಕ್ಕೆಲಗಳಲ್ಲೂ ಬೆಳೆದ ತೆಂಗು ಕಂಗುಗಳನ್ನು ನೋಡಿದರು. ಅವಗಳ ಮೈಯಿಲ್ಲಾ ಹಬ್ಬಿದ ಕರಿಮೆಣಸು, ವೀಳ್ಯೆದೆಲೆ ಬಳ್ಳಿಗಳನ್ನು ಕಂಡರು;

ಇನ್ನಿತರ ಹಲವಾರು ಕೃಷಿಗಳನ್ನು ವೀಕ್ಷಿಸಿದ್ದರು. ಬಂಗಿಯನ್ನೀದು ಇತರ ಚಿಲ್ಲರೆ ವ್ಯಾಪಾರವನ್ನು ಮುಂದುವರಿಸುತ್ತಾ ಕೃಷಿಯಲ್ಲಿ ಆಸಕ್ತಿ ವಹಿಸಿ ತಾನು ಕಂಡ ಕೃಷಿಗಳನ್ನೆಲ್ಲ ಪ್ರಯೋಗ ಮಾಡಿದರು. ಇಷ್ಟಾದರೂ ತೋಟಕ್ಕೆ ಸೌಂದರ್ಯಬಾರದು. ಅದಕ್ಕಾಗಿ ಕೆಲವು ಮೂಲಿಕೆಗಳನ್ನು ಬೆಳೆಸಿದರು. ಬೇಸಿಗೆಯ ಬೆಂಗಾಡು ಮಜಲು ಗದ್ದೆ ಏತದ ನೀರಿನಿಂದ ಹಸುರಾಗಿ ಮಾರ್ಪಟ್ಟಿತು. ಸುಂದರ ತೋಟವಾಯ್ತು.

ಕೃಷಿ ವ್ಯಾಪಾರಿಗಳಿಲ್ಲ ಹೆಚ್ಚು ತೃಪ್ತರಾಗಲಿಲ್ಲ. ಒಂದೆರಡು ಕೈಗಾರಿಕೆಗೂ ಕೈ ಹಚ್ಚಿದರು. ತೋಟದಲ್ಲೊಂದು ಹೊಂಡ ತೆಗೆದು ತೆಂಗಿನ ಸಿಪ್ಪೆಯನ್ನು ಕೊಳೆಯಿಸಿ ನಾರಿ ಹಗ್ಗ ತಯಾರಿಸುವ ಸಾಹಸಕ್ಕಿಳಿದರು. ಆದರೆ ಅದು ತಮ್ಮ ಉಪಯೋಗಕ್ಕೇ ಆಯಿತು ವಿನಃ ವ್ಯಾಪಾರ ದೃಷ್ಟಿಯಲ್ಲಿ ಮುಂದುವರೆಯಲಿಲ್ಲ. ಆದರೂ ತಮ್ಮ ಮನೆ ಮಂದಿಗೆಲ್ಲ ಆ ಕೆಲಸದ ಅನುಭವವಾಗಿತ್ತು.

ಮೂಗಿಗೇರಿಸುವ ಹೊಗೆ ಸೊಪ್ಪಿನ ನಶ್ಯ ತಯಾರಿಕೆಗೆ ಉದ್ಯುಕ್ತರಾದರು. ನಶ್ಯದ ಬಗ್ಗೆಯೂ ಸಾಕಷ್ಟು ಮಾಹಿತಿ ಪಡೆಕೊಂಡಿದ್ದರು. ಅಭ್ಯಾಸವುಳ್ಳವರಿಗೆ ಮನಸದಣಿಯೇ ಅಮೋಘ ತೃಪ್ತಿ ನೀಡಿತ್ತು. ನಿತ್ಯವೂ ಅದನ್ನೇ ಜನ ಬಯಸಿದ್ದರು. ಅವರ ಈ ಕೈಗಾರಿಕೆಯ ಉತ್ಪತ್ತಿ ಪ್ರಮುಖ ವ್ಯಾಪಾರವಾಗಿ ಬೆಳೆಯಿತು. ಹಿಂದಿನ ನಾಮ ವಿಶೇಷಣ "ಬಂಗಿ" ಯ ಸ್ಥಾನವನ್ನು ಸ್ವಲ್ಪ ಸ್ವಲ್ಪವಾಗಿ ನಶ್ಯ ಆಕ್ರಮಿಸಿಕೊಂಡಿತು.

ಪಂಜವಳಿ ಜಾತಿಯ ವೀಳ್ಯದೆಲೆ ಬಳ್ಳಿಗಳು ಎತ್ತರದ ಕಂಗುಗಳಲ್ಲಿ ಸೊಂಪಾಗಿ ಬೆಳೆದಿದ್ದವು. ವೀಳ್ಯದೆಲೆಯಲ್ಲಿ ಹಲವು ಜಾತಿಗಳಿವೆ. ಆದರೆ ಎಲ್ಲಾ ಶುಭಾಶುಭ ಕಾರ್ಯಗಳಿಗೆ ಪಂಜವಳ್ಳಿಯೇ ಪವಿತ್ರ : ಬೇಕೆ ಬೇಕು. ಸುಳ್ಯ ಮಾಗಣೆಯ ಗ್ರಾಮಗಳಲ್ಲದೆ ನೆರೆಯ ಕೇರಳ ಕೊಡಗು ಜಿಲ್ಲೆಗಳ ಗ್ರಾಮಗಳು ಕಾನತ್ತಿಲದ ವೀಳ್ಯದೆಲೆಯನ್ನೇ ಅವಲಂಬಿಸಿದ್ದವು. ಮದುವೆ ದಿನಗಳಲ್ಲಿ ಬೇಡಿಕೆ ಪೂರೈಸಲು ಕಷ್ಟವಾಗುತ್ತಿತ್ತು. ವೀಳ್ಯದೆಲೆ ವ್ಯಾಪಾರವೂ ಪ್ರಾಧಾನ್ಯ ಪಡೆಯಿತು,

ಕಾನತ್ತಿಲ ನಮ್ಮ ಮನೆ. ಕುದ್ಪಜೆ ಕುಟುಂಬದ ಒಂದು ಕವಲು ವೀಳ್ಯದೆಲೆ ಮತ್ತು ವ್ಯಾಪಾರದ ಮುಂಬಾಂತರ ಕಾನತ್ತಿಲವೇ ಶ್ರೇಷ್ಠವೆನಿಸಿತು. ತೆಂಗಿನ ತೋಟದ ಮಧ್ಯದಲ್ಲಿ ಅಂಗಡಿ ಇದ್ದುದರಿಂದ ಬರಬರುತ್ತಾ ಹೆಸರು ಬದಲಾಯಿಸಿ ಕೊಂಡುತೋಟದಂಗಡಿ ಆಯಿತು. ಮುಂದೆ ನಮ್ಮ ದೊಡ್ಡಪ್ಪ ಬೊಳಿಯಪ್ಪಗೌಡರ ಕಾಲಕ್ಕೆ ಸಂಬಾರ ಜಿನಸಿನ ದೊಡ್ಡ ಅಂಗಡಿಯಾಗಿ ಬೆಳೆಯಿತು. ದಿನಗಳುರುಳಿದಂತೆ ರಸ್ತೆಯಂಚಿನಲ್ಲೆ ಅಂಗಡಿಗಳು ಹೆಚ್ಚುತ್ತಾ ಹೋದವು. ತೋಟದಂಗಡಿ ಖಾಲಿಯಾಯ್ತು. ತೋಟ ಮಾತ್ರ ಒಂಟಿಯಾಗಿ ಉಳಿಯಿತು.

ಕಾನತ್ತಿಲನೇಮ ನಡಾವಳಿ ಕುರುಂಜಿಯ ಪ್ರಧಾನ ಪೂಜಾರಿಯಾಗಿ ಅನುಕ್ರಮದಿಂದ ಕುದ್ಪಾಜೆ, ಕಾನತ್ತಿಲ, ಕೇರ್ಪಳ ಮನೆಯವರ ಪಾಲುಗಾರಿಕೆಯ ಕೊಡುವಿಕೆಯಿಂದ ನಡೆಯುತ್ತದೆ. ನೇಮ ವಳಿದ ನಂತರ ಬಂದ ಕುದ್ಪಾಜೆ ಮನೆಯವರಿಗೆ ತಮ್ಮ ಮನೆಯಲ್ಲೆ ಉಂಡು ಹೋಗಲು ಅಜ್ಜನ ತಾಕೀತು ಇತ್ತು. ದೈವಗಳ ಭಂಡಾರ ಕುರುಂಜಿಗೆ ಹೋಗುವುದರಿಂದ ಕೇರ್ಪಳ ಕುರುಂಜಿಯವರಿಗೆ ಕುರುಂಜಿಯಲ್ಲೆ ಊಟದ ಏರ್ಪಾಡಿತ್ತು. ಹೀಗೆ ಮೇಲಿನ ಮನೆಗಳವರ ಉಸ್ತುವಾರಿಯಲ್ಲಿ ನೇಮ ನಡಾವಳಿ ನಡೆಯುವುದು.

ಮನೆ ಹೆಂಗಸರಿಗೆ ವರ್ಷದಲ್ಲಿ ಬಿಡುವಿನ ಸಂಭ್ರಮದ ಎರಡು ದಿನಗಳು ಮಾತ್ರ. ಒಂದು ಸುಳ್ಯ ದೇವರ ಜಾತ್ರೆ ಇನ್ನೊಂದು ಕಾನತ್ತಿಲ ನೇಮಗಳ ಜಾತ್ರೆ. ಜಾತ್ರೆಗೆ ಹೊರಡುವಮುನ್ನ ಮನೆಗೆ ಬಂದ ಸೊಸೆಯಂದಿರು ಅತ್ತಿಗೆ ನಾದಿನಿಯರು ಯಥೇಷ್ಟವಾಗಿ ದೊರೆಯುವ ಅಬ್ಬಲಿಕೆಗೆ ಹೂ ಕೊಯ್ದು ಮಾಲೆ ಮಾಡಿ

ಅಜ್ಜನಿಗೆ ಒಪ್ಪಿರಬೇಕು. ಅಬ್ಬಲಿಕೆಗೆ ಪರಿಮಳವಿಲ್ಲದುದರಿಂದ ಅದಕ್ಕೆ ಸೆಂಟು ಚಿಮುಕಿಸುತ್ತಾರೆ. ಆ ಮೇಲೆ ಮಾಲೆಗಳನ್ನು ಹಿಡಿದು ಮುಡಿದುಕೊಂಡು ಜಾತ್ರೆಗೆಹೋಗಬೇಕಿತ್ತು. ಮುಂದುವರಿದ ಹೆಂಗಸರಿಗೆ ಸಾಟಿಯಾಗು ವಂತೆ ನಮ್ಮ ಹೆಂಗಸರೂ ಶೃಂಗರಿಸಿಕೊಳ್ಳಬೇಕೆಂಬ ಅಪೇಕ್ಷೆಯಾಗಿರಬೇಕು. ಹೀಗೆ ಇಗ್ಗೂ ಹಲವು.

ಕೋಳಿ ಲಿಂಕ ಕಾಮಿ ಕಟ್ಟುವುದು. ತಾಳಮದ್ದಳೆ ಕೂಟ ನಮ್ಮ ಜಾತ್ರೆಗಳ ಮನೋರಂಜನೆಗಳು. ಜಾತ್ರೆಯ ಸಲುವಾಗಿ ಒಂದು ಹುಂಜ ಮತ್ತು ಕಾನತ್ತಿಲ ನೇಮದ ಸಲುವಾಗಿ ಇನ್ನೊಂದು ಹೀಗೆ ಕಾದಿರಿಸಿ ಆ ಎರಡು ಲಿಂಕಗಳಲ್ಲಿ ಮಾತ್ರ ಭಾಗವಹಿಸುತ್ತಿದ್ದರು. ಮಿಕ್ಕಿದ ಲಿಂಕಗಳಿಗೆ ಹೋಗುವುದೂ ಇಲ್ಲ. ಹೋಗುವವರನ್ನು ಕಂಡ ರಾಗದು, ಈ ಮದ್ಯದ ಇನ್ನೊಂದು ಮನೋರಂಜನೆ ಸುಗ್ಗಿ ಗದ್ದೆ ಗೋರಿಯಲ್ಲಿ ಯುವಕರಿಗಾಗಿ ಓಟದ ಸ್ಪರ್ಧೆ ಬೆಳ್ಳಿ ರೂಪಾಯಿ, ಎಳೆನೀರು ಮತ್ತು ಬಾಳೆಗೊನೆ ಇವುಗಳನ್ನು ಬಹುಮಾನ ಕೊಡುತ್ತಿದ್ದರು.

ಯಕ್ಷಗಾನ ಬಯಲಾಟಗಳು ತಾಳಮದ್ದಳೆ ನಮ್ಮೂರಿನ ಪರಿಚಿತ ಕಲೆಗಳು, ಒಂದು ಪ್ರಸಂಗ ಹೀಗೆ ನಡೆದಿತ್ತು. ರಸ್ತೆಯಂಚಿನ ಅಂಗಡಿಯವರು ಮುಖ್ಯವಾಗಿ ಪ್ರಭು ಕಾಮತ್ ಪೈ ಬಳಗದವರು ವಿನಂತಿ ಪತ್ರ ಬರೆದು ವಂತಿಗೆ ವಸೂಲು ಮಾಡಿ ಅವರ ಅಂಗಡಿ ಎದುರು ಆಟ ಆಡಿಸುವ ಏರ್ಪಾಡು ಪ್ರತಿ ವರ್ಷವೂ ನಡೆಯುತ್ತಿತ್ತು. ಸಾಕಷ್ಟು ಹಣವಂತರು : ತಮ್ಮ ಖರ್ಚಿನಲ್ಲಿ ಆಡಿಸಿದರೆ ತಮ್ಮ ಹೆಸರಿನಲ್ಲಿ ಬಡವರು ನೋಡಿಕೊಳ್ಳುತ್ತಿದ್ದರಲ್ಲ ಎಂದು ವಿಮರ್ಶಿಸಿಕೊಂಡು ವಂತಿಗೆ ಸರ್ವಥಾ ಕೊಡಲಿಲ್ಲ.

ಆಟಕ್ಕೆ ವೀಳ್ಯ ಕೊಡುವುದೆಂದರೆ, ಆವರ ಖರ್ಚು ಕೊಟ್ಟು ಕಂಟ್ರಾಕ್ಟ್ ಮಾಡುವುದು. ಆಗ ವೀಳು ಸುಮಾರು 10–12 ರೂಪ್ಯಾಗಳು. ಮೇಲಿನ ಕಾರಣಕ್ಕಾಗಿ ಸ್ವಂತ ಖರ್ಚಿನಲ್ಲಿತಮ್ಮ ತೋಟದಂಗಡಿ ಎದುರು ಮೂರ ದಿನದ ರಾಮಾಯಣ ಆಡಲು ಮೇಳಕ್ಕೆ ಕರೆ ಕೊಟ್ಟರು, ಬಡವರೆಲ್ಲಾ ನೋಡಿ ವಿಹಂಗಮನಾಗಿ ಆನಂದಿಸಿದ್ದರು. ಇನ್ನೊಂದು ಬಲವಾದ ಕಾರಣ ತಮ್ಮ ಎರಡನೇ ಮಗನಾದ ನಮ್ಮ ತಂದೆ ರಾಮ್ಮಣ್ಣಗೌಡರನ್ನು ಭಾಗವತಿಗೆ ಮಾಡಿಸುವುದಾಗಿತ್ತು. ಅಜ್ಜನ ಅಸಮ್ಮತಿ ಇದ್ದರೂ ತಮ್ಮ ಕಣ್ಣು ತಪ್ಪಿಸಿ ಸುಳ್ಳದ ವೆಂಕಟ್ರಾಯ ಕಾಮತ್‌ರಲ್ಲಿ ಭಾಗವತಿಗೆ ಅಭ್ಯಾಸ ಮಾಡಿದ್ದರು. ಅವರ ಕಂಠ ಮಾಧುರ್ಯವೂ ಚೆನ್ನಾಗಿತ್ತು, ಅಜ್ಜನ ಕಣ್ಣುತಪ್ಪಿಸಿಕೊಂಡು ರಾತ್ರಿ ಕಾಲದಲ್ಲಿ ನಡಿಯುವ ತಾಳಮದ್ದಳೆಗೂ ಹೋಗುತ್ತಿದ್ದರು. ಈ ಶ್ರೇಯಸ್ ಸಂಚಿಕೆ ಬಿಡುಗಡೆ ಮಾಡುವ ಕರ್ಮ ಯೋಗಿ ಶ್ರೀ ಕೆ.ಯಂ. ವೆಂಕಟ್ರಮಣ ಗೌಡರ ತಂದೆ ಮಹಾಲಿಂಗ ಮಾಸ್ತರರೂ ಜೊತೆಗೂಡುತ್ತಿದ್ದರು, ಮಾಸ್ತರರು ಸೌಮ್ಯ ಪದಕ್ಕಾದರೆ ವೀರ ರಸಕ್ಕೆ ಏರುದನಿಯ ಹಾಡುಗಳಿಗೆ ತಂದೆಯವರದು ಎತ್ತಿದ ಕೈ. ದೇವರ ಗುಂಡ್ಯ ಸುಬ್ಬಣ್ಣಗೌಡರು ಮತ್ತು ಯಸ್. ಯನ್, ರಾಮಣ್ಣ ಮಾಸ್ತರರು ಹಿಮ್ಮೇಳದಲ್ಲಿ ಮೃದಂಗ ನುಡಿಸುತ್ತಿದ್ದರು. ಬಯಲಾಟದ ಭಾಗವತಿಗೆ ತಾಳದ್ದಮಳೆಗಿಂತ ಸ್ವಲ್ಪ ಭಿನ್ನವಾದುದು, ಅಭ್ಯಾಸ ಬೇಕು. ಪ್ರದರ್ಶನವು ಕೆಟ್ಟು ಹೋಗಬಾರದು ಎಂಬ ಭಯವಿರುತ್ತಿತ್ತು. ತಮ್ಮ ಸಿಟ್ಟಿನ ಶಮನಕ್ಕಾಗಿಯೇ ತನ್ನಿಂದಾಗದೆಂದರೂ ತಂದೆಯನ್ನು ಬಲಾತ್ಕಾರದಿಂದಲೇ ತಾಳ ಹಿಡಿಸಿದರು, ಖಾಯಂ ಭಾಗವತರ ನಿರ್ದೇಶನದ ಸಹಾಯದಿಂದ ಸುಧಾರಿಸಿಕೊಂಡು ಹಾಡಿದರು, ಚಳಿ ಬಿಟ್ಟಿತು, ಅಂತೂ ಅಜ್ಜನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. ಆಟ ನೋಡಿದ ನೆನಪು ನನ್ನಲ್ಲಿ ಹಸಿರಾಗಿಯೇ ಇದೆ.

ಕಾಡು ಪ್ರಾಂತದಲ್ಲಿ ಭತ್ತದ ಇಳುವರಿ ತೀರಾ ಕಡಿಮೆ ಕಷ್ಟಪಟ್ಟು ಕಾಡು ಮೃಗಗಳಿಂದ ರಕ್ಷಿಸಿ ಜೀವನಕ್ಕೆ ಸಾಕಾಗುವಷ್ಟು ಕಾಳಿಲ್ಲವಾದರೂ ಊರಿನ ದೇವಸ್ಥಾನದ ನೈವೇದ್ಯಕ್ಕೆ ಮೊಸಲಿಟ್ಟು ತಾವು ಹಸಿ, ಒಣ ಮಾಂಸಗಳಿಂದ ಜೀವ ರಕ್ಷಣೆ ಮಾಡಿಕೊಂಡ ಕಾಲವು ಕೆಲವರಿಗಾದರೂ ಗೋಚರಿಸಿರಬಹುದು. ಹೀಗಾಗಿ ನಮ್ಮ ದೈವಗಳಿಗೆ ಹಂದಿ ಕೋಳಿಗಳ ಅರ್ಚನೆಯಿಂದ ತೃಪ್ತಿಪಡುವ ಅಭ್ಯಾಸವಾಗಿರಬೇಕು. ನಮಗೂ ಪ್ರಿಯವಾದದ್ದೂ ಮಾಂಸವೇ.

ಆಗಿನ ಕಾಲದಲ್ಲಿ ತಾಂಬೂಲ ಒಪ್ಪಿಸಿಯೇ ಮದುವೆ ಮುಂಜಿಗಳಿಗೆ ದೈವ ಕೋಲಕ್ಕೆ ಹೇಳಿಕೆ ಮಾಡಬೇಕಾಗಿತ್ತು. ಹಾಗೆ ಹೇಳಿಕೆ ಬಂದಾಗ ಊಟದ ಬಗ್ಗೆಯೂ ವಿಚಾರಿಸುತ್ತಿದ್ದರು. ಪಾಯಸ ಊಟ ಎಂದರೆ ಮೆಚ್ಚುಗೆ ಇರಲಿಲ್ಲ. "ನಾವು ಬ್ರಾಹ್ಮಣರಲ್ಲ ಮಾಂಸ ತಿನ್ನುವ ಜಾತಿ. ಅವರದು ನಮ್ಮದು ನಮಗೆ ನಾನೇಕೆ ಬ್ರಾಹ್ಮಣರಾಗಬೇಕು? ಶಿಸ್ತು ನಿಯಮಗಳ ಪಾಲನೆ ಬೇಕು. ಆರೋಗ್ಯ ಕಾಪಾಡಬೇಕು ಹೀಗೆ ವಾದಿಸುತ್ತಿದ್ದರು. ಅಂದ ಮಾತ್ರಕ್ಕೆ ಬ್ರಾಹ್ಮಣ ವಿರೋಧಿಯೇನಲ್ಲ, ಬ್ರಾಹ್ಮಣರ ಸಖ್ಯವಿತ್ತು, ಗೌರವವಿತ್ತು. ಆರ್ಥಿಕ ಶ್ರೀಮಂತಿಕೆಗಿಂತಲೂ ಭೌದ್ಧಿಕ ಶ್ರೀಮಂತಿಕೆ ಅವರಿಗೆ ಮಹತ್ವದ್ದು.

ಮದುವೆ ಮುಂಜಿಗಳಲ್ಲಿ ಶೇಷೋಪಚಾರಕ್ಕೆ ಮಾಡುವ ಕಾಣಿಕೆ ಸಾವಿನ ಉತ್ತರ ಕ್ರಿಯಾದಿಗಳಿಗೆ ಸರಕು ಕಳುಹಿಸುವುದು. ನಲಿಯು ಆಳಿಯುವಾಗ ಧನ ಸಹಾಯದ ಕಾಣಿಕೆ ಬಡ ಸ್ವಜಾತಿ ಬಂದುವೊಬ್ಬರ ಸಂಪ್ರದಾಯ ಆಚರಣೆಗೆ ಅಡಚಣೆಯಾಗದಂತೆ ಸಹಾಯ ಒದಗಿಸಿ ಗೌರವ ಕಾಪಾಡುವುದಾಗಿದೆ. ಶ್ರೀಮಂತರೆಲ್ಲ ಒಂದು ರೂಪಾಯಿ ಆದರೆ ಬಡವರಲ್ಲಿ 5–10 ರೂಪಾಯಿ ಬಟ್ಟಲಿಗೆ ಹಾಕುವುದು ಅಜ್ಜನ ಕ್ರಮವಾಗಿತ್ತು.

ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ್ಯ ಗದ್ದೆ ಬೇಸಾಯವೇ ಪ್ರಮುಖ ಉದ್ಯೋಗ ಬೇಸಾಯದ ಕೆಲಸವನ್ನು ಮುಗಿಸಿಕೊಡಗಿನ ಕಾಫಿ ಏಲಕ್ಕಿ ತೋಟಗಳಿಗೆ ಕೆಲಸಕ್ಕಾಗಿ ವಲಸೆಯೋಪಾದಿಯಲ್ಲಿ ಜನ ಹೋಗುತ್ತಿದ್ದರು. ಅಜ್ಜನೂ ಘಟ್ಟ ಹತ್ತಿದರು. ಕಾಲ್ನಡಿಗೆಯ ದೂರದ ಪ್ರಯಾಣದ ಕಾಲವಾಗಿದ್ದರೂ ಕಷ್ಟಗಳನ್ನು ಲೆಕ್ಕಿಸದೆ ಕುಟುಂಬ ಘೋಷಣೆಗಾಗಿ ದೂರದೂರಿನಲ್ಲಿ ದುಡಿಯಬೇಕಾಗಿತ್ತು. ಕೆಲವು ಕಾಲ ದುಡಿದರು.

ಅದು ದೊರೆ ತೋಟವಾಗಿತ್ತು. ವಿಲಾಯತಿಯ ಯಾವುದೇ ಬಿಳಿಯನನ್ನು ದೊರೆ ಎಂದೇ ಕರೆಯುತ್ತಿದರು ಅಜ್ಜನ ಓದು ಬರಹ ಚೆನ್ನಾಗಿದ್ದುದರಿಂದ ರೈಟರ್ ಆಗಿ ಉದ್ಯೋಗ ದೊರೆಯಿತು.

ಕಾಡು ಪ್ರದೇಶದಲ್ಲಿ ಎಲ್ಲೆಲ್ಲಿಯೂ ಮಲೇರಿಯಾ ಜ್ವರದ ಹಾವಳಿ ಕೊಡಗಿನಲ್ಲಂತೂ ಹೇಳ ತೀರದು, ಕೆಲಸಕ್ಕಾಗಿ ಘಟ್ಟ ಹತ್ತಿದವರು ಮನೆಗೆ ತಲಪುವುದು ಕಷ್ಟ. ಎಷ್ಟೋ ಮಂದಿ ದಾರಿಯಲ್ಲಿ ಆಸು ನೀಗುತ್ತಿದ್ದರು. ಅಜ್ಜನ ಮನೆಯಲ್ಲೂ ಹೆಂಡತಿ ಮಕ್ಕಳೆಲ್ಲಾ ಕಾಯಿಲೆ ಬಿದ್ದರು. ನಿರುಪಾಯರಾಗಿ ಮನೆಯ ತೊಂದರೆಗಳ ಬಗ್ಗೆ ಹೇಳಿ ಕೊಂಡು ಉದ್ಯೋಗದಿಂದ ಬಿಡುಗಡೆಗೊಂಡರು. ಅವರು ಪ್ರಮಾಣಿಕ ದುಡಿಮೆಗಾಗಿ ದೊರೆ ನೆಚ್ಚಿಕೊಂಡಿದ್ದರು. ಅಜ್ಜನನ್ನು ಬೀಳ್ಕೊಡುವಾಗ ತನ್ನ ಪ್ರೀತ್ಯರ್ಥವಾಗಿ ಒಂದು ಕುದುರೆಯನ್ನು ಕೊಡಮಾಡಿದ್ದರಂತೆ ಆದರೆ ತನ್ನ ಸಂಪತ್ತಿಗೆ ಮೀರಿದಂತೆ ಸೌಕರ್ಯ ತನಗೆ ಬೇಡವೆಂದು ಕುದುರೆಯನ್ನು ಅಲ್ಲೇ ಬಿಟ್ಟರು. ಮರಳಿ ಹೋಗಿದ್ದರೂ ಯಾವತ್ತೂ ದೊರೆಯ ಸ್ವಾಗತವಿತ್ತು ; ಮತ್ತೆ ಹೋಗಲೆ ಇಲ್ಲ.

ನಾಪೂರು ನಾರ್ಣಪ್ಪಯ್ಯನವರು ಸುಳ್ಯದ ಪಟೇಲರು ದಸ್ತಾವೇಜು ಬರವಣಿಗೆಯೂ ಅವರಿಗಿತ್ತು. ಕಾನತ್ತಿಲ್ಲ ಬೈಲಿನವರಿಸ ತುದಿ ನಾಪೂರು, ಅವರ ಹಂಚಿನ ದೊಡ್ಡ ಮನೆ ಪರವೂರಿನವರಿಗೊಂದು ಅನ್ನ ಛತ್ರ ಇದ್ದಂತೆ ಅವರು ದಾನಿಗಳು ಊರಿನ ಪ್ರಭುವೆಂದೇ ಹೇಳಬೇಕು. ಕೊಡಗಿಗೆ ಮರಳದ ಅಜ್ಜನನ್ನು ಉಗ್ರಾಣಿಯಾಗಿ ನೇಮಿಸಿಕೊಂಡರು. ದೊರೆಗಳ ಸನಿಹದಲ್ಲಿ ಕೆಲಸ ಮಾಡಿದ್ದಾರೆಂದ ಮೇಲೆ ಆಂಗ್ಲಭಾಷೆಯ ಪರಿಚಯವೂ ಸಣ್ಣ ಮಟ್ಟಿಗೆ ಇರಬೇಕು. ಉಗ್ರಾಣಿಯಾದರೂ ಅವರಿಂದ ಬರವಣಿಗೆಯ ಕೆಲಸವನ್ನೇ ಹೆಚ್ಚಾಗಿ ಮಾಡಿಸುತ್ತಿದ್ದರಂತೆ.

ಸುಳ್ಯದ ಪೊಗರ್ಪಣ ಸೇತುವೆ ರಚನೆಗಾಗಿ ಆಂಗ್ಲ ಓವರ್ಸಿಯರ್ ಒಬ್ಬ ಬೀಡು ಬಿಟ್ಟಿದ್ದ ದೊರೆಗಳ ಮರ್ಜಿ ಅಜ್ಜನಿಗೆ ಗೊತ್ತಿದ್ದುದರಿಂದ ಅವರನ್ನು ಊಟೋಪಹಾರಗಳ ಸರಬರಾಜಿಗೆ ನೇಮಿಸಿದರು.

ಒಂದು ಮಧ್ಯಾಹ್ನ ಕೆಲಸದಲ್ಲಿಂದ ಬಂದ ದೊರೆ ನೇರವಾಗಿ ಬಚ್ಚಲು ಮನೆಗೆ ಹೋದರು. ಆ ಹೊತ್ತಿಗೆ ಊಟದ ಸ್ಟೂಲಿನ ಮೇಲೆ ಗ್ಲಾಸಿನಲ್ಲಿ ನೀರು ಎಂದಿನಂತೆ ತಂದಿಟ್ಟರು. ಒಳಗೆ ಹೋಗಿ ಊಟ ತರುವ ಮಧ್ಯದಲ್ಲಿ ಹುಲ್ಲು ಕಡ್ಡಿಯೊಂದು ಮಾಡಿನಿಂದ ನೀರಿಗೆ ಬಿದ್ದಿತ್ತು. ಮಾಡಿನ ಮೇಲೆ ಓತಿಯೋ ಅರಣೆಯೊ ಹರಿದಾಡಿರಬೇಕು. ನೀರಿನಲ್ಲಿ ಕಸವನ್ನು ಕಂಡು ಸಿಟ್ಟಿನಿಂದ ಗ್ಲಾಸಿಗೆ ಒದ್ದರು. ಗ್ಲಾಸು ನೆಲಕ್ಕೆ ಬಿದ್ದು ಪುಡಿಪುಡಿಯಯೂತು. ಸಿಟ್ಟು ಅಷ್ಟಕ್ಕೆ ನಿಲ್ಲದೆ ಆಂಗ್ಲ ಭಾಷೆಯಲ್ಲಿ ಸಿಕ್ಕಾಪಟ್ಟೆ ಬೈಯ್ದರು. ಕೆಲವು ಅಜ್ಜನಿಗೆ ಅರ್ಥವಾಗಿರಬೇಕು. ಅಜ್ಜನದು ಪುಟ್ಟ ಬಲಿಷ್ಟ ದೇಹ, ಗಂಭೀರ ಮುಖ; ಹೊಡೆಯುವುದಕ್ಕೆ ಧೈರ್ಯ ಕುಗ್ಗಿರಬೇಕು. ಬೇರೊಂದು ಗ್ಲಾಸಿನಲ್ಲಿ ನೀರು ತಂದಿಟ್ಟರು. ಊಟ ಮುಗಿದ ಮೇಲೆ ಕುಪ್ಪಿ ಚೂರುಗಳನ್ನೆಲ್ಲಾ ಸೆಗಣಿಯಿಂದ ಹೆಕ್ಕಿ ಶುಚಿ ಮಾಡಿದರು.

ಇವನೇನು ಕಲಿತದ್ದು–ಕಸ ಬಿದ್ದರೆ ಬೇರೆ ನೀರು ತಂದಿಟ್ಟುರಾಯ್ತು. ಮೇಲೆ ಹುಲ್ಲು ಛಾವಣಿಯ ಮಾಡು ಇವನಿಗೆ ಗೊತ್ತಾಗುವುದಿಲ್ಲವೇ ಹೀಗೆಲ್ಲಾ ಬೈದು ಬಿಟ್ಟನಲ್ಲ ಎಂದು ಆಶ್ಚರ್ಯ ದುಃಖ ಎರಡೂ ಉಂಟಾಯಿತು.

ಆ ದಿನದ ತನ್ನ ಕರ್ತವ್ಯ ಮುಗಿಸಿ ಮನೆಗೆ ಬಂದವರು ರಾಜಿನಾಮೆ ಬರೆದು ನೇರವಾಗಿ ಪಟೇಲರಿಗೆ ಒಪ್ಪಿಸಿದರು. ಪಟೇಲರು ಬಹಳವಾಗಿ ಸಮಾಧಾನ ಹೇಳಿದರೂ ಅಜ್ಜನಿಗೆ ಏನೇನೂ ನಾಟಲಿಲ್ಲ. ಕೆಲಸ ಸಣ್ಣದಾದರೂ ಅಭಿಮಾನ ದಿಂದ ಕರ್ತವ್ಯ ನಿಷ್ಠತೆಯ ಕೆಲಸ ಮಾಡುವಾಗ ಅಧಿಕಾರಿಯ ಬೈಗಳು ಹೃದಯಕ್ಕೆ ಮಾಸದ ಗಾಯ ಮಾಡಿತ್ತು.

ಆ ರಾಜಿನಾಮೆಯಿಂದಲೇ ಗೌರವಯುತಸ್ವತಂತ್ರದ ಕಡೆಗೆ ಬಾಳ್ವೆ ನಿಲುವು ಪಡೆಯಿತು. ಸ್ವಉದ್ಯೋಗಕ್ಕೆ ಪದಾರ್ಪಣೆ ಮಾಡಿದರು. ವಿನಾಶಕ ಪ್ರತಿರೋಧಕ್ಕೆ ಮಾರು ಹೋಗದೆ ರಚನಾತ್ಮಕವಾಗಿ ಇಂಗ್ಲಿಷ್ ಭಾಷೆಯನ್ನೇ ಕಲಿಯ ಹೊರಟರು. ಬರೆಯುವುದಕ್ಕೆ 2–3 ಸ್ಲೆಟುಗಳನ್ನು ಕೊಂಡು ಕೊಂಡರು. ಭಾರಾದ್ವಾಜರ ಇಂಗ್ಲೀಷ್ ಕನ್ನಡ ನಿಘಂಟುಗಳನ್ನೂ ಭಾಷಾ ಮಂಜರಿ ಪುಸ್ತಕಗಳನ್ನು ತರಿಸಿಕೊಂಡರು. ಇಂಗ್ಲೀಷ್ ದೈನಿಕ 'ಮೆಡ್ರಾಸ್ ಮೈಲ್' ಕನ್ನಡದ 'ಕಂಠೀರವ' ಪತ್ರಿಕೆಗಳನ್ನು ಅಂಚೆ ಮೂಲಕ ತರಿಸಿಕೊಂಡರು. ಸತತ ಅಭ್ಯಾಸ ಮಾಡಿದರು. ಅಂಗಡಿಗೆ ಬಂದ ವಿದ್ಯಾರ್ಥಿಗಳೊಡನೆ ಸಂಭಾಷಣೆ ನಡೆಸ ತೊಡಗಿದರು. ಅಧ್ಯಾಪಕರು ಬಂದಾಗ ವ್ಯಾಕರಣ ಕಲಿತು ಕೊಂಡರು, ಅಜ್ಜ ಸಾಕಿದ ನಾಯಿಗೆ 'ರೋಬ' ಎಂದು ಹೆಸರಿಟ್ಟು ಇಂಗ್ಲೀಷ್‌ನ ನಿರ್ದೇಶನ ಕಲಿಸಿದರು, ಇಂಗ್ಲೀಷ್ ಬಲ್ಲ ಸೋಣಂಗೇರಿ ನಡುಮನೆ ರಾಮಣ್ಣ ಮಾಸ್ತರರು ಹೇಳುವಂತೆ ಉಚ್ಚಾರದಲ್ಲಿ ಕೆಲವು ಬೀಳುಗಳಿದ್ದರೂ ವ್ಯಾಕರಣ ಬದ್ಧ ವಾಗಿ ಮಾತಾಡುತ್ತಿದ್ದರು ಎಂದು ಹೇಳುತ್ತಾರೆ.

ಅಜ್ಜನಲ್ಲಿ ರಾಷ್ಟ್ರೀಯ ಪ್ರಜ್ಞೆಯೂ ಮೂಡಿತ್ತು. ಸುಳ್ಯದ ಡಾಕ್ಟರ್ ಎಂದೇ ಹೆಸರಾಗಿದ್ದ ದಿವಂಗತ ಕೆ. ಆರ್. ಕಾರಂತರ ಮಾವನು ಡಾಕ್ಟರ್ ವೆಂಕಟ್ರಾವ್ ಅವರ ಸಖ್ಯವೂ ತಮ್ಮ ಪ್ರಜ್ಞೆಗೆ ಪುಷ್ಟೀಕರಣ ನೀಡಿರಬೇಕು. ಸ್ವತಂತ್ರ ಭಾರತಕ್ಕಾಗಿ ಜನಾಂದೋಲನದ ದಿನಗಳವು ಮಹಾತ್ಮಾ ಗಾಂಧಿಯವರು ಮಡಿಕೇರಿಯಿಂದ ಮಂಗಳೂರಿಗೆ. ಹೋಗುವ ಸಂದರ್ಭದಲ್ಲಿ ಅವರನ್ನು ಕಾಣುವದಕ್ಕಾಗಿ ಹಳೇ ಗೇಟಿನ ಬಳಿ ಸಭೆ ಸೇರುವಂತೆ ಪ್ರಚಾರವಾಗಿತ್ತು. ಅವರ ಪ್ರಯಾಣದ ದಿನ ಬೆಳಿಗ್ಗೆ 7 ಗಂಟೆಗೆ ಸರಿಯಾಗಿ ಮನೆ ಮಂದಿಯನ್ನೆಲ್ಲಾ ಹಳೇ ಗೇಟಿಗೆ ಕಳಹಿಸಿದರು,

ಅಜ್ಜನ ವಯಸ್ಸು ಸುಮಾರು 70–80 ಇರಬಹುದು. ಮೂಲವ್ಯಾಧಿಯಿಂದ ಬಳಲುತ್ತಿದ್ದುದರಿಂದ ಅಂಗಡಿ ಯಲ್ಲಿಯೇ ಉಳಕೊಂಡರು. ಆದರೆ ರೋಬ ಮಾತ್ರ ಸ್ವತಂತ್ರವಾಗಿದ್ದು ನಮ್ಮ ಜೊತೆಗೆ ಬಂದಿತ್ತು, ಗಾಂಧೀಜಿ ತಲಪಲು ತಡವಾಗಿತ್ತು ಸುಮಾರು ಎರಡು ಗಂಟೆ ವಿಳಂಬ ರೋಬ ಸುಮ್ಮನೆ ಹೆಚ್ಚು ಕಾಲ ನಿಲ್ಲಲಿಲ್ಲ ಆಚೆ ಈಚೆ ತಿರುಗಾಡಿ ಅಜ್ಜ ಕಾಣದಿದ್ದಾಗ ಅಪ್ಪ. ದೊಡ್ಡಪ್ಪ, ಚಿಕ್ಕಪ್ಪ ಹೀಗೆ ಮನೆಯವರಿಗೆ ಚೇಷ್ಟೆ ಮಾಡತೊಡಗಿತು. ನಿರು ಪಾಯರಾಗಿ ನಮ್ಮ ಪೈಕಿ ಒಬ್ಬರು ಯಾರೆಂಬುದು ನೆನಪಿಲ್ಲ. ರೋಬನ ಜೋತೆಯಲ್ಲೆ ಅಂಗಡಿಗೆ ಬಂದು ಅಜ್ಜನನ್ನು

ನಿಧಾನವಾಗಿ ಕರಕೊಂಡು ಬಂದು ಮಾರ್ಗದ ಕಡೆಗೆ ತಲ್ಪಿಸಿದ್ದರು. ಕಡೆಗೆ ಬಂದವರನ್ನು ಮುಂದೆ ಕಳುಹಿಸಿ ತಾನು ಕೊತು ನಿಂತು ನಿಧಾನವಾಗಿ ನಡಕೊಂಡು ಅರ್ಧದಾರಿಗೆ ತಲ್ಪಿದ್ದರು, ಅಷ್ಟು ಹೊತ್ತಿಗೆ ಗಾಂಧಿ ತೆರೆದ ಕಾರಿನಲ್ಲಿ ಹಳೆ ಗೇಟು ದಾಟಿದರು. ಅಂತೂ ಎಲ್ಲರೂ ಗಾಂಧೀಜಿಯನ್ನು ಕಂಡರು.

ಹಳೇ ಗೇಟಿನಿಂದ ಹಿಂದೆ ಬರುವಾಗ ನಡುದಾರಿಯಲ್ಲಿ ಅಜ್ಜ ಸಿಕ್ಕಿ ಮುಂದೆ ನಡೆಯಲಾಗದೆ ಬಹುಃಶ ಎತ್ತಿಕೊಂಡು ಬಂದಿರಬೇಕು. ಮತ್ತೆ ಹೆಚ್ಚು ದಿನಗಳು ಮುಂದುವರಿಯಲಿಲ್ಲ. ಜೀವನ್ಮುಕ್ತರಾದರು. ಅಮರರಾದರು

ಅವರ ಶಿಸ್ತು ಬದ್ಧ ಕೃಷಿ ಇಂದಿಗೂ ಉಳಿದುಕೊಂಡಿದೆ.ಅಂಗಡಿಯ ಗುರುತಿಗೆ ಜರಿದ ತುಂಡು ಗೋಡೆಯೊಂದಿಗೆ ಮೂಲ ವ್ಯಾಧಿಯ ಔಷಧಿಗಾಗಿ ಮಳಂಜಿ ಜಾತಿಯ ಅಪೂರ್ವ ಮೀನು ಹಿಡಿಯಲು ತಯಾರಿಸಿದ ಗಾಳ ಸೆಳೆಯ ತುಂಡ ನಲಿ ಆಟವಾಡಿದಾಗ ನನ್ನ ಬಲ ಕಣ್ಣಿನ ಕೆಳಗೆ ಗಾಯವಾದ ಗುರುತಿದೆ. ತತ್ವ ಜೀವನ ಮತ್ತು ಜೀವನ ತತ್ವ ಈ ಎರಡರಲ್ಲೂ ಸಾಧಿಸಿ ಸಾರ್ಥಕ್ಯವನ್ನು ಗಳಿಸಿದ ಕಾನತ್ತಿಲ ಅಣ್ಣಪ್ಪ ಗೌಡ ನಮ್ಮ ಅಜ್ಜನಿಗೆ ದಿವಂಗತರ ಯಾವ ಸಾಲೂ ಸರಿ ಹೊಂದಿಕೊಳ್ಳದು. ಅವರು ಅವರೇ.

ಓಂ ಶಾಂತಿ ಶಾಂತಿ ಶಾಂತಿ.

ಕಾನತ್ತಿಲ ಪದ್ಮಯ್ಯ ಗೌಡ



# Water Divining And Dowsing -a Birds Eye View

(ಅಂತರ್ಜಲ ಸಂಶೋಧನೆಯ ಪಕ್ಷಿನೋಟ)

By : Dr. K. Veerappa Gowda,
Poultry Development Officer
(Retd.) Bangalore.

---

[The main difference between men and animals are the difference in their power of concentration. All Surocess in any linc of work is the result of this. High achievements in Art, Music ctc. are the result of concentration. Sri. Swami Vivekanenda in his Lecture delivered at Los Angeles, California on 8th January 1900 said "They arc under Laws, Just the same as any other physical Phenemnon...........and they call the Science of Raja Yoga. The eonclusion they have reached is that all these ex-ordinary powers are in the mind of man".

Hence, we are glad that Dr. K, Veerappa Gowda has got that power and he himselef was not aware of this power till recently.

Let our society make use of this opportunity af this gift of power for the good of thc society.

Editor ]

---

Human body is the most wonderful living Machine. In the past our great Rishis and Sadhu's have exhibited their extrordinary powers (the Sixthe Sense) through their Super-Human talents.

The usual Five Senses, vix, Vision, Smell, Taste, Hearing and Touch are existing in a Normal Human body. In addition to these 5 senses, an Extrordinary 6th sense is available in the body of

about 5-6% people. It is this 6th sense which helps in the technique of Water-Divining faculty. This hidden talent may not be known to us or to others, tuntil the individual gets an opportunity o indentify it in himself. This is a Divine Blessing and Super normal power.

God Aimighty has bestowed on me, this fantastic inbron power with I was able to indantify only after my retirement from service In the year 1867-61, as the Poultry Development Officer of Karnataka State. Had this been known to me earlier in life, perhapf I would have been a World famous "Diviner and Dowser" to detect, at the depth of our Mother, Earth, the various valuable and precious materials like Diamonds, Gold aud other metals, Petrol, Oil, Hindden treasury etc etc and locatiog Missing peopie and diaguosing diseess is human bod and that of Animals.

Dowsing is a Wonderful Technique. While dowsing on a sketch of Map, the Dowser should implant in his mind the material he is searching for, and forget everything else. It is the Concentration of the mind on the subject, which he is searching for on a sketch or map. The land on which I search for underground water springs may be at a remote plsce, may be at Madras, Bombay or Delhi.

With a corret sketch plan of the land along with the correct directions furnished to me at Bangalore, I shall be able to isolate on the sketch itself the correct spot for drilling a Bore-Well or an open well. Further, to pin point the exact site, one has to go to the actul land. It is a skill that can only be learned through patient practice and experience. Few Dowsers have acquired such experiences.

Geologists, Hydrologists, use the Electrical Resistivity appliances, like the Magnetometre etc, to detect the underground watar springs or the rock fractures deep inside the earth crest. This method couid be accrate, provided the operating Engineer takes sufficient pains to isolate the most potential spot of maximum water yield, in that particular land, which they survey with their Magnetometre. It may take several hours to conduct such an intensive survey. Usually, they do not spend so much of time to conduct such an intensive survey. Where-ever they find Rock-fcactures, by means of their instrument, they fix the drilling point, declaring that water wili be struck there. They do not say how much water could be got at that site. No doudt, it is a laborious and time consuming process. That is why some of the Geologists fail to fix the most potential spot for drilling. They depend on the readings of machine they use for survey, where as a Water Diviner or depens Dowser on his personal Body power (his body is tae Machine for him).

The Water Diviner, pocessing the power of Animal Eletricity in his body uses a forked green stick or a V-shaped metal wire or a pendilum and walks all round the land to be divined. By his gifted talency, he can trace the flow of

under-ground water springs. find out the intersecting or converging points and fix the most potential spot for drilling Bore-Well.

There is no question of 'Trial & error' in this method of Water divingif the Map-Dowsing. The & Water Divining is done with sincerity and the driler follows the instructions.

I do the Map-Dowsing affter getting the correct sketch plan of the concerned property or plot. The whole picture of the varioos water springs available in that land could be traced on the sketch its of by me through this Map-Dowsing. After obtaining this pre-intimation from Map-Dowsing, I proceed to the land and conduct the Divining surveyon the aetual land and fix the point for drilling. This requies lot of patience and concentration. My mind should be fully concentrated on the under-ground water springs available in that particular land. The most interesting and surprising data obtained by this Map-Dowsing and water Divining survey is the following. I don't know whether this happens due to Mind-Transimission or Telepathy or Electro-Magnetic circuit. 'It happens' almost cent percent correct. I cannot explain How it happens. Top scientists in the world are not able to explain how it happens. It is really a Mystery, and a Problem for the future generation to do research and interpret the basic principles involved in this techique.

Now, let me narrate in brief, how I was able to recognise this Water-Divining, the benifit people enjoyed and Their voluntaary publicity on my behaif.

Soon after my retirement from service in 1967-68, I purchased 2½ acres of land, by the inducement of one of my subordinates in Bagalur Road and wanted to become a Poultry Farmer. On the advise of a Purohit, a well was dug out in that land to a depth of about 30ft. No trace of water was seen I got disgusted and d i s a p p o i n t e d. My assistant, Dr. Mohandas came with me to the spot and said that the well dug, is at a wrong site and no water could be struck at the well.

I watched him, what he was doing with a V-shaped green stick in his hands. From the little hint Dr. Mohandas gave me, I was able to identify the hidden 6th sense in me and intensively developed it, read various articles published in the illustrated weekly and Deccand Herald, searched for various literature on this sublect of water Divining & Dowsing. Thanks to these Publishers. Did hundreds and thousands of trials, visited several well-spots and drilliug sites, tried these methods and verified my accuracy if the flow of water through under-ground springs in those open wells, coincided with my observations and gained fnll confidence in what I was doing and predicting. People who got benifited with my accurate Water Divining & Dowsing were very happy and gave publicity among their friends and relations, inside Karnataka and in the neighouring States. Now in the course about 20 years I have become a popular water diviner and Dowser. A God given gift I extedd to those who want to take services for solving their water problems.

I never advertised my name personaly through the press so far, though my friends and well-wishers press me to do so. This is the 4th brief, writer-up I am pleased to give for the valued Souvenir pertaining to the Inaugural function of the Building of the Kodagu Mathu Daksnina Kannada Gowda Samaja, Bangalore.

So far, I have Divined & Dowsed roughly about 10,000 Bore-wells & open wells in Karnataka, Maharastra, Gujarat, Madya Pradesh, Andra, Tamil Nad and Kerala States, and I should confees that the success is about 95% According to my observation and follow up of the 5% failures, it has been noticed that this is due to Human Errors and not due to the defect of Divining Art or Dowsing principles. The Executors of such wells, either deviate ½ to 1½ ft from the site fixed by me or do not drill to the depth I predicated or due the incapablity of the drilling machine penetrating deep enough. If the instructions are followed with implicit faith on my prediction, there should have been 100% success. I am fully convinced of this fact. One thing is very very important.

The person getting the Bore-well drilled should have full faith on the prediction given by me. He should not get thiugs done with hesitation or doubts.

I have not kept this art and science as a secret for myself. I have taught this to hundereds of people who were desirous of knawing it, but it requires lot of concentration and trials to come to certain stage of perfection of your prediction. With half knowledge, we should not encourage people to drill or dig a well at a particular spot, as the investment on such wells amounts to several thousands of rupees and we should not give room for such losses due to failure of getting under ground water.

It this art of Water Divinging & Dowsing, the most wonderful part is the GIFT OF MAP-DOWSING. I my self wonder how this happens Literature indicate that the Electricity generated in the Human Boddy has relations to the Sun, the planets, the earth and the concerned objects deep under-ground, through the Electo-Magnatic vibration or Radlation passing through a V-shaped green stick or metalic rod or chains or metalic pendulums, held in our hand and will have relation to Jyothisys Shastra, the Radar power, Cosmic rays, the Alpha waves & the Mental energy of the operator. It is a deep study and a bit difficult to expess in clear terms of scientific words.

## MAP DOWSING

I have mentioned above, about Map-Dowsing. If the correct sketch of any bit of land or site or property of any extension is sent to me, indicating the exact East-West directions of the particular, land, I am able to trace out and mark on the sketch plan, the various flows of deep under ground water springs in that particular plot, sitting on my table at home, And after marking these

on the sketch, I go to the particular land or site to countercheck the accuracy and fix the Bore-well or open well It is most thrilling experience to observe that what has been traced out in the sketch plain, exactly agrees with the ground potency of deep-underground water sources. This Is cent percent.

I hsve tried this on thousands of cases and it exactly coincides in every spot I divined or Dowsed. This is a most wonderful phenomenon and looks like a miraele. Human body looks to be wonderfull living machine endowed with various Hidden Talents.

I have tried this on thousauds of cases and it exactly coincides in every spot I divined or Dowsed. This is a most wonderful phenamenan and looks like a mircale. Human body looks to wonder full living machine endowed with various Hidden Talents.

This water-Divining and Dowsing art looks to be beyond the known reach of Science. It it is understood that all Bodies and Objects emit Radiation. These Radiations act as stimulai upon the mind of the Dowser bringing about a Reflex action which forces to twist the V-shaped green stick or the metalic pendlum in the operators hand.

Map-Dowsing has been explained as an exercise of the Human Faculty that induces one to obtain information in some Manner beyond the power and scope of the 5 standard human senses (vis, testing, hearing, seeing, touching & smelling). This Rediation power which helps in Dowsing may be termed as the Extraodinary power or 6th sense, available in a few of the human bodies.

It is known fact that these techniqes have been in use in our country since perhistoric times and the Jyotish Shastra seem to have a relation to this art and the SUN & the Plantes have their remote action on Dowsing principles involved. The Germans seem to have used Dowsers during the war to locate enimy ships on the high seas at remote palces, the French and British used the Dowsers for crime detection and the Russians for sensing of Mineral deposits deep underground. One American Astronaut seems to have carried a Y-shaped green stick to the Moon to test if there is water or minerals in the Moon.

## ಕಂಗಾಲಾಗಿದ್ದ ರೈತರ ಕಣ್ಣಲ್ಲಿ ಹರ್ಷದಹೊನಲನ್ನು ತಂದ ಭಗೀರಥ

ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ತಿಮ್ಮನಹಳ್ಳಿ ಸುತ್ತಲಿನ ಗ್ರಾಮಗಳ ರೈತರು ಸಣ್ಣ ಪುಟ್ಟ ಜಮೀನುದಾರರೂ-ಅಡಕೆ ತೆಂಗಿನತೋಟ ಪಡೆದವರು ನಿರಂತರವಾಗಿ ಮಳೆ ಇಲ್ಲದೆ ತೆಂಗು-ಅಡಿಕೆ ತೋಟ ಒಣಗತೊಡಗಿದ್ದವು. ದಿಕ್ಕು ತೋಚದಾಗಿ ತಲೆಯ ಮೇಲೆ ಕೈ ಹೊತ್ತು ಕುಳಿತರು. ಕಂಗೆಟ್ಟ ಜನ ತೋಟದ ಮರಗಳು ಒಣಗುತ್ತಿದ್ದುದನ್ನು ಕಂಡು ಹೊಟ್ಟೆ ಕಿವಿಚಿದಂತಾಗುತ್ತಿತ್ತು. ಪಾಪ ಇಂತಹ ಸಂದರ್ಭದಲ್ಲಿ ತಿಮ್ಮನಹಳ್ಳಿ ಜಮೀನ್‌ದಾರ್ ಶ್ರೀ ಟಿ. ಎಸ್. ಲಕ್ಷ್ಮೀನರಸಿಂಹಯ್ಯರವರ ತೋಟದಲ್ಲಿ ತೆಗೆದ ಕೊಳವೆಬಾವಿಯಲ್ಲ ಪ್ರವಾಹದೋಪಾದಿಯಲ್ಲಿ ಹೊರ ಬಂದ ನೀರನ್ನ ಕಂಡ ಗ್ರಾಮದ ಜನ ಆಶ್ಚರ್ಯ ಚಿಕಿತರಾಗಿ ಜಾತ್ರೆಗೆ ಬಂದಂತೆ ಬರಲಾರಂಭಿಸಿ ಗಂಗಾ ಪ್ರವಾಹದಂತೆ ಬಂದನೀರನ್ನು ಕಂಡು ಸಂತೋಷದಿಂದ ಮೈಉಬ್ಬಿಸಿದರು. ಯಾರ ತೋಟ ಒಣಗುತ್ತಿತ್ತೊ ಅವರುಗಳು ಬಂದು ತಮ್ಮ ತೋಟದಲ್ಲ ಬಾವಿ ತೋಡಿಸುವುದಕ್ಕೆ ಸ್ಥಳ ಗುರ್ತುಮಾಡಿ ಎಂದು ಪ್ರಾರ್ಥಿಸಿದರು.

ದೇವಲೋಕದಿಂದ ಗಂಗೆಯನ್ನು ಧರೆಗೆ ತಂದ ಭಗೀರಥನಂತೆ ಇಲ್ಲಿ ಗಂಗೆಯನ್ನು ತಂದ ಮಹಾನುಭಾವ ಯಾರೆಂದು ಕುತೂಹಲದಿಂದ ತೆಂಗಿನ ತೋಟದ ಮಾಲೀಕರನ್ನು ಪ್ರಶ್ನಿಸಿದರು.

ಯುವಕನಂತೆ ಕಾಣುತ್ತಿದ್ದ 75 ವರ್ಷದ ಸರಳ ವ್ಯಕ್ತಿಯನ್ನು ತೋರಿಸಿ-ಇವರೇ, ನೋಡಿ ನನಗೆ ಇಲ್ಲಿ ಜಲವಿದೆ ತೆಗೆಯಿರಿ ಎಂದು ಅಲ್ಲಿ ಸಾಮಾನ್ಯರಂತೆ ನಿಂತಿದ್ದ ವ್ಯಕ್ತಿಯನ್ನು ತೋರಿಸಿದರು. ಒಣಗುತ್ತಿದ್ದ ತೋಟಗಳ ಮಾಲೀಕರು ಅವರನ್ನ ಮುತ್ತಿಕೊಂಡು ತಮ್ಮ ತೋಟರಲ್ಲಿ ಒಂದು ಜಲಬರ.ವ ಸ್ಥಳ ತೋರಿಸಬೇಕೆಂದರು.

ಮುವತ್ತು ಮಂದಿಗೆ ಜಲಬರುವ ಸ್ಥಳಗಳನ್ನು ತೋರಿಸಿದರು, ಇಂದು ಅವರುಗಳು ತಮ್ಮ ತೋಟಗಳಂತೆಯೂ ನೀರು ಬರುತ್ತಿರುವುದನ್ನು ಕಂಡು ಸಂಭ್ರಮ ದಿಂದಿದ್ದಾರೆ.

### ಡಾ॥ ವೀರಪ್ಪಗೌಡ

ದಕ್ಷಿಣಕನ್ನಡಜಿಲ್ಲೆಯ ವಿಠಲ ಗ್ರಾಮದಲ್ಲಿ ಜನಿಸಿದ ಶ್ರೀ ಕೆ. ವೀರಪ್ಪಗೌಡ ಮದರಾಸಿನ ವೆಟರ್ನರಿ ಕಾಲೇಜಿನಲ್ಲಿ ಪಧವೀಧರರಾಗಿ ಅಮೆರಿಕಾ ವಿಶ್ವವಿದ್ಯಾನಿಲಯದ ಪೋಸ್ಟ್‌ಗ್ರಾಜುಯೇಟ್ ೧೯೩೭ರಲ್ಲಿ ಕೊಡಗಿನ ಪಶುಪಾಲನಾ ಇಲಾಕೆಯಲ್ಲಿ ವೈದ್ಯರಾಗಿ ಸೇರಿ ಕರ್ನಾಟಕ ರಾಜ್ಯದಲ್ಲಿ ಪೌಲ್ಟ್ರಿಡೆವಲೆಪ್‌ಮೆಂಟ್ ಅಧಿಕಾರಿಗಳಾಗಿ ನಿವೃತ್ತರಾದರು.

ನಿನಗೆ ಅಂತರ್ಜಲದ ಬಗ್ಗೆ ಮಾಹಿತಿ ಏನೂ ಇರಲಿಲ್ಲ. ನಿವೃತ್ತನಾದ ಮೇಲೆ ನಾನು ಬೆಂಗಳೂರು ದೇವನಹಳ್ಳಿ ರಸ್ತೆಯಲ್ಲಿ ಜಮೀನು ಕೊಂಡು ಬಾವಿ ತೆಗೆಯಲು ಹೋದಾಗ ಡಾ॥ ಮೋಹನ್‌ದಾಸ್ ಅವರು ಅಂತಃಜಲ ಶೋಧನಾ ಬಗ್ಗೆ ಮಾಹಿತಿ ಕೊಟ್ಟರು. ಆ ಮಾಹಿತಿ ನನ್ನಲ್ಲಿ ಸುಪ್ತದಾಗಿದ್ದ ಶಕ್ತಿ ಬೆಳಕಿಗೆ ಬರಲು ಸಾದಕವಾಯಿತು. ಅನಂತರ ಈ ಅಂತರ್ಜಲ ಶೋಧನೆ ಬಗ್ಗೆ ಅಧ್ಯಯನ ನಡೆಸಿಸಿದ್ದೆನು ಪವಾಡವಲ್ಲ. ೧೯ನೇ ಶತಮಾನದಿಂದ ಜರ್ಮನಿ-ರಷ್ಯಾ ದೇಶಗಳಲ್ಲೂ ಅಭ್ಯಾಸದಲ್ಲಿರುವ ಒಂದು ಸಾಧನೆಗಳ ಈ ಬಗ್ಗೆ ಪುಸ್ತಕಗಳೂ ಪ್ರಕಟವಾಗಿವೆ ಎಂದು ವಿಜಯವಾಣಿಗಿತ್ತ ಸಂದರ್ಶನದಲ್ಲಿ ತಿಳಿಸಿದರು,

ಶ್ರೀಯುತರು ಪ್ರಚಾರಪ್ರಿಯರೂ ಅಲ್ಲ, ಈವರೆಗಾಗಲೇ 10,000 ಬಾವಿಗಳನ್ನು ತೋರಿಸಿದ್ದಾರೆ, ಕೊಡಗಿನ ಕಾಫಿ ಎಸ್ಟೇಟ್‌ಗನೇಕವು ಇವರ ನೆರವಿನಿಂದ "ಬ್ಲಾಸಮ್ ಪವರ್" ಪಡೆಯಲು ಸಹಾಯಕವಾಗಿದೆ ಕೆರೆ ನಿರ್ಮಾಣಕ್ಕೂ ಮಾರ್ಗದರ್ಶನವಿತ್ತಿದ್ದಾರೆ. ಇದು ವರವೊ-ಸಾಧನೆಯೋ, ಅಂತೂ ಕಂಗೆಟ್ಟದ್ದ ರೈತರಿಗೆ ಆಶಾಜ್ಯೋತಿಯನ್ನು ಬೆಳಗಿಸಿದ್ದಾರೆ ಶ್ರೀ ವೀರಪ್ಪಗೌಡರು,

# ಆಟ* — ನೋಟಕನ ದೃಷ್ಟಿಯಲ್ಲಿ

ಪ್ರೊ॥ ಮಾಹಾಜಿ ಜನಾರ್ದನ
ಪ್ರಿನ್ಸಿಪಾಲರು,
ವಿವೇಕಾನಂದ ಕಾನೂನು ಕಾಲೇಜು, ಬೆಂಗಳೂರು.

---

[ಭಾರತದಲ್ಲಿ ಕರಾವಳಿಯ ಜನ. ಬುದ್ಧಿಯಲ್ಲಿ ಚತುರರು, ಈ ಪ್ರದೇಶಗಳಲ್ಲಿ ಸಂಸ್ಕೃತಿ, ರಾಜಕಾರಣ, ಸಾಹಿತ್ಯ, ನೃತ್ಯಕಲೆ, ಸಂಗೀತ ಕಲೆಗಳಲ್ಲಿ ಬೇರೆಡೆಗಿಂತ ಹೆಚ್ಚಿನ ಪ್ರೋತ್ಸಾಹ ಉತ್ಸಾಹ. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಅವರದ್ದೇ ಮುಂದಾಳ್ತನ, ಅದರಂತೆಯೇ ಕರ್ನಾಟಕದ ಕರಾವಳಿಯ ಜನರಲ್ಲಿ ಈ ಗುಣಗಳನ್ನು ಕಾಣಬಹುದು. ಆಂಗ್ಲರ ರಾಜ್ಯಭಾರದಲ್ಲಿ ಕರೆಯಲ್ಪಟ್ಟಿದ್ದ "ಕೇನರಾ, ಪ್ರಾಂತ್ಯ ಇಂದು ಉತ್ತರ ಕನ್ನಡ ದಕ್ಷಿಣ ಕನ್ನಡ ಜಿಲ್ಲೆಗಳಾಗಿವೆ, ಇವೆರಡು ಜಿಲ್ಲೆಗಳು ಯಕ್ಷಗಾನಕ್ಕೆ ಪ್ರಸಿದ್ಧ. ಈ ಒಂದು ಕಲೆಯ ಪ್ರಭಾವದಿಂದಾಗಿ ಅಲ್ಲಿನ ಸಾಮಾನ್ಯ ಜನರಿಗೂ, ರಾಮಾಯಣ ಮಹಾಭಾರತ ಮತ್ತು ಪುರಾಣಗಳಲ್ಲಿ ಬರುವ ಪ್ರಸಂಗಗಳು ಮನೆ ಮಾತಾಗಿ ನಿಂತಿದೆ. ತರ್ಕ ಶಾಸ್ತ್ರದ ಅಭ್ಯಾಸವಿಲ್ಲ ದಿದ್ದರೂ ಪ್ರಸಂಗಗಳ ಅಭಿನಯಗಳಲ್ಲಿ ತಮ್ಮದೇ ಆದ ರೀತಿಯ ತಾರ್ಕಿಕ ರೀತಿಯ ಸಂಭಾಷಣೆಯು ಅಲ್ಲಿನ ದಿನ ನಿತ್ಯ ಜೀವನದಲ್ಲಿ ಹಾಸು ಹೊಕ್ಕಾಗಿ ಪರಿಣಮಿಸಿದೆ. ಈ ಕಲೆಯ ವಿಷಯವಾಗಿ ಪ್ರೊ॥ ಜನಾರ್ದನನವರು ಕನ್ನಡ ಜಿಲ್ಲೆಗಳ ಯಕ್ಷಗಾನದ ಹುಟ್ಟು, ಅದರಲ್ಲಿ ಭಾಗವಹಿಸಿದ ಕಲಾವಿದರು ಸಂಗೀತ ಗಾರರ ವಿಷಯವನ್ನು ಶೂಕ್ಷ್ಮ ಪರಿಚಯದೊಡನೆ ಅವರಲ್ಲಿರುವ ಕಲಾ ನೈಪುಣ್ಯ ವನ್ನು ವಿವರಿಸಿ ಯಕ್ಷಗಾನದ ಮಹಿಮೆಯನ್ನು ಚಿತ್ರಿಸಿ ವಾಚಕರಿಗೆ ಯಕ್ಷಗಾನ ಕಲೆಯ ವಿಷಯ ಹೆಚ್ಚಿನ ರೀತಿಯಲ್ಲಿ ಆಶಕ್ತಿಯುಂಟು ಮಾಡಿ ಕಲೆಯ ಹೆಚ್ಚಿನ ಅಭಿವೃದ್ಧಿಗೆ ಪ್ರೋತ್ಸಾಹವನ್ನಿತ್ತಿದ್ದಾರೆ. ಇದರಿಂದಾಗಿ ನಮ್ಮ ನಾಡಿನ ಜಾನಪದ ಸಾಹಿತ್ಯದ ಮತ್ತು ಕಲೆಯ ಸಂಪತ್ತು ಹೆಚ್ಚಲೆಂದು ಹಾರೈಸುತ್ತೇವೆ.)

ಸಂ]

---

* ನಿಘಂಟಿನಲ್ಲಿ ಆಟ ಎಂಬ ಪದಕ್ಕೆ ಬೇರೆ ಬೇರೆ ಅರ್ಥಗಳಿದ್ದರೂ ದಕ್ಷಿಣ ಕನ್ನಡದಲ್ಲಿ ಆಟ ಎಂದರೆ ಯಕ್ಷಗಾನ ಬಯಲಾಟವೆಂದೇ ಪ್ರಧಾನ ಅರ್ಥವು.

"ಕೋಳಿ ಕೂಽಗಿತುಽ ಬೇಗಽ......
...... ನಾಳೆ ಬರುಽವೆಽ ರತೀ..."

ಈಗ ಸುಮಾರು ಐವತ್ತು ವರ್ಷಗಳ ಒಂದು ರಾತ್ರಿ. ಆಗ ವಿದ್ಯುದ್ದೀಪಗಳಿರಲಿಲ್ಲ; ಧ್ವನಿವರ್ಧಕಗಳಿರಲಿಲ್ಲ. ಡೇರೆಗಳೂ ಇರಲಿಲ್ಲ. ತೆಂಗಿನ ಗರಿಗಳಿಂದ ಹೊದಿಸಲ್ಪಟ್ಟ ನಾಲ್ಕು ಬಿದಿರುಕಂಬಗಳಿಂದ ನಿರ್ಮಿತ ಹಾಗೂ ಎರಡು ಗ್ಯಾಸ್ ಲೈಟುಗಳಿಂದ ಪ್ರಕಾಶಿತ ರಂಗವೇ ರಂಗಸ್ಥಳ. ಕೊರೆಯುತ್ತಿದ್ದ ಪನ್ನಿ ತಿಂಗಳ ಚಳಿಗೆ ಹೆದರದೆ ನೆರೆದಿರುವ ಸಹಸ್ರಾರು ಮಂದಿಯ ಸಭೆ ಸುಳ್ಯದ ಬಾಳೆಮಕ್ಕಿಯಲ್ಲಿ, ಕಂಚಿನ ಕಂಠದ ಅಣ್ಣಿ ಭಾಗವತರು* ಹಾಡುತ್ತಿದ್ದರು. ಅವರ ತಮ್ಮ ಚೆಂಡೆಯ ಗಾರುಡಿಗ ಅಡೂರು ಶಿವ ಬಾರಿಸುತ್ತಿದ್ದ, ಚೆಂಡೆಯ ಮಾರ್ದನಿ ದೂರದ ಪೂಮಲೆಗೆ ಎರಗಿ ಪುನರಪಿ ಸುತ್ತಿತ್ತು. ಹಾಡು ಸಭಿಕರ ಮನಮುಟ್ಟಿ ರಂಜಿಸಿತು. ಏನೂ ಅರಿಯದ ಮುಗ್ಧರೂ ಮಕ್ಕಳೂ ಸಹಾ ಆನಂದದಲ್ಲಿ ತೇಲಾಡಿದರು.

"...ನಾಳೆ ಬರುಽವೆ ರತೀ...ರಮಣಽ .."

ಸಭೆಯಲ್ಲಿ ಹಿರಿಯರು ಮಾತಾಡಿಕೊಳ್ಳುತ್ತಿದ್ದರು; ....ಮಂಜುನಾಥ ಭಾಗವತರಾದ ಮೇಲೆ ನಮ್ಮ ಅಣ್ಣಿಯೇ ಸೈ. ಇದೇನು ಕೋಳಿ ಕೂಗುತ್ತಿದೆಯೋ, ಮರಿಯಾನೆಯು ಕೊಂಬಿಡುತ್ತಿದೆಯೋ ಅಥವಾ ಚೆನ್ನಕೇಶವ ನೆದುರು ಶಂಖವಾದನವಾಗುತ್ತಿದೆಯೋ... ನಮ್ಮ ಅಣ್ಣಿ ಹಾಡಿದರೇನೆ ಅದು ಭಾಗವತಿಕೆ. .' ಆಗ ನನಗೆ ಹೊಳೆದದ್ದು ; ಯಾವುದೇ ಪ್ರಸಂಗವಾಗಲಿ, ಯಕ್ಷಗಾನದ ಜೀವಕಳೆ ಇರುವುದು ಭಾಗವತಿಕೆಯಲ್ಲಿ ಎಂದು. ಎಲ್ಲಿ ನಿಯಮ ಬದ್ಧ ಭಾಗವತಿಕೆ ಇಲ್ಲವೋ ಅಲ್ಲಿ ಯಕ್ಷಗಾನಕ್ಕೆ ಭವಿಷ್ಯವಿಲ್ಲ: ಬೆಲೆಯಿಲ್ಲ, ಭಾಗವತರಿಂದ ಯಕ್ಷಗಾನ; ಭಾಗವತರಿಂದ ಭಾಗವತ, ಭಾಗವತಕ್ಕಾಗಿ ಭಾಗವತ ಮತ್ತು ಯಕ್ಷಗಾನ.

ಸುಮಾರು ಒಂದು ನೂರು ವರ್ಷಗಳ ಹಿಂದಿನಿಂದಲೂ ಕರ್ಣಾಟಕದ ಪಡುವಣ ಕರಾವಳಿ ಹಾಗೂ ಒಳನಾಡಿನಲ್ಲಿ ಯಕ್ಷಗಾನ ಕಲೆ ರೂಪೆತ್ತು ಮೈಗೊಂಡಂತೆ ಕಂಡುಬರುತ್ತದೆ. ಸತ್ಸಂಪ್ರದಾಯಸ್ಥರಾದ ಜನ–ಬ್ರಾಹ್ಮಣರಿರಲಿ, ಬಂಟರಿರಲಿ, ಗೌಡರಿರಲಿ, ಗಾಣಿಗರಿರಲಿ, ಬಿಲ್ಲವರಿರಲಿ ಅಥವಾ ಯಾವುದೇ ಜಾತಿ ಪಂಗಡಕ್ಕೆ ಸೇರಿದವರಿರಲಿ – ಭತ್ತದ ಕೊಯ್ಲು ಮುಗಿದ ತರುವಾಯ ಮುಂದಿನ ವಿಷು ಸಂಕ್ರಮಣದ ತನಕ ಹೆಂಡ ಜುಜೂಗಳಿಗೆ ಈಡಾಗದೆ ಭಾಗವತ ಸ್ಮೃತಿಗಾಗಿ ಸಜ್ಜಾಗುತ್ತಿದ್ದರು, ಜಾತಿ ವ್ಯತ್ಯಾಸ ಹಾಗಿರಲಿ—ಭಾಷಾ ವ್ಯತ್ಯಾಸವೂ ಅಡ್ಡಿಯಾಗಲಿಲ್ಲ. ತುಳು, ಮಲೆಯಾಳ ಮನೆ ಮಾತುಳ್ಳವರೂ ಕನ್ನಡದಲ್ಲಿ ಹಾಡಿದರು, ಆಡಿದರು, ನಲಿದಾಡಿದರು. ಪಾರ್ತಿ ಸುಬ್ಬನಂತೂ ಯಕ್ಷಗಾನ ಬ್ರಹ್ಮನೇ ಆದ, ಭಾಗವತ ವಿಚಾರ ವಿನ್ಯಾಸಗಳಿಗೆ ಕ್ರೈಸ್ತ ಮುಸಲ್ಮಾನರಾದಿಯಾಗಿ ಕಲಾವಿದರು ಮುಂದೆ ಬಂದರು. ಆಗ ಅವರು ಹಣಕ್ಕೆಂದು ಗೆಜ್ಜೆಕಟ್ಟಲಿಲ್ಲ, ಕುಣಿಯಲಿಲ್ಲ, ಭಾಗವತ ನೀತಿ ಬೋಧೆಗಳನ್ನು ಮನಸಾರೆ ಮೆಚ್ಚಿ ಮರ್ಯಾದೆಯಿಂದ ಎಲ್ಲರೂ ಒಂದಾಗಿ ಮುಂದಾದರು. ವೇಷ ಭೂಷಣಗಳಿಗೆ ಆಸ್ಪದವಿಲ್ಲದ ವೇಳೆಗಳಲ್ಲಿ ತಾಳ ಮದ್ದಳೆ ಕೂಟಗಳನ್ನೇರ್ಪಡಿಸಿ ಪಾಲ್ಗೊಂಡು ಭಾಗವತ ಜ್ಯೋತಿ ಬೆಳಗಿದರು. ಕವಿ ಮುದ್ದಣ್ಣನ ಕಾಲಕ್ಕೆ ಆಗಲೇ ಯಕ್ಷಗಾನ ತನ್ನದೇ ಆದ ವೈಶಿಷ್ಟ್ಯವುಳ್ಳ ಒಂದು ಸಂಗೀತ–ನಾಟ್ಯ ಪ್ರಕಾರವೂ ಸಾಹಿತ್ಯದ ಸಾರಸತ್ವ ಮುಖವೂ ಆಗಿತ್ತು. ಹೀಗೆ ಬೆಳೆಯಿತು ಈ ಜನಸಂಪದ ಕಲೆ. ಇಂತೀ ಜನಮೋಹಕ ನೀತಿ ಪ್ರಧಾನ ನಾಟ್ಯ ಸಂಗೀತವೇ ಯಕ್ಷಗಾನ. ಇದರ ಮಾಧುರ್ಯವೋ 'ಮದ್ದವರೆ ಬಲ್ಲರ್ ಬೆಲ್ಲದ ಸವಿಯಂ' ಎಂಬಂತೆ' ಮದುರಾತ್ ಮಧುರಂ ಯಕ್ಷಗಾನಂ.

---

* ಅಡೂರು ಅಣ್ಣಿಯಾನೆ ರಾಮಕೃಷ್ಣ ಭಾಗವತರು: ಅವರು ಅಣ್ಣಿ ಭಾಗವತರೆಂದೇ ಪ್ರಸಿದ್ಧ.

ಬಾಹ್ಯಕ್ಕೆ ಯಕ್ಷಗಾನವು 'ತೆಂಕು ತಿಟ್ಟು' ಮತ್ತು 'ಬಡಗು ತಿಟ್ಟು' ಎಂಬೀ ಎರಡು ಮಾರ್ಗಗಳಿರುವಂ ಕಂಡರೂ ಖಚಿತವಾದ ಭಿನ್ನತೆಯಿದ್ದಂತೆ ಅನಿಸುವುದಿಲ್ಲ. ಯಾಕಂದರೆ, ಯಕ್ಷಗಾನವು ಒಂದು ರಸಸಂಯೋಜನೆ. ಗುರುತರ ವಸ್ತು, ವೈಭವಯುತ ಅಲಂಕಾರ, ಸೂಕ್ತಗಾನ, ಅಭಿವ್ಯಕ್ತನಟನ ಮತ್ತು ಸಮರ್ಪಕ ಸಂವಾದ ಇವುಗಳು ಮೇಳೈಸಿದ ಶ್ರೀಮಂತ ಪಂಚಕಜ್ಜಾಯವೇ ಯಕ್ಷಗಾನ, ಜೊತೆಗೆ ಅಜೀರ್ಣವಾದಂತೆ ಅಲ್ಲಲ್ಲಿ ಹಾಸ್ಯದ ಉಪ್ಪಿನಕಾಯಿ ಇಂತಿದೆ ಯಕ್ಷಗಾನವ ರಸಪೌತಣ. ರುಚಿಯನ್ನು ಸವಿಯಲಾರದವನು ನಿರ್ಭಾಗ್ಯನೆ ಸರಿ.

ಇತ್ತೀಚೆಗೆ ಯಕ್ಷಗಾನವು ಹಣಕ್ಕೆ ಬಲಯಾಗುತ್ತಿದೆ, ನವ್ಯತೆಯ ಹೆಸರಿನಲ್ಲಿ ಭಾಗವತೇತರ ಅಪ್ರಾಸಂಗಿಕ ಪ್ರಸಂಗಗಳೂ ಸಾಕಷ್ಟು ಹುಟ್ಟಿಕೊಂಡಿವೆ. 'ಇಂದೇಂ ರಾಹು ಚಂದನಂ ತುಡಿಕಿದಂತಿದೆ' ಈ ಗ್ರಹಣ ಹೆಚ್ಚುಕಾಲ ಇರಲಾರದು. ಯಕ್ಷಗಾನ ಚಂದ್ರಮನನ್ನು ರಾಹು ಕೇತುಗಳು ನುಂಗಿ ನಶಿಸಲಿಲ್ಲ. ಕುಲಕೆಡದೆ ಉಳಿದಿರುವ ಭಾರತದ ಕಲಾಮೌಲ್ಯಗಳಲ್ಲಿ ಯಕ್ಷಗಾನವೂ ಒಂದು ಎಂದು ಹೇಳಬಹುದಾಗಿದೆ.

ಜಗತ್ತಿನಲ್ಲಿ ಎಲ್ಲೂ ಸಿಗದಂತಹ, ಕಾಣಲಾರದಂತಹ ಮನಮೋಹಕ ವರ್ಣ–ವೇಷ–ಅಲಂಕಾರವನ್ನು ಯಕ್ಷಗಾನ ವೇಷಗಳಲ್ಲಿ–ಅದರಲ್ಲೂ ತೆಂಕುತಿಟ್ಟಿನ ವೇಷಗಳಲ್ಲಿ–ನೀವು ಇಂದೂ ಕಾಣಬಹುದು. ಆಗಿಹೋದ ಮಹಿಮಾವಂತ ಬಣ್ಣದ ಮಾಲಿಂಗನೆ ಯಾಕೆ, ಈ ತಲೆಮಾರಿನ ಬಣ್ಣದ ವೇಷ ವೈಭವ ಯಾರನ್ನು ದಂಗುಬಡಿಸಲಿಲ್ಲ? ತೆಂಕುತಿಟ್ಟಿನ ಮಹಿಷಾಸುರ ರಾವಣ, ದೇವೇಂದ್ರ ಮುಂತಾದ ವೇಷಗಳಿಗೆ ಮನಸೋಲದವರು ಅಂಧರೇ ಸರಿ. ತೆಂಕು ತಿಟ್ಟಿನ ಮಾತುಗಾರಿಕೆ ಒಮ್ಮೊಮ್ಮೆ ಹದಗೆಡುವುದು ಒಂದು ದೊಡ್ಡ ದೌರ್ಭಾಗ್ಯ ಎನ್ನಬೇಕಾಗುತ್ತದೆ. ಅಂತಹ ಕಸ ನಿಮಿಷಗಳನ್ನು ಬಿಟ್ಟರೆ ತೆಂಕು ತಿಟ್ಟಿನ ಸಂವಾದ ಪ್ರೌಢಿಮೆ ಎರಡಿಲ್ಲದ ಮೇರು ಸಾಧನೆಯಾಗಿದೆ. ಅಲ್ಲಿ ನೀವು ಕಾಣುವ ವಿದ್ವತ್ತು, ಪಾಂಡಿತ್ಯ ಚಿತಾಚಿತ್ಯಗಳಿಗೆ ನಮ್ಮ ವಿಶ್ವವಿದ್ಯಾಲಯಗಳ ಆಚಾರ್ಯರೂ ದಾರ್ಶನಿಕರೂ ಸೈ ಎಂದು ತಲೆ ದೂಗಲೇಬೇಕು. ತೆಂಕು ತಿಟ್ಟಿನವರ ಜತೆ ಹೋಲಿಸಿದಲ್ಲಿ ಬಡಗು ತಿಟ್ಟಿನವರ ವಸ್ತ್ರಾಲಂಕಾರ ವೇಷ ಭೂಷಣಗಳು ಕಡಿಮೆಯೇ. ಮುಕ್ಕಾಲು ಮೂರು ಭಾಗವೆಲ್ಲಾ ಒಂದೇ ತೆರನ ಕೇದಗೆ ಕೀರಿಟವೇ ಕೀರಿಟ. ಪಾತ್ರಗಳಿಗೂ ಕೀರೀಟಗಳಿಗೂ ಸಂಬಂಧವಿಲ್ಲ, ಕಲಾ ವಿನ್ಯಾಸವಿಲ್ಲ.* ರಾಜಕೀಯ ಗುಂಪಿನಲ್ಲಿ ಎಲ್ಲರೂ ಒಂದೇ ತೆರನ ಟೋಪಿ ಧರಿಸಿದ ಹಾಗೆ : ಕೇದಗೆ ಕೀರೀಟದಿಂದ ಕೇದಗೆ ಕಿರೀಟಕ್ಕಾಗಿ ಕೇದಗೆ ಕಿರೀಟಕ್ಕೆ ; ತೆಂಕುತಿಟ್ಟಿನವರಲ್ಲಿ ಪಾತ್ರಕ್ಕೆ ಸರಿಯಾದ ಕಿರೀಟ ಹೊಂದಿಸುವ ಸಂಪ್ರದಾಯವಿದೆ** ಕೀರಿಟ ಅಲಂ ಕಾರಣಗಳಿಂದಲೇ ಪಾತ್ರವನ್ನು ಗುರುತಿಸಬಹುದಾಗಿದೆ. ಆದರೆ ಬಡಗು ತಿಟ್ಟಿನಲ್ಲಿ ಭಾಗವತರ ಹಾಡಿನಿಂದ ಅಥವಾ ಕಥಾಸಂದರ್ಭದಿಂದ ನಾವು ಗೆಸ್ಸ್ ಮಾಡಬೇಕಾಗುತ್ತದೆ. ವೇಷದಲ್ಲಿ ನಕುಲನೂ, ಶ್ರೀಕೃಷ್ಣನೂ ಮದನನೂ ಎಲ್ಲರೂ ಒಂದೇ ರೂಪಹೀನ ರೂಪದಲ್ಲಿ ಬರುತ್ತಾರೆ. ಅಂದ ಮಾತ್ರಕ್ಕೆ ಬಡಗು ತಿಟ್ಟು ಕೀಳು ಸಂಪ್ರದಾಯದವರೆಂದು ಖಂಡಿತಾ ತಿಳಿಯಲಾಗದು. ರಂಗ ಮರ್ಯಾದೆಯಲ್ಲಿ ಅವರು ಬಹು ಶ್ರದ್ಧಾವಂತರು. ಎಂದೂ ಒಣ ಹರಟೆಗಳಿಗೆ ಇಳಿಯುವವರಲ್ಲ; ಎಂದೂ ವ್ಯಕ್ತಿ ಪ್ರಾಶಸ್ತ್ಯಕ್ಕೆ ವಸ್ತುವನ್ನಾಗಲಿ ಬಲಿಕೊಡುವುದಿಲ್ಲ. ಅದು ಅವರ ಹೆಚ್ಚುಗಾರಿಕೆ.

---

* ಆದರೆ ಕುಮಟಾ ಗೋವಿಂದ ನಾಯ್ಕರ ಹನುಮಂತನ ವೇಷ ಮಾತ್ರ ಒಂದು ಅಭೂತಪೂರ್ವ ವೇಷ ವೈಖರಿ; ಗೋಪಿಂದ ನಾಯ್ಕರು ಒಂದು ಸಿದ್ಧಿ.

** ಇತ್ತೀಚೆಗೆ ತೆಂಕು ತಿಟ್ಟಿನಲ್ಲೂ ಸಂಪ್ರದಾಯ ಭಂಗ ತೋರುತ್ತದೆ. ಸತ್ಸಂಪ್ರದಾಯವನ್ನು ನಿರೀಕ್ಷಿಸುವವರೂ ಕಡಿಮೆಯಾಗುತ್ತಿದ್ದಾರೋ ಏನೊ !

ಬಡಗು ತಿಟ್ಟಿನವರದು ನಟನ ಪ್ರಧಾನ ಯಕ್ಷಗಾನ. ಚಿಟ್ಟಾಣಿಯವರ* ಗದಾಯುದ್ಧದ ದುರಂತ ಕೌರವೇಶ್ವರ, ಭಸ್ಮಾಸುರ. ಮಹಾಬಲರ ಜಮದಗ್ನಿ, ದುಷ್ಟಬುದ್ಧಿ ಹಾಗೂ ಭೀಷ್ಮ. ಶಂಭು ಹೆಗ್ಗಡೆಯವರ ಕಾರ್ತವೀರ್ಯ, ಭದ್ರಸೇನ ಇವುಗಳು ಬಹು ಮಾರ್ಮಿಕ ವೇಷ ವಿಶೇಷಗಳು, ಭಾಗವತಕ್ಕೆ ಒಪ್ಪವಾದ ಓರಣವಾದ ಸಮಗ್ರ ಪಾತ್ರಗಳು. ತೆಂಕು ತಿಟ್ಟಿನವರ ನಟನ ಇವರೊಂದಿಗೆ ಹೋಲಿಸಿದರೆ ನಿಜವಾಗಿಯೂ ತೀರ ಸಪ್ಪೆಯೆಂದೆನಿಸೀತು. ಲಘುವಾದ ಕೇದಗೆ ಕಿರೀಟದ ಲಾಘವು ಬಡಗು ತಿಟ್ಟಿನವರ ಹಾವಭಾವ ಪ್ರದರ್ಶನಕ್ಕೆ ಒಂದು ರೀತಿಯಲ್ಲಿ ಸಹಾಯಕಾರಿಯಾಗುತ್ತಿರಬೇಕು. ಬಡಗು ತಿಟ್ಟಿನಲ್ಲಿ ಸಂವಾದವು ಒಂದು ಮಿತ ಸಂಭಾಷಣೆ** ವಾದವಾಗಿ ತೋರುವುದೇ ಅಪರೂಪ. ತೆಂಕು ತಿಟ್ಟಿನಲ್ಲಿ ವಾದ ಸಂವಾದವು ಆಟದ ಮುಖ್ಯಭಾಗವಾಗಿದೆ. ಒಮ್ಮೊಮ್ಮೆ ಖಡ್ಗದ ಧಾರೆಯಷ್ಟು ತೀಕ್ಷ್ಣವಾಗುತ್ತದೆ ವಾಕ್ ತೆಂಕು ತಿಟ್ಟಿನ ರಂಗ ಸ್ಥಳದಲ್ಲಿ. ಶೇಣಿ***ಯವರು ಬಲಿಚಕ್ರವರ್ತಿಯಾಗಿ ಕುಂಬಳೆ ಸುಂದರ ರಾವ್ ಶುಕ್ರಾಚಾರ್ಯನಾಗಿ ರಂಗ ಪ್ರವೇಶವಾದರೆ ಅಂದು ವಾಗ್ದೇವಿ ಸರಸ್ವತಿಗಾಯಿತು ಹಬ್ಬದೂಟ; ವೈಯ್ಯಾಕರಣಿಗಳೂ ತಾರ್ಕಿಕರೂ, ಮೂಕರಾಗಬೇಕಾದಂತಹ ಸಮಗ್ರವಾಕ್ ಸರಣಿ, ವಾಕ್ ದರ್ಶನ ವಾಕ್ ಸಾಕ್ಷಾತ್ಕಾರ. ಹರಿದಾಸ ಸಾಮಗರ ಅಕ್ರೂರನೋ ಸಂಜಯನೋ– ಅಲ್ಲಿದೆ ಭಾಗವತ ದಾಸ್ಯ. ಭಾಗವತ ದರ್ಶನ. ಇಂತಿರುವ ಆಟಗಳನ್ನು ನೋಡಿ ಮನದಣಿದು ರಸದ ಬುಗ್ಗೆಯೊಡನೆ ತೇಲಾಡುವ ನೋಟಕನೇ ಪುಣ್ಯಶಾಲಿ ಎಂದೂ ಅನ್ನಬಹುದು. ನನ್ನದು.

ಯಕ್ಷಗಾನವು ಚೆಂಡೆಮದ್ದಲೆಗಳ ಸದ್ದುಗದ್ದಲವಲ್ಲ. ತಾನೊಬ್ಬ ಮೇಧಾವಿಯೆಂದು ಮೆರೆಯುವ ಜಂಭದ ಕೋಳಿಗಳ ಮೆರವಣಿಗೆಯಂತೂ ಅಲ್ಲವೇ ಅಲ್ಲ. ಆಟವು ಒಂದು ಸಮೃದ್ಧ ಕಲಾವಿನ್ಯಾಸ. ಗುರುತರ ವಸ್ತುವು ರಸವಾಗಿ ರಂಜಿಸುವುದು, ವಾಕ್ ಸರಮಯವಾಗಿ ಕಂಗೊಳಿಸುವುದು ಇಲ್ಲಿ ಈ ಕಲೆಯಲ್ಲಿ. ಈ ಕಲೆಯು ದೃಶ್ಯವೂ ಹೌದು; ಶ್ರಾವ್ಯವೂ ಹೌದು: ಮೇಲಾಗಿ ಅದು ಭಾಗವತ ಶಿಲ್ಪ. ಭಾಗವತ ಆಟಕ್ಕೆ ಮಾರುಹೋದ ಅಸಂಖ್ಯಾತರಲ್ಲಿ ನಾನೂಒಬ್ಬ ಮೂಲತಃ ಇದು ಸುಗ್ಗಿಯ ಹಾಡು; ಸುಗ್ಗಿಯ ಸಂದೇಶ; ಮದವೂರ ವಿಘ್ನೇಶನಿಗೆ ನಮನ, ದೇವಿ ದುರ್ಗಾಂಬೆಗೆ ಬಲವಂದು ವಂದನ. ಅದೇ ಭಾಗವತವಾಣಿ' 'ಅಚ್ಯುತ ನಂದನ ಗೋವಿಂದ ರಾಧಾರಮಣ ಗೋವಿಂದಃ'

ವಾಲ್ಮೀಕಿ, ವ್ಯಾಸ, ಶುಕ, ಲಕ್ಷ್ಮೀಶ ಕುಮಾರವ್ಯಾಸರು ಮೈವೆತ್ತು ಬರುತ್ತಾರೆ ಯಕ್ಷಗಾನದಲ್ಲಿ. ನಮ್ಮೊಡನೆ ನುಡಿಯುತ್ತಾರೆ. ನಲಿಯುತ್ತಾರೆ, ನಲಿಸುತ್ತಾರೆ. ಇದು ಇಂದೂ ನಾಳೆಯೂ ಇರಬೇಕಾದ ಬೆಳೆಯುತ್ತಿರಬೇಕಾದ ಜನ ಪ್ರೇರಿತ, ಜನ ಪಾಲಿತ, ಜನ ಪೋಷಿತ ಜನಪದ ಕಲೆ ಯಕ್ಷಗಾನ. ಯಕ್ಷಗಾನ ಮೇಳ ಮೇಳಗಳ ಸಾಧನೆ ಹಾಗೂ ಕೊಡುಗೆ ದೊಡ್ಡದು.

'...ಎಂದಿಗಾದರು ನಿಮ್ಮ ಮಹದುಪಕಾರವ
ಮುಂದೆ ನಾವ್ ಮರೆಯುವುದುಂಟೆ?'

---

* ಚಿಟ್ಟಾಣಿ ರಾಮಚಂದ್ರ ಹೆಗ್ಗಡೆಯವರ ಕಾಲ್ಗೆಜ್ಜೆ ಸರಿಗಮಪದನಿ ಹಾಡುತ್ತಿರುವುದು ಸೂಕ್ಷ್ಮಮತಿಗಳಾದ ನೋಟಕರಿಗೆ ಅನುಭವವಾಗುತ್ತದೆ. ಸದ್ದು ರಾಗವಾಗುತ್ತದೆ, ರಾಗ ರಸವಾಗುತ್ತದೆ. ಚಿಟ್ಟಾಣಿಯವರೊಬ್ಬ ಕಲಾಶಿಲ್ಪಿ ಎಂಬುದು ಅರಿವಾಗುತ್ತದೆ.

** ಬಡಗು ತಿಟ್ಟಿನ ಶ್ರೇಷ್ಠ ಕಲಾವಿದ ಶ್ರೀ ಕೆರೆಮನೆ ಮಹಾಬಲ ಹೆಗ್ಗಡೆಯವರ ಮಾತುಗಾರಿಕೆಯು ವಸ್ತುಬದ್ಧ. ಸಂದರ್ಭೋಚಿತ ಹಾಗೂ ಪ್ರೌಢ ಎಂಬುದನ್ನು ಮರೆಯಲಾಗದು. ಅವರ ಎತ್ತರ ಬಹಳವಾಗಿದೆ.

*** ಶ್ರೀ ಶೇಣಿ ಗೋಪಾಲಕೃಷ್ಣ ಭಟ್ಟರು ಅದೇಕೆ ವಕೀಲರಾಗಲು ಇಚ್ಛೆ ಪಡಲಿಲ್ಲವೋ ಎಂದೆನಿಸುತ್ತದೆ ನನಗೆ; ಅಷ್ಟು ತರ್ಕಬದ್ಧ ಹಾಗೂ ಸೂಕ್ತ ಅವರ ಅರ್ಥಗಾರಿಕೆ.

# ಗೌಡರ ಪರಿಚಯ

ಲೇಖಕರು ;
ಕುದುಪಜೆ ಕೃಷ್ಣಪ್ಪ ಎಂ.ಎ.ಬಿ.ಎಲ್.
ಅಧ್ಯಕ್ಷರು
ಕೊಡಗು ಗೌಡ ವಿದ್ಯಾ ಸಂಘ
ಮಡಿಕೇರಿ

---

[ಪ್ರತಿಯೊಬ್ಬನ ಆತ್ಮಗೌರವ ಮತ್ತು ಆತ್ಮಬಲ ಹೆಚ್ಚಬೇಕಾದರೆ ತಾನು ಯಾರು ? ತನ್ನ ದೇಶ ಯಾವುದು ಅದರ ಚರಿತ್ರೆ ಏನು ? ಎಂಬುದನ್ನು ತಿಳಿದುಕೊಳ್ಳಬೇಕು. ಇದರೊಡನೆ ತನ್ನ ಸಂಸ್ಕೃತಿ ಏನು ಎಬುದು ತಿಳಿದುಕೊಳ್ಳುವುದು ಬಹಳ ಅವಶ್ಯಕ. ಭಾರತ ಸಂವಿಧಾನ ಜಾತ್ಯಾತೀತ ರಾಷ್ಟ್ರವೆಂದು ಘೋಷಣೆ ಮಾಡಿದರೂ ಧರ್ಮದ ಅಭಿವೃದ್ಧಿಯನ್ನು ಮೊಟಕುಗೊಳಿಸುವುದನ್ನು ಬಿಟ್ಟು ಪ್ರತಿಯೊಬ್ಬ ಪ್ರಜೆಯ ಧರ್ಮಾಚರಣೆಗೆ ಬೇರೊಂದು ಧರ್ಮಕ್ಕೆ ಧಕ್ಕೆಯಾಗದಂತೆ ನೋಡಿಕೊಳ್ಳಬೇಕೆಂದು. ಆಯಾಯ ಧರ್ಮಗಳ ಅಭಿವೃದ್ಧಿಗೆ ಅವಕಾಶ ಮಾಡಿಕೊಟ್ಟಿದೆ. ಭಾರತೀಯ ಸಂಸ್ಕೃತಿ ಎಂದರೆ ಎಲ್ಲಾ ಜಾತಿಗಳ ಸಂಸ್ಕೃತಿಯ ಸಮ್ಮಿಲನ. ಆದುದರಿಂದ ಜಾತಿಯ ಸಂಸ್ಕೃತಿಯಿಲ್ಲದೆ ಭಾರತೀಯ ಸಂಸ್ಕೃತಿ ಎಂದು ಕರೆಯಲು ಸಾಧ್ಯವಿಲ್ಲವಾದುದರಿಂದ ಜಾತೀಯ ಇತಿಹಾಸವನ್ನು ತಿಳಿದುಕೊಳ್ಳುವುದರಿಂದ ಒಬ್ಬ ವ್ಯಕ್ತಿಯ ಆತ್ಮಬಲಕ್ಕೆ ಸ್ಫೂರ್ತಿಯನ್ನು ಕೊಡುತ್ತದೆ. ಈ ದಿಶೆಯಲ್ಲಿ ಶ್ರೀ ಕುದುಪಜೆ ಕೃಷ್ಣಪ್ಪನವರ ಲೇಖನ ಯುವ ಪೀಳಿಗೆಗೆ ಗೌಡರ ಪರಿಚಯ ಮಾಡಿಕೊಟ್ಟಿದೆ.

ಸಂ.]

---

"ಗೌಡರು ಎಂದರೆ ಭೂಮಿಗೆ ಒಡೆಯರು ಮತ್ತು ಊರಿಗೆ ಮುಖ್ಯಸ್ಥನು ಎಂದರ್ಥ. ಊರಿಗೊಬ್ಬ ಗೌಡ, ದೇಶಕೊಬ್ಬ ದೊರೆ" ಇದು ಕನ್ನಡದ ನಾಡುನುಡಿ. "ಗೌಡ" ಎಂಬುದು ಹಿಂದಿನ ಕಾಲದಲ್ಲಿ ಪ್ರಚಲಿತವಾಗಿದ್ದ ಒಂದು ಸಂಸ್ಕೃತಿ ಎಂದು ಹೆಸರು. ಗೌಡ ಸಂಸ್ಕೃತಿಯು ಒಂದೇ ಸ್ಥಳದ ಸಂಸ್ಕೃತಿಯಾಗಿರದೆ ಹಲವಾರು ಸ್ಥಳಗಳ, ಜನರ ಮಿಲನದ ಫಲವೇ ಗೌಡ ಸಂಸ್ಕೃತಿಯಾಗಿರುವುದು.

ಗೌಡ ಜನಾಂಗದವರು ಹಿಂದುಗಳು ಮತ್ತು ತಿರುಪತಿಯ ವೆಂಕಟರಮಣ ದೇವರ ಭಕ್ತರು. ವೆಂಕಟರಮಣ ದೇವರನ್ನು ತಮ್ಮ ಕುಲದೇವರೆಂದು ಪೂಜಿಸುವರು. ಅಲ್ಲದೆ "ಹ ರಿ ಸೇ ವೆ" ಎಂಬ ಪೂಜೆಯನ್ನು ಪ್ರತಿ ಕುಟುಂಬದಲ್ಲಿ ಆಚರಿಸಿ, ಸದ್ರಿ ಪೂಜೆಯ ಹರಕೆ ಭಕ್ತಿ ಹಣವನ್ನು ತಿರುಪತಿ ವೆಂಕಟರಮಣ ದೇವರ ಹಣವೆಂದು

"ಮುಡುಪಿ"ನಲ್ಲಿ ಕಟ್ಟಿಟ್ಟು ತಿರುಪತಿಯ ಭಂಡಾರಕ್ಕೆ ತಲುಪಿಸುವ ಕ್ರಮ ರೂಢಿಯಲ್ಲಿದೆ. ಕೆಲವರಿಗೆ "ದುರ್ಗಿ" ಕುಲದೈವ ಕೆಲವರಿಗೆ (ಶರ್ವಾಣಿ) ಮನೆ ದೇವರು. ಕೆಲವು ಕುಟುಂಬದವರು ಭೂತಾರಾಧಕರು. ಇವುಗಳೆಲ್ಲ ಆಚರಣೆಯಿಂದ ಬಂದ ಭಕ್ತಿ ಮಾರ್ಗಗಳು.

ಗೌಡರು ವಿಜಯನಗರ ಸಾಮ್ರಾಜ್ಯದಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ಇದ್ದರೆಂದು ಚರಿತ್ರೆಯಿಂದ ತಿಳಿದು ಬರುತ್ತದೆ. ತಾಳಿಕೋಟೆಯ ಕದನದ ನಂತರ ವಿಜಯನಗರದ ಸಾಮ್ರಾಜ್ಯ ಪತನವಾದ ನಂತರ ಮುಸ್ಲಿಮರ ಆಳ್ವಿಕೆಗೆ ಇಷ್ಟಪಡದೆ ಅಲ್ಲಿಂದ ಇಕ್ಕೇರಿ ಸಂಸ್ಥಾನಕ್ಕೆ ಬಂದರೆಂದು ತಿಳಿದು ಬರುತ್ತದೆ.

ಇಕ್ಕೇರಿ ನಾಯಕರು ದಕ್ಷಿಣ ಕನ್ನಡ ಜಿಲ್ಲೆಯ ಆದಿ ರಾಜರಾದ ಮೇಲೆ ತಮ್ಮ ಇಕ್ಕೇರಿ ಸಂಸ್ಥಾನದ ಐಗೂರು ಸೀಮೆಯಿಂದ ಗೌಡ ಜನಾಂಗದವರನ್ನು ದಕ್ಷಿಣ ಕನ್ನಡ ಜಿಲ್ಲೆಯ ಘಟ್ಟದ ಸರಹದ್ದು ಪ್ರದೇಶಕ್ಕೆ ತಂದು ಭೂಮಿಕೊಟ್ಟು ನಿಲ್ಲಿಸಿದರೆಂದು ತಿಳಿದು ಬರುತ್ತದೆ. ಗೌಡ ಜನಾಂಗದವರು ಬತ್ತದ ಗದ್ದೆ ಮತ್ತು ತೋಟದ ವ್ಯವಸಾಯಗಳಲ್ಲಿ ಬಹಳ ನುರಿತವರಾದ್ದರಿಂದ ಅವರನ್ನು ದಕ್ಷಿಣ ಕನ್ನಡ ಜಿಲ್ಲೆಯ ಜನವಿರಳ ಪ್ರದೇಶಗಳಾದ ಪುತ್ತೂರು ತಾಲ್ಲೂಕು ಮತ್ತು ಈಗಿನ ಸುಳ್ಯ ತಾಲ್ಲೂಕಿಗೆ ಬಂದು ನೆಲೆಸಲು ಇಕ್ಕೇರಿ ನಾಯಕರು ಪ್ರೋತ್ಸಾಹಿಸಿದ ಕಾರಣ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಂದು ನೆಲೆಸಿ ಕೃಷಿಯನ್ನು ಪ್ರಾರಂಭಿಸಿದರು.

ಹೀಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸಿಸುತ್ತಿದ್ದ ಗೌಡರಲ್ಲಿ ಕೆಲವರು ಹದಿನೆಂಟನೆಯ ಶತಮಾನದ ಕೊನೆಯಲ್ಲ ಮತ್ತು ಹತ್ತೊಂಬತ್ತನೆಯ ಶತಮಾನದ ಆದಿಯಲ್ಲಿ ಇವರು ಕೊಡಗಿಗೆ ಬಂದು ನೆಲೆಸಿದರು. ಕೊಡಗಿಗೆ ಗೌಡ ಜನಾಂಗದವರು ಬಂದು ನೆಲೆಸಲು ಪ್ರೋತ್ಸಾಹಿಸಿದವನು ಕೊಡಗಿನ ಹಾಲೇರಿ ಅರಸರಲ್ಲಿ ಪ್ರಖ್ಯಾತನಾದ ದೊಡ್ಡ ವೀರರಾಜೇಂದ್ರ ಒಡೆಯನು. ಕೊಡಗು ಟಿಪ್ಪುಸುಲ್ತಾನನ ಆಳ್ವಿಕೆಗೊಳಪಟ್ಟ ನಂತರ ಟಿಪ್ಪುಸುಲ್ತಾನನ ಆಳ್ವಿಕೆಯನ್ನು ವಿರೋಧಿಸಿ ಕೊಡಗಿನವರು ಅನೇಕಬಾರಿ ದಂಗೆಯೆದ್ದರು. ಇದರಿಂದ ಟಿಪ್ಪು ಸುಲ್ತಾನನು ಕೊಡಗಿನ ಜನರ ಮೇಲೆ ಸಿಟ್ಟಾಗಿ 1785ರಲ್ಲಿ ತಾನೇ ಕೊಡಗಿಗೆ ದೊಡ್ಡದಂಡು ತೆಗೆದುಕೊಂಡು ಬಂದು ಕೊಡಗಿನ ಜನರನ್ನೆಲ್ಲ ಬಲಾತ್ಕಾರದಿಂದ ಹಿಡಿದು ಭಾಗಮಂಡಲದ ದೇವಟು ಪರಂಬುವಿನಲ್ಲಿ ಸುಮಾರು 80,000 ಜನರನ್ನು ಶ್ರೀರಂಗಪಟ್ಟಣಕ್ಕೆ ತೆಗೆದುಕೊಂಡುಹೋಗಿ ಅಲ್ಲಿ ಅವರನ್ನು ಮುಸಲ್ಮಾನರನ್ನಾಗಿ ಮತಾಂತರಿಸಿದನು.

ಇಷ್ಟು ದೊಡ್ಡ ಸಂಖ್ಯೆಯ ಜನರು ಕೊಡಗಿನಿಂದ ಮೈಸೂರಿಗೆ ತೆಗೆದುಕೊಂಡು ಹೋಗಲ್ಪಟ್ಟ ಮೇಲೆ ಇಲ್ಲಿನ ಭೂಮಿಗಳಲ್ಲಿ ಹೆಚ್ಚಿನವು ವ್ಯವಸಾಯ ಮಾಡುವವರಿಲ್ಲದೆ ಹಾಳು ಬಿದ್ದವು. ಅಮರ ಸುಳ್ಯ ಮಾಗಣೆಗಳು ವೀರರಾಜೇಂದ್ರನ ವಶಕ್ಕೆ ಬಂದವು. ಆಗ ವೀರರಾಜೇಂದ್ರನು ಅಮರ ಸುಳ್ಯದಲ್ಲಿದ್ದ ಗೌಡ ಜನಾಂಗದವರನ್ನು ಕೊಡಗಿಗೆ ಬಂದು ಇಲ್ಲಿ ಹಾಳು ಬಿದ್ದಿದ್ದ ಭೂಮಿಗಳಲ್ಲಿ ನೆಲೆಸುವಂತೆ ಒತ್ತಾಯಿಸಿದನು. ಹೀಗ ಹೊರ ಪ್ರದೇಶಗಳಿಂದ ಬಂದ ಎಲ್ಲಾ ಜನರಿಗೂ ದೊಡ್ಡ ವೀರರಾಜೇಂದ್ರ ಒಡೆಯನು ಜಮ್ಮ ಮತ್ತು ಉಂಬಳಿಯಾಗಿ ಭೂಮಿಯನ್ನು ಕೊಟ್ಟನು. ಕೊಡಗಿನಲ್ಲಿ ಗೌಡ ಜನರು ದಕ್ಷಿಣ ಕನ್ನಡ ಜಿಲ್ಲೆಯ ಗಡಿಗೆ ಮುಟ್ಟಿಕೊಂಡಿರುವ ಭಾಗ ಮಂಡಲನಾಡು. ನಾಪೋಕ್ಲುನಾಡು. ಮಡಿಕೇರಿ ನಾಡುಗಳಲ್ಲಿ ಹೆಚ್ಚಾಗಿ ನೆಲೆಸಿರುವುದು ಕಂಡು ಬರುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯಿಂದ ಬಂದ ಜನರು ಹೆಚ್ಚಿನವರು ತೊಡಿಕಾನ, ಪಟ್ಟಿಮಾರ್ಗವಾಗಿ ಬಂದು ಭಾಗಮಂಡಲ ಮತ್ತು ನಾಪೋಕ್ಲು ನಾಡುಗಳಲ್ಲಿ ನೆಲೆಸಿದರು, ಸಂಪಾಜೆ ಮಾರ್ಗವಾಗಿ ಬಂದ ಜನರು ಮಡಿಕೇರಿ ನಾಡಿನಲ್ಲಿ ನೆಲಸಿದರು. ಸುಬ್ರಹ್ಮಣ್ಯ, ಕಡಮಕಲ್ಲು ಮಾರ್ಗವಾಗಿ ಬಂದ ಜನರು ಗಾಳಿಬೀಡು ಮತ್ತು ಮಡಿಕೇರಿ ನಾಡುಗಳಲ್ಲಿ ನೆಲಸಿದರು. ಹೀಗೆ ದಕ್ಷಿಣ ಕನ್ನಡ ಜಿಲ್ಲೆಯಿಂದ ಕೊಡಗಿಗೆ ಬಂದು ನೆಲೆಸಿದ ಗೌಡ ಜನಾಂಗದವರು 1799 ರಿಂದ 1800ರ ವರೆಗೆ ಹೆಚ್ಚಾಗಿ ನೆಲಸಿದರು. ಅವರು ನೆಲೆನಿಂತ ಭೂಮಿಗಳನ್ನು ಅವರಿಗೆ ಜಮ್ಮ ಅಥವಾ ಉಂಬಳಿಯಾಗಿ ವೀರರಾಜೇಂದ್ರ ಒಡೆಯನು 1800ರಲ್ಲಿ ಕೊಟ್ಟನು.

ಹೀಗೆ ದಕ್ಷಿಣ ಕನ್ನಡದಿಂದ ಕೊಡಗಿಗೆ ಬಂದು ನೆಲೆಸಿದ ಗೌಡ ಜನಾಂಗದವರು ಹೆಚ್ಚಾಗಿ ಕೊಡಗಿನ ಪಶ್ಚಿಮ ಭಾಗದಲ್ಲಿ ನೆಲಸಿದರು ಮತ್ತು ಕೊಡಗಿನ ರಾಜನು ಅವರಿಗೆ ಜಮ್ಮ ಜಹಗೀರು. ಉಂಬಳಿ ಭೂಮಿಗಳನ್ನು ಕೊಟ್ಟನು. ಕ್ರಮೇಣ ಮಡಿಕೇರಿ ತಾಲ್ಲೂಕಿನ ಗೌಡರು ಸ್ವಲ್ಪ ಭಾಗ ವಿರಾಜಪೇಟೆ ತಾಲ್ಲೂಕಿನಲ್ಲಿ ನೆಲೆಸಿದರು. ಹೆಚ್ಚಿನವರು ಸೋಮವಾರಪೇಟೆ ತಾಲ್ಲೂಕಿನಲ್ಲಿ ನೆಲೆಸಿ ಕೊಡಗಿನ ಸ್ಥಿರವಾಸಿಗಳಾದರು. ಅನಂತರ ಕೆಲವರು ಉದ್ಯೋಗ ನಿಮಿತ್ತ ಮೈಸೂರು, ಬೆಂಗಳೂರು ರಾಜ್ಯದ ಮತ್ತು ರಾಷ್ಟ್ರದ ಬೇರೆಬೇರೆ ಭಾಗಗಳಲ್ಲಿ ಈಗ ನೆಲೆಸಿರುವರು. ಹೀಗೆ ಹಲವಾರು ವರ್ಷಗಳಿಂದ ಗೌಡ ಜನಾಂಗದವರು ವಿದ್ಯಾಭ್ಯಾಸದಲ್ಲಿ ಮುಂದುವರಿದು ಉದ್ಯೋಗಗಳನ್ನವಲಂಬಿಸಿ ಜೀವನ ಸಾಗಿಸುತ್ತಿದ್ದರು.

ಗೌಡ ಜನಾಂಗದವರು ಹತ್ತು ಬುಡಕಟ್ಟಿಗೆ ಸೇರಿದವರು ಅಲ್ಲದೆ ಹದಿನೆಂಟು ಗೋತ್ರ (ಬಳಿ) ಗಳಿಗೆ ಸೇರಿದವರಾಗಿರುತ್ತಾರೆ. ಹಾಗಾಗಿ ಈಗಲೂ ವಿವಾಹ ಸಮಾರಂಭಗಳಲ್ಲಿ "ಹತ್ತು ಕುಟುಂಬ ಹದಿನೆಂಟು ಗೋತ್ರ ಜಾತಿ ಸಭೆ ಸಮಸ್ತರ ಸಂಗಡ ಕೇಳಿ" ಎಂದು ಹೇಳಿ ಎಲ್ಲಾ ಕಾರ್ಯಗಳನ್ನು ಪ್ರಾರಂಭಿಸುತ್ತಾರೆ.

ಗೌಡ ಜನಾಂಗದವರಿಗೆ ಕುಲಗುರು ಶೃಂಗೇರಿ ಜಗದ್ಗುರುಗಳು. ಹಿರಿಯರ ಕಾಲದಲ್ಲಿ ಶೃಂಗೇರಿಮಠದ ಗುರುಗಳಿಗೆ ಗುರುಕಾಣಿಕೆ ಕೊಡುವ ಕ್ರಮವಿತ್ತು. ಈ ಗುರುಕಾಣಿಕೆಯನ್ನು ಕಟ್ಟಿ ಗುರುಗಳಿಂದ ಆಶೀರ್ವಾದ ಪಡೆದು ತನ್ನ ಕುಲದ ಪದ್ಧತಿ ಮೇಲೆ ಶುಭಾಶುಭ ಕಾಲಗಳಲ್ಲಿ ನಮ್ಮ ಜನಾಂಗದವರು ಹೇಗೆ ನಡೆದುಕೊಳ್ಳಬೇಕೆಂದು ಅಭಿಪ್ರಾಯ ಆಶೀರ್ವಾದ ಪಡೆಯುತ್ತಿದ್ದರು. ಈಗಲೂ ವಿವಾಹ ಸಮಾರಂಭಗಳಲ್ಲಿ "ತೆರ" ಎಂದು ಗಂಡಿನ ಕಡೆಯವರು ಹೆಣ್ಣಿಗೆ ಕೊಡುವ ಹಣದಲ್ಲಿ 4_50 ರೂ. ಹೆಣ್ಣಿನ ಮುತ್ತೈದೆತನಕ್ಕೆ ಶೃಂಗೇರಿ ಮಠಕ್ಕೆ ತಲುಪಿಸಬೇಕೆಂದು ಕೊಡುವ ಹಣವಾಗಿದೆ,

ಭತ್ತದ ಕೃಷಿಯು ಗೌಡರ ಹುಟ್ಟಿನಲ್ಲೇ ಅಪ್ಪಿಕೊಂಡು ಬಂದ ಕೃಷಿಯಾಗಿದೆ ಅಲ್ಲದೆ ನೇಗಿಲನ್ನೇ ಬಾಳಿನ ಹೆಗ್ಗುರತಾಗಿ ಮಾಡಿಕೊಂಡಿರುವರು. ಈಗ ಗೌಡ ಜನಾಂಗದವರು ಭತ್ತದ ಕೃಷಿಯನ್ನಲ್ಲದೆ ಕಾಫಿ, ಏಲಕ್ಕಿ, ಕಿತ್ತಳೆ. ತೆಂಗು. ಅಡಿಕೆ, ಗೇರು, ರಬ್ಬರ್ ಕೃಷಿಯನ್ನು ಮಾಡುತ್ತಿರುವರು.

ಗೌಡ ಜನಾಂಗದವರು ಮಾಂಸಾಹಾರಿಗಳು, ಮತ್ತು ಅರೆಕನ್ನಡ (ಅರೆಭಾಷೆ) ಮಾತನಾಡುವವರು, ಇವರು ವಿಧೇಯರು, "ಸತ್ಯ. ಧರ್ಮ, ನ್ಯಾಯ" ದಿಂದ ಬಾಳುವವರು ಮತ್ತು ಸಾಧು ಸ್ವಭಾವದವರು ಅಲ್ಲದೆ ಸ್ವಾತಂತ್ರ್ಯಾಭಿಮಾನಿಗಳು ಸಹ ಆಗಿರುವರು



ನೆಲಸಿದ್ದು. ಹೀಗೂರು ಸೀಮೆ, ಇಕ್ಕೇರಿ ಸೀಮೆ, ವಿಜಯನಗರದ ಸುತ್ತಮುತ್ತಲಿನ ಸ್ಥಳಗಳು, ಗೌಡದೇಶ (ಈಗಿನ ಬಂಗಾಳ)ದ ಪರಿಸರದ ಪ್ರಭಾವ ಬೀರಲಿಲ್ಲವೆ ?

2 ಗೌಡರು – ಗಂಗಡಿಕಾರರೇ ? ಅಥವಾ ಹಾಲು ಒಕ್ಕಲು ಮಕ್ಕಳೇ ? 1,911,12.13,14ರಲ್ಲಿ ನಡೆಸಿದ ಗೌಡರ ಸಮ್ಮೇಳನದ ಫಲವಾಗಿ ಶೃಂಗೇರಿಯ ಜಗದ್ಗುರುಗಳು ದಯಪಾಲಿಸಿದ ನಿರೂಪಣದಲ್ಲಿ ಈ ಗೌಡರನ್ನು ಹಾಲು ಒಕ್ಕಲು ಮಕ್ಕಳು ಯಾನೆ (ಗೌಡರು) ಎಂಬುದಾಗಿ ಉಲ್ಲೇಖಿವಿದೆ – ಕಾರಣವೇನು ?

3) ದ. ಕ. ದಲ್ಲಿರುವ ಗೌಡರು ಕೆಲವರು ಈಗ ತುಳು ಭಾಷೆಯನ್ನು ಮಾತಾಡಿದರೂ ಅವರ ಮೂಲ ಭಾಷೆ–ಅರೆ ಭಾಷೆಯಾದುದರಿಂದ – ತುಳುವಿನ ಪಾಡ್ಡನ – ಭೂತಾಳ ಪಾಂಡ್ಯನು ಮಾಡಿದ ಕಟ್ಟು ಕಟ್ಟಳೆ ಬಹಳ ಹಿಂದಿನದಾಗಿದ್ದು ದ. ಕನ್ನಡ ಜಿಲ್ಲೆಗೆ ಗೌಡರು 1650 ರಿಂದೀಚಗೆ ಬಂದು ನೆಲಸಿದುದರಿಂದ ಬಂಟರ ಬಿಲ್ಲವರ ಜೈನರ ಗೋತ್ರದ ಹೆಸರನ್ನು ಇಟ್ಟುಕೊಂಡರೇ ? ಹಾಗಾದರೆ ದಕ್ಷಿಣ ಕನ್ನಡ ಜಿಲ್ಲೆಗೆ ಬರುವ ಮೊದಲು ಇವರಿಗೆ ಗೋತ್ರವಿರಲಿಲ್ಲವೆ ?

ಶೃಂಗೇರಿ ಜಗದ್ಗುರುಗಳ ಆಶಯವನ್ನು 1565 ರಂತೆ ಮೊದಲೇ ಇವರು ಪಡೆದಿರುವುದರಿಂದ ತಮ್ಮ ಜಾತಿ ಪದ್ಧತಿ ಮನೆ ದೇವತೆಯಾದ ವೆಂಕಟರಮಣನ ಪೂಜೆಯನ್ನು ಆಗಿನಿಂದಲೇ ಪ್ರಾರಂಭಿಸಿದ್ದಾಗ ಗೋತ್ರಗಳ ಹೆಸರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಪರಿಸರದ ಮೇಲೆ ಹೇಗೆ ನಿಂತಿದೆ ?

4 ಗೌಡ ದೇಶ (ಬಂಗಾಳ) ದಿಂದ ಬಂದವರೆಲ್ಲಾ ಗೌಡರು 1316 ಕನಕಪುರ ಶಾಸನದಲ್ಲಿ ಹೇಳಿರುವ ಗೌಡರು – ದ. ಕನ್ನಡ ಜಿಲ್ಲೆಯಲ್ಲಿರುವ ಗೌಡರಿಗೆ ಸಂಬಂಧ ಹೇಗೆ ? ಕ್ರಿ. ಶ. 1296ರ ವೇಳೆಗೆ ಅಂದರೆ ದೇವಗಿರಿಯ ಯಾಧವ ರಾಜನಾದ ರಾಮಚಂದ್ರನು ಮಲ್ಲಿಕಾಫರ್‌ನಿಂದ ಸೋಲಿಸಿದ ನಂತರ ಇವರು ವಿಜಯನಗರದ ಕಡೆಗೆ ಹೋದರು. ಈ ಗೌಡರು 1316ರ ವೇಳೆಗೆ ದಕ್ಷಿಣದ ಕಡೆಗೆ ಬಂದಿರಲಿಲ್ಲ – ಆ ಸಮಯದಲ್ಲಿ ಅವರು ದೇವಗಿರಿಯಿಂದ ಸರಿದು 1336ರಲ್ಲಿ ಸ್ಥಾಪಿಸಲಾದ ವಿಜಯನಗರದ ಕಡೆಗೆ ಬಂದು ನೆಲಸಲು ಬರುತ್ತಿದ್ದರು. ನಮ್ಮ ಹಿರಿಯರು ನಾವು ವಿಜಯನಗರದಿಂದ ಬಂದವರೆಂದು ಹೇಳಿಕೊಳ್ಳುತ್ತಿದ್ದರು. 1565ರಲ್ಲಿ ತಾಳಿಕೋಟೆ ಯುದ್ಧದನಂತರ ದಕ್ಷಿಣದ ಕಡೆ ಬಂದರೆಂಬ ಪ್ರತೀತಿ ಇದೆ, ಹಾಗಿರುವಾಗ 1316ರ ಶಾಸನಕ್ಕೂ ಈ ಗೌಡರಿಗೂ ಸಂಬಂಧವೇನು ?

ಇದನ್ನೆಲ್ಲಾ ಡಾ॥ ಪುರುಷೋತ್ತಮ ಬಿಳಿಮಲೆಯವರು ಮತ್ತು ಇತರ ಯುವಕರು ಪರಿಶೋಧನೆ ನಡೆಸಿದರೆ ಗೌಡರ ಸಂಸ್ಕೃತಿಯ ಸಂಪತ್ತು ಹೆಚ್ಚುತ್ತದೆ. ಸಂ]

**ಸಂಖ್ಯಾ ನಿರ್ಣಯ :**

ತುಳುನಾಡಿನ ಜನಾಂಗಗಳಲ್ಲಿರುವಂತೆ ಗೌಡರಲ್ಲಿಯೂ 'ಬಳಿ' ವ್ಯವಸ್ಥೆ ಇದೆ. ಗೌಡರಲ್ಲಿ 18 ಬಳಿಗಳು ಇವೆಯೆಂಬ ನಂಬಿಕೆ ಸಾರ್ವತ್ರಿಕವಾಗಿದೆ. ಬಳಕೆಯಲ್ಲಿಯೂ '18 ಬಳಿ ಜನ ಒಂದು ಗೂಡಿ', 'ಹತ್ತು ಕುಟುಂಬ ಹದಿನೆಂಟು ಗೋತ್ರ' ಎಂಬಂಥ ನುಡಿಗಟ್ಟುಗಳು ಇವೆ. ಶ್ರೀ ಎಂ. ಗಂಗಾಧರನವರು ತಮ್ಮ ಲೇಖನವೊಂದರಲ್ಲಿ ಈ ಕೆಳಗಿನ ಹದಿನೆಂಟು ಬಳಿಗಳ ಹೆಸರುಗಳನ್ನು ಪಟ್ಟಿಮಾಡಿದ್ದಾರೆ :–

1. ನಂದರಗೋತ್ರ
2. ಹೆಮ್ಮನ ಗೋತ್ರ
3, ಸೆಟ್ಟಿಗೋತ್ರ (ಹಾಲುಗುಂಡರ)
4. ಕಬರ್ ಗೋತ್ರ
5, ಚಾಲ್ಯರ ಗೋತ್ರ
6. ಮೂಲ್ಯರ ಗೋತ್ರ
7, ಬಂಗಾರ ಗೊತ್ರ
8. ಗೌಡ ಗೋತ್ರ
9. ಗೋಳಿಗೋತ್ರ
10. ಸಾಲೆ ಗೋತ್ರ
11, ಬಳಸನ್ನ ಗೋತ್ರ
12. ಕರ್ಬನ್ನ ಗೋತ್ರ
13. ಜೌದನ್ನ ಗೋತ್ರ
14. ನಾಯರ್ ಗೋತ್ರ
15, ಕರಂಬೆರ್ ಗೋತ್ರ
16. ಬಿತ್ತೆರ್ ಗೋತ್ರ
17. ಗುಂಡರ ಗೋತ್ರ
18. ಲಿಂಗಾಯತ ಗೋತ್ರ

(ಗಂಗಾಧರ ; 1968)

ಜೆ. ಎಂ. ಸ್ಟರಕ್‌ನು ಗೌಡಜಾತಿಯಲ್ಲಿ 18 ಬಳಿಗಳಿವೆಯೆಂದು ಹೇಳಿ ತನಗೆ ಉಪಲಬ್ಧವಿದ್ದ ಹನ್ನೆರಡು ಬಳಿಗಳ ಹೆಸರುಗಳನ್ನು ಈ ಕೆಳಗಿನಂತೆ ಕೊಟ್ಟಿದ್ದಾನೆ.

1. ಬಂಗಾರ
2. ನಂದರ
3. ಮೂಲ
4. ಹೆಮ್ಮನ
5. ಸಾಲು
6. ಕಬ್ರು
7. ಗೋಳಿ
8. ನಾಯರ್
9. ಶೆಟ್ಟಿ
10. ಬಸ್ರುವೊಗರು
11. ಬಳಸನ್ನ
12. ಕರ್ಮಣ್ಣಾಯ

(STURROCK, 1894, 162)

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ನಾನು ಭೇಟಿಮಾಡಿದ ಎಲ್ಲಾ ಗೌಡರೂ ತಮ್ಮಲ್ಲಿ 18 ಬಳಿಗಳಿವೆ ಯೆಂದು ಹೇಳಿದ್ದಾರೆ. ಆದರೆ 18 ಬಳಿಗಳ ಜನರೂ ಇಂದು ಇಲ್ಲದೇ ಇರುವುದರಿಂದ ಕೆಲವು ಸಂಶಯಗಳು ಹುಟ್ಟಿ ಕೊಂಡಿವೆ.

ಶ್ರೀ ಗಂಗಾಧರ ಮತ್ತು ಸ್ಟರಕ್ ಇಬ್ಬರೂ. ನಂದರ, ಹೆಮ್ಮನ, ಬಂಗಾರ, ಮೂಲರ, ನಾಯರ, ಚಾಲ್ಯರ, ಕಬ್ರು, ಗೋಳಿ, ಕರ್ಮಣ್ಣಾಯ, ಶೆಟ್ಟಿ, ಮತ್ತು ಬಳಸಣ್ಣ ಎಂಬ 11 ಬಳಿಗಳ ಹೆಸರನ್ನು ಹೇಳಿದ್ದಾರೆ. ಸ್ಟರಕ್ ಹೇಳಿದ 'ಬಸ್ರುಮೊಗರು' ಬಳಿಯನ್ನು ಗಂಗಾಧರರು ಹೇಳಿಲ್ಲ. ಇದನ್ನು ಗಂಗಾಧರರು ಹೇಳಿದ್ದಕ್ಕೆ ಸೇರಿಸಿದರೆ ಸಂಖ್ಯಾದೃಷ್ಟಿಯಿಂದ ಒಟ್ಟು 19 ಬಳಿಗಳಾಗುತ್ತವೆ.

ಕ್ಷೇತ್ರಕಾರ್ಯದಲ್ಲಿ ಮೇಲೆ ಹೇಳಿದ (ಸ್ಟರಕ್ ಮತ್ತು ಗಂಗಾಧರರಿಗೆ ಸಮಾನವಾದ) 11 ಬಳಿಗಳ ಗೌಡರೂ ನನಗೆ ಕಾಣ ಸಿಕ್ಕಿದ್ದಾರೆ. ಅವರು ಸ್ಪಷ್ಟವಾಗಿ ತಮ್ಮ ಬಳಿಯನ್ನು ಹೇಳಿದ್ದಾರೆ. ಗಂಗಾಧರರು ಹೇಳದೇ ಬಿಟ್ಟ, ಆದರೆ ಸ್ಟರಕ್ ಹೇಳಿರುವ 'ಬಸ್ರುವೊಗರು' ಎಂಬ ಬಳಿ ಅದೇ ಹೆಸರಿನಲ್ಲಿ ಕಾಣಸಿಗದಿದ್ದರೂ, 'ವಾಗಾರ್ ಬಳಿ' ಎಂಬ ಹೆಸರಿನಲ್ಲಿ ಬಳಕೆಯಲ್ಲಿದೆ. ಇದಕ್ಕೆ 'ತುಣ್ಣೆಬಳಿ' ಎಂಬ ಇನ್ನೊಂದು ಹೆಸರೂ ಇದೆ. 'ತುಣ್ಣೆ' ಶಬ್ದ ಅಶ್ಲೀಲವಾಗಿರುವುದರಿಂದ ಬಳಕೆಯಲ್ಲಿ ಅದನ್ನು ಪ್ರಯೋಗಿಸದೆ. 'ಗೌಡ್ರ ಬಳಿ–ಇವೆಲ್ಲವೂ ಒಂದೇ ಬಳಿಗೆ ಸಂಬಂಧಿಸಿದ ಹೆಸರುಗಳೆಂಬುದು ಸ್ಪಷ್ಟವಾಗುತ್ತದೆ. ಮೇಲೋಕ್ತ 11 ಬಳಿಗೆ ಇದನ್ನು ಸೇರಿಸಿದರೆ ಒಟ್ಟು 12 ಬಳಿಯಿದೆ ಎಂದಂತಾಯಿತು. ಈ 12 ಬಳಿಯ ಜನರು ಇಂದಿಗೂ ಕಾಣಸಿಗುತ್ತಾರೆ.

ಇದಲ್ಲದೆ, ಶ್ರೀ ಗಂಗಾಧರರು ಇನ್ನೂ ಆರು ಬಳಿಗಳ ಹೆಸರುಗಳನ್ನು ಹೇಳಿದ್ದಾರೆ. ಅವುಗಳೆಂದರೆ, ಜೌದನ್ನ, ಕರೆಂಜೆರ್, ಲಿಂಗಾಯತ, ಸಾಲೆ. ಗುಂಡ, ಮತ್ತು ಶರ್ಬನ್ನ ಗೋತ್ರ. ಈ ಆರು ಗೋತ್ರಕ್ಕೆ ಸೇರಿದ ಜನರು ಕ್ಷೇತ್ರ.ಕಾರ್ಯದಲ್ಲಿ ನನಗೆ ಕಂಡು ಬಂದಿಲ್ಲ.

ಸ್ಟರಕ್ ಮತ್ತು ಗಂಗಾಧರರು ಗುರುತಿಸಿದ ಕಬರ್ ಳಿಯ ಕಜನರು ಸುಳ್ಯ ಪರಿಸರದಲ್ಲಿ ಇಂದಿಗೂ ವಾಸಿಸುತ್ತಿದ್ದಾರೆ. ಪುತ್ತೂರಿನ ಕಡೆಯಲ್ಲಿ ತುಳು ಮಾತನಾಡುವ ಗೌಡರು ಇವರನ್ನು 'ಕಂರ್ಜೆರ್ ಬರಿತಾಕ್ಲು' (ಕಂರ್ಜೆರ್ ಬಳಿಯವರು) ಎಂದು ಕರೆಯುತ್ತಾರೆ, ಇದೇ ಬಳಿಯನ್ನು ಶರ್ಬನ್ನ ಬಳಿಯವರೆಂದು ಕರೆಯುತ್ತಾರೋ ತಿಳಿಯದು. ಆದರೆ. ತುಳುವಿನಲ್ಲಿ 'ಕರೆಂಜೆರ್ನಾಕ್ಲು' ಎಂದು ಹೇಳುತ್ತಾರೆ. ಹಾಗಾಗಿ ಕಂರ್ಜೆರ್–ಕಂರ್ಜೆರ್ನ–ಕರ್ಬನ್ನ ಆಗಿರಬಹುದೋ ಎಂಬ ಸಂಶಯ ಬರುತ್ತದೆ. ಇದು ಹೌದಾದರೆ ಇವೆಲ್ಲವೂ ಕಬರ್ ಬಳಿಯ ಬೇರೆ ಬೇರೆ ರೂಪಗಳು ಎಂದತಾಯಿತು. ಇದನ್ನು ಗಂಗಾಧರರು ಗಮನಿಸಿಲ್ಲ ಅದೇ ರೀತಿ "ಗುಂಡನ ಬಳಿಯೆಂಬುದು ಪ್ರಚಲಿತದಲ್ಲಿರುವ ಒಂದು ಬಳಿ "ಗುಂಡನ ಬಳಿಯಿಂದ ಹೆಣ್ಣುಂತದರೆ ಮನೆ ಹಾಳಾಗುತ್ತದೆ" ಎಂಬ ನಂಬಿಕೆ ಬಲವಾಗಿರುವುದರಿಂದ ಈ 'ಬಳಿ' ಯುವರು ತಮ್ಮ ಬಳಿ ಹೇಳಿಕೊಳ್ಳಲು ಹೆದರಿಕೊಳ್ಳುತ್ತಾರೆ. ಅದಕ್ಕೆ ಅವರು ಸೆಟ್ಟಿಬಳಿ ಎಂದು ಹೇಳಿಕೊಳ್ಳುತ್ತಾರೆ, ಗುಂಡನ ಬಳಿಗೆ ಸೆಟ್ಟಿಬಳಿಯೆಂಬ ಹೆಸರಿರುವುದನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಕೆಲವರ ಪ್ರಕಾರ ಗುಂಡನ ಬಳಿಯಲ್ಲಿ ಎರಡು ಪ್ರಭೇದಗಳಿವೆ : 1) ಹಾಲುಗುಂಡ 2) ಕುತ್ತಿಗುಂಡ. ಹಾಲುಗುಂಡದ ಬಳಿಯವರ ಮನೆತನದ ಹೆಣ್ಣನ್ನು ಮದುವೆಯಾದರೆ ಶುಭದಾಯಕ – ಕುತ್ತಿಗುಂಡಬಳಿಯವರ ಮನೆತನದ್ದಾದರೆ ಅಶುಭ ಎಂಬ ನಂಬಿಕೆ ಇದೆ. ಆದರೆ ಕುತ್ತಿಗುಂಡ ಎಂದು ಹೇಳಿಕೊಳ್ಳುವ ಯಾವುದೇ ಮನೆತನ ಗೌಡರಲ್ಲಿ ಇಲ್ಲ. ಸಾಮಾಜಿಕವಾಗಿ ಕಷ್ಟಪರಂಪರೆಗಳು ಪ್ರಾಪ್ತವಾಗುತ್ತವೆ ಎಂಬ ಕಾರಣಕ್ಕೆ ಎಲ್ಲರೂ ಗುಂಡನಬಳಿ ಎಂದು ಹೇಳಿಕೊಳ್ಳಲು ಹಿಂಜರಿಯುತ್ತಾರೆ. ಈ ಹಿನ್ನಲೆಯಲ್ಲಿ ಸೆಟ್ಟಿಬಳಿ – ಹಾಲುಗುಂಡನ ಬಳಿ ಮತ್ತು ಕುತ್ತಿಗುಂಡನ ಬಳಿ – ಬೇರೆ ಬೇರೆ ಅಲ್ಲವೆಂಬುದು ಸ್ಪಷ್ಟ.

ಉಳಿದಂತೆ ಔದನ್ನ, ಸಾಲೆ ಮತ್ತು ಲಿಂಗಾಯತ ಬಳಿಗಳ ಹೆಸರನ್ನು ಗಂಗಾಧರರು ಹೇಳಿದ್ದರೂ ಆ ಬಳಿಯ ಜನರು ಇಂದು ಕಾಣಸಿಗುವುದಿಲ್ಲ. ಹಿಂದೆ ಇದ್ದಂತೆಯೂ ಮಾಹಿತಿ ದೊರೆಯುವುದಿಲ್ಲ. ಲಿಂಗಾಯತರ ಒಂದು ಮನೆತನ ಗೌಡ ಜಾತಿಗೆ ಸೇರಿ 'ಕಬರ್ ಬಳಿ' ಆಗಿದೆ ಎನ್ನಲಾಗುತ್ತಿದೆ. 'ಸಾಲೆ' ಎಂಬ ಬಳಿ ಇಲ್ಲ. 'ಸಾಲೆ' ಎಂಬ ಬಳಿ ಜಾಳ್ಯೆರ್, – ಜಾಳ್ಯೆರ್ ಎಂದು ಕರೆಸಿಕೊಳ್ಳುತ್ತದೆ. ಔದನ್ನ ಬಳಿಯೆಂಬುದು ಎಲ್ಲಿಯೂ ಇದ್ದಂತಿಲ್ಲ.

ಇವನ್ನೆಲ್ಲಾ ಗಮನಿಸಿದರೆ ಒಂದೇ ಬಳಿಗೆ ಬೇರ ಬೇರೆ ಕೆಲವು ಹೆಸರುಗಳಿರುತ್ತವೆ ಎಂಬುದು ಗೊತ್ತಾಗುತ್ತದೆ. ಅದನ್ನೆಲ್ಲ ಬಿಟ್ಟರೆ, ಪ್ರಸಕ್ತ ಈ ಕೆಳಗಿನ ಹನ್ನೆರಡು ಬಳಿಗಳನ್ನು ಮಾತ್ರ ಒಪ್ಪಿಕೊಳ್ಳ ಬೇಕಾಗುತ್ತದೆ,

| | | |
|---|---|---|
| 1) ನಂದರ ಬಳಿ | 2) ಹೆಮ್ಮನ ಬಳಿ | 3) ಬಂಗಾರು ಬಳಿ |
| 4) ಮೂಲರ ಬಳಿ | 5) ನಾಯರ್ ಬಳಿ | 6) ಚಾಲ್ಯರ ಬಳಿ |
| 7) ಗೋಳಿ ಬಳಿ | 8) ಗುಂಡನ ಬಳಿ | 9) ಕಬರ್ ಬಳಿ |
| 10) ಚಿತ್ತೆರ್ ಬಳಿ | 11) ಗೌಡರ ಬಳಿ | 12) ಬಳಸನ್ನ ಬಳಿ |

ಈ 12 ಬಳಿಯ ಜನರೂ ಇಂದು ಕಾಣಿಸಿಗುತ್ತಿದ್ದು. ತಮ್ಮದೇ ಕೆಲವು ಸೂಕ್ಷ್ಮ ವ್ಯತ್ಯಾಸಗಳನ್ನು ಹೊಂದಿದ್ದಾರೆ. ವಾಡಿಕೆಯಲ್ಲಿರುವ 18 ಬಳಿಗಳಲ್ಲಿ ಉಳಿದ ಆರು ಬಳಿಗಳುಯಾವುವು ಮತ್ತು ಅವುಗಳ ಪೆಸರೇನೆಂಬುದು ತಿಳಿಯದು, ದ. ಕ. ಜಿಲ್ಲೆ ಮತ್ತು ಕೊಡಗಿನ ಗೌಡರಲ್ಲಿ ಮೇಲೋತ್ತ 12 ಬಳಿಗಳು ಮಾತ್ರ ಇವೆ.

ಸುಳ್ಯ ಪರಿಸರದ ಗೌಡರಿಗೆ ಮೂಲಸ್ಥಾನವಾಗಿರುವ ಐಗೂರು ಸೀಮೆಯಲ್ಲಿ ಈ ಹೆಸರಿನ ಬಳಿ ವ್ಯವಸ್ಥೆ ಇಲ್ಲ. ಅಲ್ಲಿಯೂ 18 ಬಳಿಗಳಿವೆಯೆಂಬ ನಂಬಿಕೆ ಪ್ರಚಲಿತವಾಗಿದೆ. ಅದರಲ್ಲಿ ಕೆಲವು ಹೆಸರುಗು ಈ ರೀತಿಹೊಗಿವೆ. ಗಂಗರ ಬಳಿ, ತೋಳನ ಬಳಿ, ಹಡ್ಲಿಗಿ ಬಳಿ, ಕಾಚೆಲ್ಲಿ ಬಳಿ, ಬಾಳೆ ಬಳಿ, ಅರಿಶಿನ ಬಳಿ. ಹೊನ್ನೆ ಬಳಿ. ಸೆಟ್ಟಿ ಬಳಿ, ಚಂದಿರ ಬಳಿ ಮಿಗಾನ ಬಳೀ ಹೊಳೆ ಬಳಿ ಇತ್ಯಾದಿ. ಅಲ್ಲಿ ಬಳಿಯು ತಾಯಿಯಿಂದ ಮಕ್ಕಳಿಗೆ ಬರುತ್ತದೆ. ಒಂದೊಂದು ಬಳಿಯೂ ಒಂದೊಂದು ವಸ್ತು. ಪ್ರಾಣಿ ಅಥವಾ ಸಸ್ಯಗಳನ್ನು ಸಂಕೇತಿಸುವಂತಿದೆ. ಇದು ರೋಜರ್ ಪೂಲ್ ಹೇಳಿದ ವಿಚಾರಗಳಿಗೆ ಅನುಗುಣವಾಗಿಯೇ ಇದೆ. (POOLE, 1955—19)ಇಲ್ಲಿ ಹೇಳಿದ 'ಸೆಟ್ಟಿ ಬಳಿ' ಎಂಬ ಹೆಸರು ಸುಳ್ಯ ಪರಿಸರದ ಗೌಡರಲ್ಲಿಯೂ ಕಂಡು ಬಂದರೆ, ಉಳಿದ ಎಲ್ಲಾ ಗೋತ್ರಗಳ ಹೆಸರು ಪೂರ್ತಿ ಬೇರೆ ಬೇರೆಯಾಗಿದೆ. 18 ಸಂಖ್ಯೆ ಎರಡು ಕಡೆಗೂ ಸಮನಾಗಿದೆ. ಈ 18ಸಂಖ್ಯೆಗೂ ಮಧ್ಯಯುಗೀನ ಕರ್ನಾಟಕದಲ್ಲಿ ಗ್ರಾಮಸಭೆಯಲ್ಲಿನ್ನು ಸೂಚಿಸಲು ಬಳಸಲಾದ 18 ಜಾತಿ ಅಥವಾ ಸಮಯ ಎಂಬ ಪದಕ್ಕೂ ಏನಾದರೂ ಸಂಬಂಧವಿದೆಯೋ ಎಂಬುದು ಸರಿಯಾಗಿ ತಿಳಿಯದು.[3]

ಸುಳ್ಯ ಪರಿಸರದಲ್ಲಿ ವಾಸಮಾಡುತ್ತಿರುವ ಮರಕುಡಿಯಲ್ಲಿಯೂ 18 ಬಳಿಗಳವೆಯೆಂದು ಅವರು ಹೇಳುತ್ತಾರೆ. ಗೌಡರಲ್ಲಿ ಪ್ರಚಲಿತವಿರುವ ಬಳಿಗಳ ಹೆಸರುಗಳನ್ನೇ ಅವರೂ ಹೇಳುತ್ತಾರೆ ನಂದರಿ, ಬಂಗಾರ, ಹೆಮ್ಮನ, ಮೊದಲಾದ ಬಳಿಗಳು ಅವರಲ್ಲಿಯೂ ಮುಖ್ಯ ಬಳಿಗಳೆಂದೇ ಕರೆಸಿಕೊಳ್ಳುತ್ತಿದೆ ಸಾಂಸ್ಕೃತಿಕವಾಗಿ ಮಲೆಕುಡಿಯರಿಗೂ ಗೌಡರಿಗೂ ವಿಶೇಷ ವ್ಯತ್ಯಾಸ ಇಲ್ಲ. ಹರಿಜನರಲ್ಲಿ 'ಕನ್ನಡ ಬಳಿ' ಎಂಬ ಹೆಸರಿದ್ದು ಅದಕ್ಕೆ ನಂದರ ಬಳಿ ಎಂಬ ಇನ್ನೊಂದು ಹೆಸರು ಇದೆ. ಹೆಮ್ಮನ, ಬಂಗಾರ ಮತ್ತು ಗುಂಡನ ಬಳಿ ಅವರಲ್ಲಿಯೂ ಇದೆ. ಈ ಹರಿಜನರು ಅಸ್ಪೃಶ್ಯರು.

ಗೌಡರೊಂದಿಗೆ ಒಂದೇ ಪರಿಸರದಲ್ಲಿ ವಾಸಿಸುವ ಗಿರಿಜನರಲ್ಲಿರುವ ಬಳಿಗಳಲ್ಲಿ ಮಾತ್ರ ವ್ಯತ್ಯಾಸವಿದೆ. ಅವರ ಬಳಿಗಳು ಮರಾಠಿಗಳಿಗೆ ಅನುಗುಣವಾಗಿಯೇ ಇರುವುದನ್ನು ಆ ಹೆಸರುಗಳೇ ಸೂಚಿಸುತ್ತವೆ, 1 ಬಿಲ್ಲವರಲ್ಲಿ 'ಕನ್ನಡರು' ಎಂಬ ಒಂದು ಬಳಿ ಇದ್ದು ಅದಕ್ಕೆ 'ನಂದರ' ಬಳಿ ಎಂಬ ಇನ್ನೊಂದು ಹೆಸರು ಇದೆ. ಇವೆಲ್ಲವನ್ನು ಗಮನಿಸಿದರೆ ದಕ್ಷಿಣ ಕನ್ನಡದಾದ್ಯಂತ ವಾಸಮಾಡುತ್ತಿರುವ ಕೆಲವು ಜನಾಂಗಗಳಲ್ಲಿ ಏಕ ರೀತಿಯ ಬಳಿ ವ್ಯವಸ್ಥೆ ರೂಢಿ

ಯಲ್ಲಿರುವುದು ತಿಳಿದು ಬರುತ್ತದೆ. ಅಂದರೆ ಆ ಬಳಿ ವ್ಯವಸ್ಥೆ ಇಲ್ಲಿನ ರಾಜಕೀಯ ವ್ಯವಸ್ಥೆಗನುಗುಣವಾಗಿ ರೂಢಿಗೆ ಬಂದಿರಬೇಕು. ಅದು ಯಾವ ಕಾಲದಲ್ಲಿ ಬಂತೆಂದು ಹೇಳಲು ಆಧಾರ ಸಿಗುವುದಿಲ್ಲ.

ಗೌಡರಲ್ಲಿ ಸದ್ಯ ಪ್ರಚಲಿತವಲ್ಲಿರುವ 12 ಬಳಿಗಳನ್ನು ವಿವರವಾಗಿ ಪರಿಶೀಲಿಸಬಹುದು.

**ನಂದರ ಬಳಿ :**

ಈ ಬಳಿಯ ಜನರು ತಾವು ನಂದವಂಶದವರೆಂದು ಹೇಳಿಕೊಂಡರೂ ಅದಕ್ಕೆ ಯಾವ ಆಧಾರವೂ ಸಿಗುವುದಿಲ್ಲ. ಸಂಖ್ಯಾದೃಷ್ಟಿಯಿಂದ ಗೌಡರಲ್ಲಿ ಇವರಿಗೆ ಎರಡನೇ ಸ್ಥಾನವಿದ್ದರೂ (17.6 ಶೇ.) ಗೌಡರಲ್ಲಿ ಇದು 'ಪ್ರತಿಷ್ಠಿತ ಬಳಿ' ಎಂಬ ನಂಬಿಕೆಯಿದೆ, 'ಗೌಡರಲ್ಲಿ ತಾವು ಅತ್ಯಂತ ಪ್ರಾಚೀನರು, ಎಂದು ಈ ಬಳಿಯವರು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ.

ತಲಗಾಡಿನ ಗಂಗರ ಮನೋದೈವವಾಗಿದ್ದ ಏಳೂರ ಮಲನಿಸ್ವಾಮಿ ದೇವರು ಈ ಬಳಿಯವರಿಂದ ವಿಶೇಷವಾಗಿ ಆರಾಧನೆಗೆ ಒಳಪಡುತ್ತಿದೆ. ಮೂಲತಃ ಎಲ್ಲ ಗೌಡರೂ ಗಂಗಡಿಕಾರರೇ ಆಗಿದ್ದರೂ ನಂದರ ಬಳಿಯವರಲ್ಲಿ ಮಾತ್ರ ಇಂಥ ಧಾರ್ಮಿಕ ಆರಾಧನೆಯ ರೂಪ ಉಳಿದಿರುವುದನ್ನು ಗಮನಿಸಿದರೆ ಇವರು ಅದೇ ಮನೆತನಕ್ಕೆ ಸೇರಿದವರೋ ಎಂಬ ಸಂಶಯ ಬರುತ್ತದೆ. ಕೊನೆಯ ಪಕ್ಷ ಇವರು ಗಂಗಡಿಕಾರರಂತೂ ಖಂಡಿತ. ಐಗೂರಿನಿಂದ ಸುಳ್ಯ ಪರಿಸರಕ್ಕೆ ಗೌಡರು ಹರಡಿಕೊಂಡ ದಾರಿಯುದ್ದಕ್ಕೂ ನಂದರ ಬಳಿಯವರನ್ನು ನಾವು ಕಾಣಬಹುದು.

ಸಾಮಾನ್ಯ ನೋಟಕ್ಕೆ ಈ ಬಳಿಯವರು ಇತರ ಬಳಿಯವರಿಗಿಂತ ಹೆಚ್ಚು ಕಪ್ಪಗೆ ಇರುತ್ತಾರೆ. ಅವರ ಕೂದಲು ಗುಂಗುರಾಗಿರುತ್ತದೆ. ಉಪ್ಪಂಡಿಭೂತದ ಪಾಡ್ದನದಲ್ಲಿ 'ನಂದರೆನ ನಂದಾದೀಪ' ಎಂಬ (ನಂದರ ಬಳಿಯವರ ನಂದಾದೀಪ) ಮಾತು ಬರುತ್ತದೆ. ಇವರು ಹೆಚ್ಚು ದೈವ ಭಕ್ತರು.

ಪುರುಷ ಭೂತದ ಪಾಡ್ದನದಲ್ಲಿ ಬರುವ ಪ್ರಕಾರ ನಂದರ ಬಳಿಯವರು ಮೊದಲು ನೆಲೆನಿಂತದ್ದು ಸುಬ್ರಹ್ಮಣ್ಯ ಬಳಿಯ ಕಲ್ಮಕಜೆಯಲ್ಲಿ ಅಲ್ಲಿಂದ ಇಬ್ಭಾಗವಾಗಿ ಒಂದು ಭಾಗವು ಬಳ್ಪ, ಪಂಜ, ಕುದ್ಮಳಿ, ಜೊಕ್ಕಾಡಿ ಪರಿಸರದತ್ತ ಹರಡಿಕೊಂಡರೆ ಇನ್ನೊಂದು ಭಾಗದ ಗುತ್ತಿಗಾರು, ಸುಳ್ಯ, ಅರಂತೋಡಿನ ಕಡೆ ಹರಡಿಹೋಯಿತು. ಈ ಪ್ರದೇಶಗಳಲ್ಲಿ ಬಹುಸಂಖ್ಯಾತರಾಗಿ ನಂದರ ಬಳಿಯವರು ಈಗಲೂ ಇದ್ದಾರೆ. ಈದಾರಿ ಐಗೂರು ಸೀಮೆಯಿಂದ ಗೌಡರು ಹರಡಿಕೊಂಡ ರೀತಿಗೆ ಅನುಗುಣವಾಗಿಯೇ ಇದೆ.

ನಂದರ ಬಳಿಯ ಹುಡುಗನಿಗೆ ಇತರ ಎಲ್ಲಾ ಬಳಿಯವರು ಹುಡುಗಿಯನ್ನು ಮದುವೆಮಾಡಿಕೊಡಲು ಸಿದ್ಧರಾಗಿದ್ದಾರೆ. ನಂದರ ಬಳಿಯವರು ಗುಂಡನ ಬಳಿಯ ಹುಡುಗಿಯನ್ನು ಮದುವೆಯಾಗುವುದಿಲ್ಲ ನಂದರ ಬಳಿಯ ಹುಡುಗಿಯನ್ನು ಇತರ ಎಲ್ಲಾ ಬಳಿಯವರೂ ಮದುವೆಯಾಗಲು ಸಿದ್ಧರಿರುತ್ತಾರೆ. ಬಂಗಾರ ಮತ್ತು ಹೆಮ್ಮನ ಬಳಿಯವರೊಂದಿಗೆ ಇವರ ವೈವಾಹಿಕ ಸಂಬಂಧ ಹೆಚ್ಚಿದೆ.

'ನಂದರ ಗಂಟ್ ನಾಯಿಂದ್‌ಂಡ್' ಎಂಬ ತುಳುಗಾಥೆಯನ್ನು ಗಮನಿಸಿದರೆ ಇವರು ಹೆಚ್ಚು ಜಿಪುಣರೆನ್ನಬಹುದು.[5] ಇಷ್ಟಿದ್ದರೂ ಈ ಬಳಿಯವರು ಶ್ರೇಷ್ಠರೆಂಬುದನ್ನು ಉಳಿದ ಎಲ್ಲಾ ಬಳಿಯವರು ಒಪ್ಪಿಕೊಳು

ತ್ತಾರೆ, 'ನಂದರ ನಡಾವಳಿ' ಎಂಬ ನುಡಿಗಟ್ಟು ಕೂಡಾ ಇದೆ.

ಬಳಿಗಳ ಶೇಕಡಾವಾರು

(1000 ಜನರನ್ನು ಅನುಲಕ್ಷಿಸ)

| ಬಳಿಗಳ ಹೆಸರು | ಜನಸಂಖ್ಯೆ (1ಸಾವಿರಕ್ಕೆ) | ಶತಾಂಶ |
|---|---|---|
| 1. ನಂದರ ಬಳಿ | 176 | 17·6 |
| 2. ಹೆಮ್ಮನ ಬಳಿ | 207 | 20·7 |
| 3. ಬಂಗಾರು ಬಳಿ | 109 | 10·9 |
| 4. ಮೂಲರ ಬಳಿ | 89 | 8·9 |
| 5. ಚಾಲ್ಯರ ಬಳಿ | 54 | 8·1 |
| 6. ನಾಯರ್ ಬಳಿ | 81 | 5·4 |
| 7. ಗೋಳಿ ಬಳಿ | 74 | 7·4 |
| 8. ಗುಂಡನ ಬಳಿ | 43 | 4·3 |
| 9, ಕಬರ್ ಬಳಿ | 21 | 2·1 |
| 10. ಚಿತ್ತರ್ ಬಳಿ | 35 | 3·5 |
| 11. ಗೌಡರ ಬಳಿ | 49 | 4·9 |
| 12. ಬಳಸನ್ನ ಬಳಿ | 62 | 6·2 |
| 13. ಕರ್ಬನ್ನ | ? | ? |
| 14. ಜೌದನ್ನ | ? | ? |
| 15. ಸಾಲೆ | ? | ? |
| 16. ಲಿಂಗಾಯತ | ? | ? |
| 17, ಕಂಬೆರ್ | ? | ? |
| 18. ಕುತ್ತಿಗುಡ | ? | ? |
| ಒಟ್ಟು | 1000 | 100 |

**ಹೆಮ್ಮನ ಬಳಿ :**

ಬೆಳ್ತಂಗಡಿ ಕಡೆಯಲ್ಲಿ ತುಳು ಮಾತನಾಡುವ ಗೌಡರು ಈ ಬಳಿಯನ್ನು 'ಪೆರ್ಬನ್ನ ಬರಿ' ಎಂದು ಕರೆಯ ತ್ತಾರೆ. ಸಂಖ್ಯಾದೃಷ್ಟಿಯಿಂದ ಇವರು ಅತ್ಯಂತ ಹೆಚ್ಚು ಇದ್ದಾರೆ. (20.7 ಶೇ.) 'ಹೆಮ್ಮನವರ ಹೇಳಿಕೆ'

ಂಡಿ ಕಟ್ಟನ್ನು ಪರಾಮರ್ಶಿಸಿದರೆ. ಇವರು ಮಾತಿನಲ್ಲಿ ಜಾಣರು ಎಂದು ಹೇಳಬಹುದು. ಸುಳ್ಯ ಪರಿಸರವಾದ್ಯಂತ ರಡಿಕೊಂಡಿರುವ ಈ ಬಳಿಯವರಿಗೆ ವಿವಾಹದಲ್ಲಿ ಹೆಣ್ಣುಕೊಡಲೂ, ಹೆಣ್ಣು ತರಲೂ ಯಾವ ಸಂಪ್ರದಾಯಿಕ ಡ್ಡಿ ಆತಂಕಗಳೂ ಇರುವುದಿಲ್ಲ. 'ಹೆಮ್ಮನ ಬಳಿಯ ಹೆಣ್ಣು ಮನೆತುಂಬಿಸುತ್ತಾಳೆ' ಎಂಬ ಬಳ್ಳಿಯ ಮಾತು ಚಲಿತದಲ್ಲಿ ಇರುವ ಕಾರಣ ಈ ಬಳಿಯ ಹೆಣ್ಣು ಮಕ್ಕಳಿಗೆ ಬಹುಬೇಗ ಮದುವೆಯಾಗುತ್ತದೆ. ಇವರು ಪೆರ್ಗಲ್ ಂಬ ಮೀನನ್ನು ತಿನ್ನಬಾರದೆಂದು ಶಾಸ್ತ್ರವಿದೆ.[6] ಸುಳ್ಯ ತಾಲೂಕಿನಾದ್ಯಂತ ಇವರು ಹರಡಿಕೊಂಡಿದ್ದಾರೆ.

**ಂಗಾರ್‌ಬಳಿ :**

ತುಳುನಾಡನ್ನಾಳಿದ ಬಂಗ ಅರಸರ ವಂಶಜರು ತಾವೆಂದು ಹೇಳಿಕೊಳ್ಳುತ್ತಾರೆ. ಆದರೆ ಇದಕ್ಕೆ ಯಾವ ಆಧಾರವೂ ಸಿಗುವುದಿಲ್ಲ. ಪ್ರಖ್ಯಾತವಾದ ಬಂಗರಸು ಮನೆತನದ ಮೇಲಿದ ಅಭಿಮಾನದಿಂದ ಬಂಗಾರ್ ಬಳಿ ಎಂಬ ಹೆಸರು ಬಂದಿರುತ್ತದೆ. ಎಂದು ಊಹಿಸಲು ಅವಕಾಶ ಇದೆ. ಗೌಡರು ಒಟ್ಟು ಸಂಖ್ಯೆಯಲ್ಲಿ ಇವರಿಗೆ ಮೂರನೇ ಸ್ಥಾನ (10.9 ಶೇ.) 'ಬಂಗಾರ್ ಬಳಿಯವರ ಬಾಳಿಕೆ' ಎಂಬ ನುಡಿಕಟ್ಟಿನ ಪ್ರಕಾರ ಇವರು ಕುಟುಂಬವನ್ನು ಉಳಿಸಿ ಬೆಳೆಸುವುದರಲ್ಲಿ ನಿಸ್ಸೀಮರು. ಅದಕ್ಕನುಗುಣವಾಗಿ – 'ಬಂಗಾರ ಬಳಿಯ ಗೂಡೆ ಮನೆಗೆ ಬಂಗಾರ' (ಬಂಗಾರ ಬಳಿಯ ಹುಡುಗಿ ಮನೆಯ ಚಿನ್ನ) ಎಂಬ ನುಡಿಕಟ್ಟಿದೆ. ಈ ಹಿನ್ನೆಲೆಯಲ್ಲಿ ಈ ಬಳಿಯ ಹುಡುಗಿಯರಿಗೆ ಬೇಗ ಮದುವೆಯಾಗುತ್ತದೆ. ಹೆಮ್ಮನ ಮತ್ತು ನಂದರ ಬಳಿ ಯವರೊಡನೆ ಇವರಿಗೆ ವೈವಾಹಿಕ ಸಂಬಂಧ ಹೆಚ್ಚು 'ಕುಕ್ಕೆತ್ತಿ ಬಲ್ಲು' ಎಂಬ ಹೆಣ್ಣು ದೈವವನ್ನು ಇವರು ವಿಶೇಷವಾಗಿ ಪೂಜಿಸುತ್ತಾರೆ.

ತುಳುನಾಡಿನ ಬಿಲ್ಲವರಲ್ಲಿ, ಕೊರಗರಲ್ಲಿ, ಬಂಟರಲ್ಲಿ ಬಂಗೇರ ಎಂಬ ಗೋತ್ರವಿದೆ. ಅಲ್ಲಿ ಎಲ್ಲಾ ಕಡೆಯೂ ಈ ಬಳಿತಾಯಿಯಿಂದ ಮಕ್ಕಳಿಗೆ ಬರುತ್ತದೆ. ಭೂತಾಳ ಪಾಂಡ್ಯ ಮಾಡಿದ ಅಳಿಯಕಟ್ಟಿನಲ್ಲಿ 'ಬಂಗಾರನ್ನಾಯ' ಎಂಬ ಗೋತ್ರವಿದೆ. (ಶೀನಪ್ಪ ಹೆಗ್ಗಡೆ 1980)

**ಮೂಲರ್‌ಬಳಿ :**

ಇವರು ಸಂಖ್ಯೆಯಲ್ಲಿ ತುಂಬಾ ಕಡಿಮೆ ಇದ್ದರೂ (8·9 ಶೇ.) ಪ್ರಭಾವಶಾಲಿ ಬಳಿಯವರಾಗಿದ್ದಾರೆ. ಬಳಿಯ ಹೆಸರನ್ನು ಆಧರಿಸಿ, ತಾವು ಅತ್ಯಂತ ಪ್ರಾಚೀನ ಕುಲಸ್ಥರು ಎಂದು ಹೇಳಿ 'ಗೌಡರಿಗೆ ತಾವೇ ಮೂಲ' ಎಂದೂ ಈ ಬಳಿಯವರು ಹೇಳಿಕೊಳ್ಳುತ್ತಾರೆ. ಇನ್ನು ಕೆಲವು ಐತಿಹ್ಯಗಳ ಪ್ರಕಾರ ಇವರು ಗೌಡರೇ ಅಲ್ಲ. ಮೂಲ್ಯರ್ ಜಾತಿಯ (ಕುಂಬಾರ ಜಾತಿ) ಕೆಲವರು ಗೌಡಜಾತಿಗೆ ಸೇರಬಯಸಿದಾಗ ಶೃಂಗೇರಿ ಧರ್ಮಾಧಿಕಾರಿಗಳು ಅವರನ್ನು ಗೌಡ ಜಾತಿಗೆ ಸೇರಿಸಿ 'ಮೂಲ್ಯರ್' ಎಂಬ ಹೆಸರು ಕೊಟ್ಟರು. ಇದರ ಬಗ್ಗೆ ಖಚಿತವಾದ ಸಾಂಸ್ಕೃತಿಕ ಆಧಾರವೂ ಇಲ್ಲ.

ತುಳುನಾಡನ್ನು ಆಳಿದ ಅರಸು ಮನೆತನಗಳ ಪೈಕಿ ಬೈಲಂಗಡಿಯ ಮೂಲರು ತಕ್ಕಮಟ್ಟಿಗೆ ಪ್ರಭಾವಶಾಲಿ ಗಳಾಗಿದ್ದರು. ಇವರು ಸುಳ್ಯ ಪರಿಸರದ ಸುಳ್ಯ ಸೀಮೆಯ ಕಲ್ಮಡ್ಕದ ಭೂ ಒಡೆತನವನ್ನು ಹೊಂದಿದ್ದರು. (ಗಣಪತಿ ರಾವ್ ಐಗಳು 1923. 347, ಗುರುರಾಜ ಭಟ್, 1975.) ಈ ಅರಸು ಮನೆತನದ ಮೇಲೆ ಅಭಿಮಾನವಿಟ್ಟ ಗೌಡರ ಒಂದು ಗುಂಪು ತಾವು ಮೂಲರ ಬಳಿಯವರೆಂದು ಹೇಳಿಕೊಂಡಿರುವ ಸಾಧ್ಯತೆ ಇದೆ. ಸಾಮಾನ್ಯವಾಗಿ ಗೌಡಜಾತಿಯಲ್ಲಿ ದೂರ ಇಡಲಾಗಿರುವ ಗುಂಡನ ಬಳಿಯಿಂದ ಇವರು ಮದುವೆಯಾಗುತ್ತಾರೆಂಬುದು ವಿಶೇಷ. ಉಳಿದಂತೆ ನಂದ, ಬಂಗ ಮತ್ತು ಹೆಮ್ಮನ ಬಳಿಯಿಂದಲೂ ಸಂಬಂಧ ಏರ್ಪಡುತ್ತದೆ. ಈ ಬಳಿಯ ಹುಡುಗಿ ಯರನ್ನು ನಂದರ ಬಳಿಯವರು ಸಾಮಾನ್ಯವಾಗಿ ಮದುವೆಯಾಗುವುದಿಲ್ಲ, 'ಮೂಲಾರ್ ಬಳಿ ಗೂಡೆ ತಂದರೆ ಹಿರಿಯರಿಗೆ ಕೇಡು)

(ದೂಲಾರ್ ಬಳಿಯಿಂದ ಹುಡುಗಿಯನ್ನು ತಂದರೆ ಒರಿಯುವರಿಗೆ ಕೇಡು) ಎಂಬ ಮಾತೊಂದಿದೆ.

ಮೇಲೆ ವಿವರಿಸಲಾಗಿರುವ ನಾಲ್ಕು ಬಳಿಗಳು ತುಂಬಾ ಪ್ರಾಮುಖ್ಯವಾದ ಬಳಿಗಳು ಎನ್ನಲಾಗುತ್ತಿದೆ ಭೂತಗಳು ಈ ನಾಲ್ಕು ಬಳಿಯವರನ್ನೇ ಸದಾ ಕರೆಯುತ್ತವೆ. ಬಿಟ್ಟು ಗೌಡರಲ್ಲಿ ಶೇ. 58 ಜನ ಈ ನಾಲ್ಕುಬ ಯೊಳಗೆ ಇದ್ದಾರೆ, ಉಳಿದ ಎಂಟು ಬಳಿಯಲ್ಲಿ ಶೇ. 42ರಷ್ಟು ಜನ ಇದ್ದಾರೆ. "ನಂದರ ನಂದಾದೀಪ"; 'ಬಂಗಾರ ಬಾಳಿಕೆ'; 'ಹೆಮ್ಮನ ಹೇಳಿಕೆ'; 'ಮೂಲರನ ಮೂಲಸ್ಥಾನ' ಎಂಬ ನುಡಿಗಟ್ಟು ಆಯಾಯ ಬಳಿಯವರ ವೈಶಿಷ್ಟ ವನ್ನು ಸೂಚಿಸುವಂತಿದೆ. ಈ ನಾಲ್ಕು ಬಳಿಗಳು ಮೂಲದ್ದೇ ಎನ್ನಲು ಸಾಕಷ್ಟು ಆಧಾರಗಳಿಲ್ಲ. ವೈವಾಹಿ ಸಂಬಂಧಗಳು ಈ ನಾಲ್ಕು ಬಳಿಯೊಳಗೆ ಹೆಚ್ಚಾಗಿ ನಡೆಯುವುದನ್ನು ಗಮನಿಸಬಹುದು.

**ನಾಯರ್ ಬಳಿ :**

ನಾಯರ್ ಅಂದರೆ ತುಳುವಿನಲ್ಲಿ 'ನೇಗಿಲು' ಎಂದು ಅರ್ಥ. ನೇಗಿಲನ್ನು ಕುಲಲಾಂಛನವಾರಿಸಿಕೊಂಡದ್ ರಿಂದ ಈ ಹೆಸರು ಬಂತೋ ತಿಳಿಯದು. ಕೇರಳದಲ್ಲಿ ನಾಯರ್ ಎಂದು ಒಂದು ಜಾತಿ ಇದೆ. ಸಾಂಸ್ಕೃತಿಕವಾ ಅವರಿಗೂ ಗೌಡರಿಗೂ ಸಂಬಂಧವಿಲ್ಲ.

**ಚಾಽ್ಯರ ಬಳಿ**

ಬಟ್ಟೆ ಹೊಲಿಯುವವರನ್ನು 'ಚಾಲ್ಯರ್' ಎಂದೂ ತುಳುವರು ಕರೆಯುತ್ತಾರೆ. ಪೂರ್ವದಲ್ಲಿ ಬಟ ಹೊಲಿಯುವ ಮಂದಿ ಗೌಡ ಜಾತಿಗೆ ಸೇರಿ ಈ ಬಳಿಯನ್ನು ಸೃಷ್ಟಿಸಿಕೊಂಡರೋ ತಿಳಿಯದು.

**ಗೋಳಿ ಬಳಿ**

ಐಗೂರಿನಿಂದ ಬಂದು ಒಂದು ತಂಡ ಗೋಳಿಮರದಬುಡದಲ್ಲಿ ನೆಲೆನಿಂತದ್ದರಿಂದ. ಆ ಮನೆತನಕ್ಕೆ ಗೋ ಬಳಿ ಎಂಬ ಹೆಸರು ಬಂತೆಂಬ ಐತಿಹ್ಯ ಇದೆ. ಗೋಳಿ ಮರದ ಬುಡದಲ್ಲಿ ಅಸ್ಥಿಮಾಡಿ ನೆಲೆನಿಂತ ಜಾಗಕ್ಕೆ 'ಗೋ ಯಾಡಿ ಭೂಮಿ' ಎಂಬ ಹೆಸರು ಬಂದದ್ದನ್ನು ನೋಡಿದರೆ ಮೇಲಿನ ಐತಿಹ್ಯ ನಿಜವಿರಬೇಕು.

**ಗುಂಡನ ಬಳಿ**

ನಿಘಂಟಿನಲ್ಲಿ ಗುಂಡ ಎಂದರೆ ಸೇವಕ ಎಂಬ ಅರ್ಥವಿದೆ. (ಕಿಟ್ಟೆಲ್ : 1894, ಪು 552) ತುಳುವಿನ ಗುಂಡರ್ ಬಳಿ ಎಂದು ಕರೆಯುತ್ತಾರೆ.

ಈ ಗುಂಡನ ಬಳಿಯಲ್ಲ ಹಾಲು ಗುಂಡ ಮತ್ತು ಕುತ್ತಿ ಗುಂಡ ಎಂಬ ಎರಡು ಒಳ ಪ್ರಭೇದಗಳಿವೆಯೆಂದ ಹೇಳಲಾಗುತ್ತಿದುಅದರಲ್ಲಿ ಮೊದಲನೆಯದು ವಿವಾಹಕ್ಕೆ ಒಳ್ಳೆಯದೆಂದೂ. ಎರಡನೆಯದು ಮಾತ್ರ ಕೆಟ್ಟದ್ದು ಎಂದ ನಂಬಲಾಗುತ್ತಿದೆ. ಆದರೆ ವಾಸ್ತವವಾಗಿ ಈ ವ್ಯತ್ಯಾಸ ಇಲ್ಲ.

**ಕಬರ್ ಬಳಿ**

ಸುಳ್ಯ ಪರಿಸರದಲ್ಲಿರುವ ಒಂಬತು ಮನೆಗಳಲ್ಲಿ ಮಾತ್ರ ಈ ಬಳಿಯುವರಿದ್ದಾರೆ. ಆ ಮನೆತನಗಳಿಂದ

ಳ್ಳ ಕೊಡಿ, ಕೆದಂಬಾಡಿ, ಕಾನತ್ತಿಲ. ಬಳ್ಳಡ್ಕ ಕುದ್ಪಾಜೆ ಕ್ಯೊಗಾಜೆ, ಪರಿವಾರ.ಕುಡೆಕಲ್ಲು. ಈ ಬಳಿಯವರ ಗ್ಗೆ ಐತಿಹ್ಯವೊಂದು ಪ್ರಚಲಿತದಲ್ಲಿದೆ.

ಳಸನ್ನ ಬಳಿ

ತುಳುವಿನಲ್ಲಿ ಈ ಬಳಿಯನ್ನು ಬರ್ಸನ್ನ ಬರಿ ಎಂದು ಕರೆಯುತ್ತಾರೆ. ಬರ್ಸನ್ನ ಎಂದರೆ ಗೋಧಿ ಎಂದು ರ್ಥವಿದೆ. 'ಬಳಸನ್ನ' ಎಂದರೇ ಏನೆಂದು ತಿಳಿಯದು. ಗೋಧಿ ಬೆಳೆಸುವ ವೃತ್ತಿಯನು ಪ್ರಧಾನವಾಗಿ ಳ್ಳವರಾಗಿದ್ದೆರಬೇಕು. ಇದಲ್ಲದೆ ಚಿತ್ತರಬಳಿ, ಗೌಡರಬಳಿ ಎಂಬುದಾಗಿ ಇವೆ.

ವಿ. ಸೂ. : ಲೇಖನದಲ್ಲಿ 'ಗೌಡರು' ಎಂದು ಬಳಕೆಯಾದರೆ ಅದು ಸುಳ್ಯ ಪರಿಸರದ ಗೌಡ ಜನಾಂಗದವರು ಎಂಬ ಅರ್ಥದಲ್ಲಿ ಮಾತ್ರ.

ಸುಳ್ಯ ತಾಲೂಕಿನ ದೊಡ್ಡ ತೋಟ ಸಮೀಪದ ಕುರ್ತೋಡಿ ಮನೆತನದವರು. ನೆಲ್ಲೂರು ಕೆಮ್ರಾಜೆ ಗ್ರಾಮದ ಎಲಿ ಮಲೆ ಸಮೀಪದ ಕಜ್ಜೆ ಮನೆತನದವರು ಈ ಬಳಿಯವರು.

2 ಶ್ರೀ ಎಸ್. ಎಸ್. ವೆಂಕಟ್ರಮಣ ಗೌಡ (70 ವರ್ಷ) ಸೋಣಂಗೇರಿ, ಸುಳ್ಯ ತಾಲೂಕು ಇವರು ನೀಡಿದ ಮಾಹಿತಿ. ದಿನಾಂಕ 3–5–1982.

3 ಬೆಂಗಳೂರು ಜಿಲ್ಲೆಯ ಕನಕನಹಳ್ಳಿಯಲ್ಲಿ ಕ್ರಿ.ಶ. 1316 ರಲ್ಲಿ ಚೊಕ್ಕನಾಡುಗಳ ಸಮಸ್ತ ಗೌಡರು 18 ಸಮಯಗಳ ಸಹಿತಭೂಮಿದಾನ ಕೊಟ್ಟಿದ್ದನ್ನು ಕನಕನಹಳ್ಳಿ ಶಾಸನ ವಿವರಿಸುತ್ತದೆ.

4 ಮರಾಠಿಗಳಲ್ಲಿರುವ ಬಳಿಗಳ ಹೆಸರುಗಳಲ್ಲಿ ಕೆಲವು ಇಂತಿದೆ. ಸಾವಂತ. ಜೋವಾನ್ ಅಗ್ಗಿರಿಯೊ ಕಾವಡ್ಕರ್ ಗೂಟುನ್ಕರ್‌ಬೀಂದ್ರೊ, ಗರಡಿ, ಶಿಂದೊ, ಬಡೆಕಾರ್, ದುಂಪಾಳಿ,ಮಾಂಡೊವ್ಕಾರ್, ವನೂಂಜೋಳಿಕಾರ್, ಅದ್ಕಿಳಿಕಾರ್ ಪಿನಿಂಕಿಳಿಕಾರ್. ಬಾಂದ್ಯೊ, ಕಸೊಳ್ಕಾರ್ ನವಲ್ಯಾಂಬೆ, ಸಾಲ್ವಾಂಬೆ ಇತ್ಯಾದಿ. ಇಲ್ಲಿ ಕಾರ್ ಬಳಿ ಎಂಬರ್ಥದಲ್ಲಿ ಪ್ರಯೋಗವಾಗುತ್ತಿದೆ.

5 ಈ ಬಳಿಯವರು ಜಿಪುಣತನದಿಂದ ಕೂಡಿಟ್ಟ ಚರ್ಮದ ಹಣವನ್ನು ನಾಯಿ ತಿಂದು ಹಾಕಿತು ಎಂಬ ಕಥೆ ಬರುವ ರೂಢಿಯುಲ್ಲಿದೆ. 'ನನ್ನರಾಯನ ಬಣ್ಣಾರ ನಾಯಿ ನರಿ ತಿನ್ದು ಹೋಯಿತು' ಎಂಬ ಗಾದೆಯನ್ನು ಕಿಟ್ಟೆಲ್ ಕೂಡ ಉಲ್ಲೇಖಿಸಿದ್ದಾನೆ.

6 ಹೆರ್ಗಿಲ್ ಮೀನು : ನೋಡುವುದಕ್ಕೆ ಸಾಕಷ್ಟು ದೊಡ್ಡದಾಗಿರುವ ಮೀನು ಇದು. 'ದೇವರ ಮೀನು' ಎಂದೂ ಇದನ್ನು ಕರೆಯುತ್ತಾರೆ. ಪಿರಿದು–ಮೀನು–ಪೆಮ್ಮೀನ್ ಆಗಿ ಪೆರ್ಮಿನ್. ಪೆಮ್ಮನ ಹೆಮ್ಮನ ಆಗಿರಬಹುದೇ ಎಂಬ ಸಂಶಯ ಬರುತ್ತದೆ, ಈ ಮೀನನ್ನು ಕುಲಲಾಂಛನವಾಗಿ ಉಳ್ಳವರ ಗುಂಪು ಈ ಬಳಿ ಆಗಿರಬಹುದು.

7 'ಅಮರ ಸುಳ್ಯದ ದಂಗೆ'ಯಲ್ಲಿ ನೇತಾರನಾಗಿದ್ದ ರಾಮಗೌಡನೂ ಕೆದಂಬಾಡಿ ಮನೆಯವನಾಗಿದ್ದು ಕಬರ್ ಬಳಿಯವನು.

8 ಮಾಯಿಪ್ಪಾಡಿಯ ಲಿಂಗಾಯುತ ಅರಸರು ಕೇರಳದ ನಾಯರ್ ಹುಡುಗಿಯನ್ನು ಮದುವೆಯಾಗುತ್ತಾರೆ.

# ಗೌಡರ ವಿವಾಹ ಪದ್ಧತಿಯಲ್ಲಿ ತಾಯಿಯ ಪಾತ್ರ

—ಪೂಜಾರಿ ಮೊಣ್ಣಪ್ಪ
ಬೆಂಗಳೂರು

[ಗೌಡರ ವಿವಾಹಗಳಲ್ಲಿ ತಾಯಿಯ ಕಡೆಯ ಬಂಧುಗಳಿಗೆ ತುಂಬಾ ಗೌರವ ಸ್ಥಾನಮಾನಗಳಿವೆ ಆ ರೀತಿ ಗೌರವಕ್ಕೆ ಕಾರಣವೇನು—ಅದರ ಹಿಂದೆ ಇರುವ ಸನ್ನಿವೇಶವೇನೆಂಬುದನ್ನು ಈ ಲೇಖನವಲ್ಲಿ ವಿವರಿಸಲಾಗಿದೆ. ಸಂ]

ಭಾರತೀಯ ಸಂಸ್ಕೃತಿಯಲ್ಲಿ ತಾಯಿಯ ಪಾತ್ರ ಬಹಳ ಬಹಳ ದೊಡ್ಡದು, ಅದು ಕೌಟುಂಬಿಕ ಜೀವನ ದಲ್ಲಿ ಆಸ್ತಿಗಳ ಮೇಲೆ ಹಿಂದಿನ ಕಾಲದಲ್ಲಿ ತಂದೆಯಾ ಕರ್ತನಷ್ಟು ಒಡತನದ ಹಕ್ಕುಗಳು ಇಲ್ಲದಿದ್ದರೂ ಕೌಟುಂಬಿಕ ಜೀವನವಲ್ಲಿ ಮತ್ತು ಸಾಮಾಜಿಕ ಜೀವನದಲ್ಲಿ ಬಹು ಮುಖ್ಯ ಸ್ಥಾನವನ್ನು ಪಡೆದಿದ್ದಳು. ಆದುದರಿಂದಲೇ "ತೊಟ್ಟಿಲು ತೂಗಿದ ಕೈ ಸಾಮ್ರಾಜ್ಯವಾಳುವ ಕೈ. ಎಂಬ ಗಾದೆ ಇರುವುದು ಸರಿಯಾಗಿದೆ. ಭಾರತೀಯಲ್ಲಿ ತಾಯಿ ದೇವತೆ ಎಂದೂ ಭಾವನೆ ಇರುವುದಕ್ಕೆ ಅದೇಕಾರಣವಾಗಿದೆ.

ಭಾರತದಲ್ಲಿ ದೇವಿ, ಕಾಲಿ, ಶಕ್ತಿಯರನ್ನು ಆರ್ಯರು ಹಿಂದೂ ದೇಶಕ್ಕೆ ಬರುವುದಕ್ಕೆ ಮೊದಲೇ ನಾಗರೀಕತೆಯನ್ನು ಪಡೆದಿದ್ದ ಸಿಂಧೂ ನದಿಯ ಕಣಿವೆಯ ಹರಪ್ಪ ಮೊಹಂಜದರೋ ನಾಗರೀಕತೆಯಲ್ಲಿ ಕಾಣುತ್ತೇವೆ, ಈಗಲೂ ಬಂಗಾಳದಲ್ಲಿಯೂ ಕರ್ನಾಟಕದಲ್ಲಿಯೂ ಹಲ ಕೆಲವಡೆಗಳಲ್ಲಿ ಶಕ್ತಿ ದೇವಿ ಪೂಜೆ ಅಸ್ತಿತ್ವದಲ್ಲಿರುವುದು.

ಇದಕ್ಕೆ ಕಾರಣ ಇಷ್ಟೆ. ಮನುಷ್ಯನು ಜೀವನಕ್ಕಾಗಿ ಊರೂರು ಸುತ್ತಿ ಅಲೆದಾಡುತ್ತಿದ್ದಾಗ ತಂದೆ ಯಾದವನು ಮೃಗಗಳ ಬೇಟೆಗೋ ಹಣ್ಣು ಹಂಪಲು ಗಡ್ಡೆ ಗೆಣಸುಗಳನ್ನು ಹುಡುಕುತ್ತಲೋ ಅಲೆಯುತ್ತಿದ್ದಾಗ ಒಂದೇ ಸ್ಥಳದಲ್ಲಿ ನಿಂತುಮಕ್ಕಳನ್ನು ಪೋಷಿಸಿ ಬೆಳೆಸಿದವಳು ತಾಯಿ. ಆ ತಾಯಿಯ ಮಕ್ಕಳ ಭವಿಷ್ಯವನ್ನು ರೂಪಿಸಿದ ಶಿಲ್ಪ. ಅದುದರಿಂದಲೇ ತಾಯಿ ಎಂಬುವಳು ಗಂಡ ನೊಡನೆ ಕೂಡಿಯಜಮಾನಿಗೆ ನಡೆಸಿದಳು ಸಾದ್ಯವಾಯಿತು. ರುಗ್ವೇದ ಸೂಕ್ತಗಳಲ್ಲಿ ಈ ರೀತಿ ಇದೆ.

"ಇಮಾಂತ್ವಂ, ಇದ್ಧ್ರಮಿಢ್ವ : ಸುಪತ್ರ,
ಸುಭಗಾಂ, ಕೃಣು :
ದಶಾಸಾಂ ಪುತ್ರನೆ ಆದೇಡಿ,
ಪತಿಮೋಕಾ ದಶಂ ಕೃಧಿ :
ಸಂಪತ್ತಿನ ಮಳೆ ಸುರಿಸುವ ಓ ಇಂದ್ರ ಇವಳನ್ನು ಸುಪುತ್ರದತಿಯುನ್ನಾಗಿ, ಗಂಡನಿಗೆ ಅನುಕೂಲೆಯಾಗಿ

With best Compliments :

# from N. S. DEVIPRASAD



In Respect full Homage to our late Tomented father
Shri NANJANAMANE SANNAYYA PATEL
Who was President of
Gowda Vidya Sangha Dakshina Kannada
For a Decade

